# ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು ಮತ್ತು ಪರಿಣಾಮಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸುತ್ತಿರುವ ಪ್ರಬಂಧ)


ಸಂಶೋಧಕರು

ಎಂ. ಉಳ್ಳೇಶ್ವರಪ್ಪ

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬.


೨೦೦೭-೨೦೦೮

# ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು ಮತ್ತು ಪರಿಣಾಮಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಬಂಧ)

ಸಂಶೋಧಕರು
ಎಂ. ಉಳ್ಳೇಶ್ವರಪ್ಪ

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು




ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೭-೦೮

**ಸಂಶೋಧಕರ ಪ್ರಮಾಣಪತ್ರ**

ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ 'ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು ಮತ್ತು ಪರಿಣಾಮಗಳು' ಎಂಬ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಸಂಶೋಧನೆ ಮಾಡಿದುದರ ಪ್ರತಿಫಲ ಈ ಮಹಾಪ್ರಬಂಧ. ಈ ಮೊದಲು ಈ ಮಹಾ ಪ್ರಬಂಧವನ್ನು ಯಾವುದೇ ವಿಶ್ವ ವಿದ್ಯಾಲಯದ ಪದವಿ ಅಥವಾ ಡಿಪ್ಲೋಮಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೬-೧೧.೨೦೦೭

ಸ್ಥಳ : ಹಂಪಿ, ವಿದ್ಯಾರಣ್ಯ

ಸಂಶೋಧಕ

( ಎಂ. ಉಳ್ಳೇಶ್ವರಪ್ಪ )
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿ.ವಿ.ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಮಾರ್ಗದರ್ಶಕರ ದೃಢೀಕರಣಪತ್ರ

ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದಲ್ಲಿ ನನ್ನ ಮಾರ್ಗದರ್ಶನದಲ್ಲಿ ಎಂ.ಉಳ್ಳೇಶ್ವರಪ್ಪ ಅವರು 'ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು ಮತ್ತು ಪರಿಣಾಮಗಳು' ಎಂಬ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಸಂಶೋಧನೆ ಮಾಡಿದುದರ ಪ್ರತಿಫಲ ಈ ಮಹಾಪ್ರಬಂಧ. ಈ ಮೊದಲು ಈ ಮಹಾ ಪ್ರಬಂಧವನ್ನು ಯಾವುದೇ ವಿಶ್ವ ವಿದ್ಯಾಲಯದ ಪದವಿ ಅಥವಾ ಡಿಪ್ಲೋಮಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 22-11-2002

ಸ್ಥಳ : ವಿದ್ಯಾರಣ್ಯ

ಮಾರ್ಗದರ್ಶಕರು

ಬಿ ಮಂಜುನಾಥ

(ಡಾ.ಮಂಜುನಾಥ ಬೇವಿನಕಟ್ಟಿ)
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿ.ವಿ.ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಅ ರಿ ಕೆ

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿಯ ಅಧ್ಯಯನಕ್ಕಾಗಿ ಅವಕಾಶ ಕಲ್ಪಿಸಿದ ಹಿಂದಿನ ಉಪಕುಲಪತಿಗಳಾದ ಡಾ. ಬಿ. ಎ. ವಿವೇಕ ರೈ, ಪ್ರಭಾರಿ ಉಪ ಕುಲಪತಿಗಳಾಗಿದ್ದ ಡಾ. ಕೆ.ವಿ. ನಾರಾಯಣ ಪ್ರಸ್ತುತ ಪ್ರಭಾರಿ ಉಪ ಕುಲಪತಿಗಳಾಗಿರುವ ಡಾ. ಹಿ.ಚಿ. ಬೋರಲಿಂಗಯ್ಯ ಹಿಂದಿನ ಕುಲಸಚಿವರಾಗಿದ್ದ ಡಾ. ಕರೀಗೌಡ ಬೀಚನಹಳ್ಳಿ, ಪ್ರಸ್ತುತ ಕುಲಸಚಿವರಾದ ವಿ.ಶಂಕರ್, ಅಧ್ಯಯನಾಂಗದ ಹಿಂದಿನ ನಿರ್ದೇಶಕರಾಗಿದ್ದ ಡಾ.ಟಿ.ಆರ್.ಚಂದ್ರಶೇಖರ ಹಾಗೂ ಇಂದಿನ ನಿರ್ದೇಶಕರಾದ ಡಾ.ಪಾಂಡುರಂಗ ಬಾಬು ಅವರುಗಳಿಗೆ ಕೃತಜ್ಞತೆಗಳು.

ನನ್ನಲ್ಲಿ ಸಂಶೋಧನೆಯ ಬಗೆಗಿನ ಆಸಕ್ತಿಯನ್ನು ಗುರುತಿಸಿ ಮೊದಲಿನಿಂದಲೂ ಸಾಂಘಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದ ನನ್ನನ್ನು ಸಾಂಘಿಕ ಪ್ರವೃತ್ತಿಗಳಿಗೆ ಸಂಬಂಧಪಟ್ಟ ಅಧ್ಯಯನಕ್ಕೆ ಪ್ರೇರೇಪಿಸಿದ ನನ್ನ ಆತ್ಮೀಯ ಗುರುಗಳೂ ಹಾಗೂ ಮಾರ್ಗದರ್ಶಕರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ, ಜಾನಪದ ವಿಭಾಗದ ಪ್ರಾಧ್ಯಾಪಕರಾದ ಡಾ. ಸ.ಚಿ. ರಮೇಶ್, ಅಧ್ಯಾಪಕರಾದ ಡಾ. ಮೊಗಳ್ಳಿ ಗಣೇಶ್, ವಿಭಾಗದ ಮುಖ್ಯಸ್ಥರಾದ ಆತ್ಮೀಯ ಡಾ. ಹೆಬ್ಬಾಲೆ ಕೆ.ನಾಗೇಶ್, ಆತ್ಮೀಯ ಗುರುಗಳಾದ ಡಾ.ಸಿ.ಟಿ. ಗುರುಪ್ರಸಾದ್, ಡಾ. ಹರಿಶ್ಚಂದ್ರ ದಿಗ್ಸಂಗೀಕರ್, ಮಾನವ ಶಾಸ್ತ್ರ ವಿಭಾಗದ ಅಧ್ಯಾಪಕರಾದ ಡಾ. ತಾರಿಹಳ್ಳಿ ಹನುಮಂತಪ್ಪ, ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ತರಾದ ಡಾ. ಚಲುವರಾಜು, ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ರವೀಂದ್ರ, ಸಾಹಿತ್ಯ ಅಧ್ಯಯನ ವಿಭಾಗದ ಪ್ರವಾಚಕರಾದ ಡಾ. ವೆಂಕಟೇಶ್ ಇಂದ್ವಾಡಿ, ಜಾನಪದ ವಿಭಾಗದ ಸಿಬ್ಬಂದಿಯವರಾದ ವಿರುಪಾಕ್ಷಯ್ಯ, ಬಸವರಾಜು.ಸಿ ಮತ್ತು ನಬಿ ಇವರುಗಳಿಗೆ ನನ್ನ ಕೃತಜ್ಞತೆಗಳು.

ನನ್ನ ಅಧ್ಯಯನದ ಕಾಲಾವಧಿಯಲ್ಲಿ ಸೂಕ್ತ ಚರ್ಚೆ ಹಾಗೂ ಬರವಣಿಗೆಯಲ್ಲಿ ಸಹಕರಿಸಿದ ನನ್ನ ಸಹಪಾಠಿಗಳಾದ ಯಮನೂರಪ್ಪ ಅಣ್ಣಿಗೇರಿ, ಡಾ. ಲಕ್ಷ್ಮಿದೇವಿ, ಡಾ. ತಾರಾಮತಿ.ಬಿ, ಕೃಷ್ಣವೇಣಿ. ಆರ್, ಹೆಚ್.ಎಸ್.ಜಗದೀಶ್‌ಕುಮಾರ್, ಡಾ.ಎರ್ರಿಸ್ವಾಮಿ, ಸೋಮಶೇಖರ್, ಡಾ. ಯು.ಮಲ್ಲಿಕಾರ್ಜುನ, ಬಸವರಾಜು, ಹೊಳಲಯ್ಯ, ಹೆಚ್.ಎಸ್. ಗುರುಪ್ರಸಾದ್ ಮೊದಲಾದವರಿಗೆ ನನ್ನ ಕೃತಜ್ಞತೆಗಳು.

ನನ್ನ ವಿದ್ಯಾಭ್ಯಾಸದ ಸಕಲ ಜವಾಬ್ದಾರಿ ಹೊತ್ತ ಕುಟುಂಬದ ಸದಸ್ಯರಿಗೂ, ಸಮಸ್ತ ಬಂದು - ಮಿತ್ರರಿಗೂ ಕ್ಷೇತ್ರ ಕಾರ್ಯದಲ್ಲಿ ಸೂಕ್ತ ಮಾಹಿತಿಗಳನ್ನು ನೀಡಿದ ಹೊಸಪೇಟೆ ತಾಲೂಕಿನ ದುಡಿಯುವ ಜನ ವಿಭಾಗಗಳ ಸಮಸ್ತ ಪ್ರತಿನಿಧಿಗಳಿಗೂ ಹಾಗೂ ಸೂಕ್ತ ಸಲಹೆ ಸೂಚನೆ ನೀಡಿದ ನನ್ನ ಸಾಂಘಿಕ ಚಟುವಟಿಕೆಗಳ ಸಹಪಾಠಿಗಳಾದ ಡಾ.ಬಂಜೆಗೆರೆ ಜಯಪ್ರಕಾಶ್, ಎಸ್.ವೈ.ಗುರುಶಾಂತ, ಬಿ.ತಾಯಪ್ಪ ನಾಯಕ, ಎಂ.ಜಂಬಯ್ಯನಾಯಕ, ಡಿ.ವೆಂಕಟರಮಣ, ಎ.ಕರುಣಾನಿಧಿ, ಆತ್ಮೀಯ ಗುರುಗಳಾದ ಎಸ್.ಎಸ್.ಹಿರೇಮಠ, ಗುಡಿಹಳ್ಳಿನಾಗರಾಜ, ಪಿ.ಎಸ್.ಸಿದ್ದೇಶ್ವರ, ಪಿ.ಮಲ್ಲಿನಾಥ ಮೊದಲಾದ ಎಲ್ಲಾ ಸ್ನೇಹಿತರಿಗೆ ಕೃತಜ್ಞತೆಗಳು. ಅಕ್ಷರ ಸಂಯೋಜಿಸಿದ ಹೊಸಪೇಟೆ ನಗರದ ನಾಗರಾಜ ಕಂಪ್ಯೂಟರ್ ಬಳಗಕ್ಕೂ ಹಾಗೂ ಬೈಂಡ್ ಮಾಡಿಕೊಟ್ಟ ಕ್ರಿಯೇಟರ್ಸ್ ಅವರುಗಳಿಗೆ ನನ್ನ ಕೃತಜ್ಞತೆಗಳು.

➢ **ಉಳ್ಳೇಶ್ವರಪ್ಪ. ಎಂ**

# ಪರಿವಿಡಿ

# ಅಧ್ಯಾಯ-೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧ : ಪ್ರಸ್ತಾವನೆ :

ಮಾನವನು ಮೂಲತಃ ಸಂಘಜೀವಿ. ಒಂದು ನಿರ್ಧಿಷ್ಠ ಭೂ ಪ್ರದೇಶ, ವಾತಾವರಣದಲ್ಲಿ ನೆಲೆಸಿ ತನ್ನ ದಿನನಿತ್ಯದ ಅವಶ್ಯಕತೆಗಳಾದ ಆಹಾರ, ಬಟ್ಟೆ, ವಸತಿ ಮೊದಲಾದವುಗಳನ್ನು ಪಡೆದುಕೊಳ್ಳಲು ಸಮುದಾಯ, ಗುಂಪು ನಿರ್ಮಿಸಿಕೊಂಡನು. ನೆರೆ ಹೊರೆಯವರ ಸಹಕಾರವಿಲ್ಲದೇ ತನ್ನ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಿಲ್ಲ ಎಂಬುದನ್ನು ಮನಗಂಡು ತನ್ನಂತೇ ಇರುವ ಇತರರೊಂದಿಗೆ ಸೇರಿ ಜೀವಿಸಲು ಆರಂಭಿಸಿದನು. ಒಂದು ನಿರ್ಧಿಷ್ಠ ಸಮೂಹವನ್ನು ಹೊರತುಪಡಿಸಿ ಮಾನವ ಬದುಕಲಾರ. ಅದೇ ರೀತಿ ಮಾನವನು ಎಂದಿನಿಂದ ಗುಂಪುಗೂಡಿ ಬದುಕಲು ಆರಂಭಿಸಿದನೋ ಆವತ್ತಿನಿಂದಲೇ ಬೇಡಿಕೆಗಳ ಈಡೇರಿಕೆಯ ಸಂಘರ್ಷ ಏರ್ಪಟ್ಟಿತು. ತನ್ನ ವೈಯಕ್ತಿಕ, ಗುಂಪಿನ ಹಿತಾಸಕ್ತಿಗಳಿಗೆ ವಿರುದ್ಧವಾಗಿರುವ ಇತರ ವ್ಯಕ್ತಿ, ಗುಂಪುಗಳ ವಿರುದ್ಧ ನಿರಂತರ ಹೋರಾಡುತ್ತಲೇ ಬಂದಿರುವುದನುರನ ಕಾಣುತ್ತೇವೆ. ಆದ್ದರಿಂದಲೇ ಕಾಲಾನುಕ್ರಮದಲ್ಲಿ ಜಗಳ ಕದನ, ಕಾಳಗ, ಯುದ್ಧಗಳು ನಡೆದಿರುವುದನ್ನು ಗಮನಿಸಬಹುದು.

ಭಾರತ ದೇಶ ಒಂದು ಸಂಕೀರ್ಣವಾದ ಮತ್ತು ಉಜ್ವಲ ಚರಿತ್ರೆ, ಪರಂಪರೆ ಇರುವ ದೇಶ. ವಿವಿಧ ಭಾಷೆ, ಸಂಸ್ಕೃತಿ, ವೈಚಾರಿಕತೆ, ವೈವಿದ್ಯತೆಯಲ್ಲಿ ಏಕತೆಯನ್ನು ಕಾಪಾಡಿಕೊಂಡಿರುವ, ಐಕ್ಯತೆಯನ್ನು ಸಮಷ್ಠಿಯ ಪ್ರಜ್ಞೆಯ ಮಿತಿಯಲ್ಲಿ ಅಪಾರ ಜನಸಂಖ್ಯೆ, ಜಾತಿ, ವರ್ಗ, ಕೋಮುಗಳನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡಿದೆ. ಚಾರಿತ್ರಿಕ ಬೆಳವಣಿಗೆಯನ್ನು ಗಮನಿಸಿದರೆ ಭಾರತ ದೇಶ ಬೇರೆಲ್ಲಾ ರಾಷ್ಟ್ರಗಳಿಗಿಂತ ಭಿನ್ನವಾಗಿ ನಿಲ್ಲಬಲ್ಲದು. ಸ್ವಾತಂತ್ರ್ಯ ಹೋರಾಟದಲ್ಲಿ ವಸಾಹತು ಶಾಹಿಯ ವಿರುದ್ಧ ಹೋರಾಡಿದ ಇತಿಹಾಸದ ನೆನಪುಗಳು ನಮ್ಮ ಮುಂದಿವೆ. ಜಾತಿ, ಪಂಗಡ, ವರ್ಗ, ವರ್ಣ, ಬುಡಕಟ್ಟು, ಜನಾಂಗ, ಭಾಷೆ, ಧರ್ಮ ಹೆಸರಿನ ಹೋರಾಟಗಳು ಇಂದು ಭಾರತದ ಪ್ರಜಾಪ್ರಭುತ್ವದ ಮಾದರಿಯನ್ನು ಮತ್ತು ಜಾತ್ಯತೀತ, ಸಮಾಜವಾದಿ, ಸಾರ್ವಭೌಮತ್ವದ ಗಣರಾಜ್ಯವನ್ನು ಗೇಲಿ ಮಾಡಿದಂತೆ ಕಾಣುತ್ತವೆ. ಇದರಿಂದ ಶೇ. ೭೦ ರಷ್ಟು ಜನರು ಇನ್ನು ಬಡವರಾಗಿಯೇ ಇದ್ದಾರೆ. ದೇಶದ ಪ್ರಗತಿ ಎಂದರೆ ನಗರಗಳ ಪ್ರಗತಿ ಎಂದೋ ಅಥವಾ ಭಾರತೀಯರ ಪ್ರಗತಿ ಎಂದರೆ ನಗರ ವಾಸಿಗಳ ಪ್ರಗತಿ ಎಂದೋ ಭಾವಿಸಲಾಗಿರುವುದು, ಈ ದೇಶ

ಹಿಂದುಳಿಯಲು ಒಂದು ಕಾರಣ. ಶೇ. ೭೩ ರಷ್ಟು ಜನರು ಹಳ್ಳಿಗಳಲ್ಲಿಯೇ, ವ್ಯವಸಾಯದಿಂದಲೇ ಬದುಕುತ್ತಿರುವುದು ಸ್ವತಂತ್ರ್ಯ ಭಾರತದ ಸರಕಾರ ಗ್ರಾಮೀಣ ಪ್ರಗತಿಗೆ, ಗ್ರಾಮೀಣ ಸ್ವರಾಜ್ಯಕ್ಕೆ ಹೆಚ್ಚು ಮಹತ್ವ ಕೊಡಬೇಕಾಗಿತ್ತು. ಆದರೆ ಈ ರೀತಿಯ ಮಹತ್ವವಿಲ್ಲದಿರುವಿಕೆ ಗ್ರಾಮುಗಳಲ್ಲಿ ವಾಸಿಸುವ ಜನರು ಸಂಘಟನೆಗೊಳ್ಳುವುದು ಅನಿವಾರ್ಯವಾಗಿದೆ. ಸಮಗ್ರವಾಗಿ ಭಾರತದ ಬೇರೆ ಬೇರೆ ಕಾಲಘಟ್ಟದಲ್ಲಿ ಬೇರೆ ಬೇರೆ ಉದ್ದೇಶ, ಸಿದ್ಧಾಂತ, ಕಾರ್ಯಕ್ರಮದ ಆಧಾರದ ಮೇಲೆ ದೇಶಮಟ್ಟದಲ್ಲಿ ರಾಜ್ಯಗಳ ಮಟ್ಟದಲ್ಲಿ, ಜಿಲ್ಲಾ ತಾಲೂಕುಗಳ ಮಟ್ಟದಲ್ಲಿ ಈ ರೀತಿಯಲ್ಲಿ ವಿಮ ಸಾಂಘಿಕ ಪ್ರಯತ್ನಗಳು ನಡೆದಿರುವ ಪರಂಪರೆ ನಮ್ಮ ಮುಂದಿದೆ ಮುಕ್ಕಾಲು ಭಾಗ ಹಳ್ಳಿಗಳಲ್ಲಿಯೇ ಜನರು ವಾಸಿಸುತ್ತಿದ್ದರೂ ನಗರಗಳ ವ್ಯಾಮೋಹವೇನೂ ಕಡಿಮೆಯಾಗಿಲ್ಲ. ನಗರಗಳ ವಲಸೆ ನಿರಂತರವಾಗಿದ್ದಾಗಲೂ ನಗರಗಳಲ್ಲಿ ಉದ್ಯೋಗಾವಕಾಶಗಳು ಸಾಕಷ್ಟು ಪ್ರಮಾಣದಲ್ಲಿ ಇಲ್ಲ, ನಗರಗಳಲ್ಲಿರುವ ಕೆಲವೇ ಜನರು ಮಾತ್ರ ವಿಲಾಸೀ ಜೀವನಕ್ಕೆ ಮಾರು ಹೋಗಿದ್ದಾರೆ.

ನಮ್ಮ ದೇಶದಲ್ಲಿ ಸಾಮೂಹಿಕ ಕ್ರಿಯಾಶೀಲತೆ ಕಂಡದ್ದು, ಇಬ್ಬರುಮಹಾನ್ ನಾಯಕರ ನೇತೃತ್ವದಲ್ಲಿ. ಗಾಂಧಿ ಮತ್ತು ಜೆ.ಪಿ. ಯವರ ವ್ಯಕ್ತಿಗತ ಬದುಕಿನಲ್ಲಿ ಇಂಥಹ ಸಾಮೂಹಿಕ ಕ್ರಿಯಾಶೀಲತೆಯನ್ನು ಗಮನಿಸಬಹುದು. ಮಹಾತ್ಮ ಗಾಂಧಿಯವರು ಭಾರತಕ್ಕೆ ಸ್ವಾತಂತ್ರ್ಯ ತಂದು ಕೊಡುವ ಇರಾದೆಯನ್ನು ಇಟ್ಟುಕೊಂಡವರು. ಇದೇ ಸಂದರ್ಭದಲ್ಲಿ ಸಮಾಜ ಬದಲಾವಣೆಯ ವೈಚಾರಿಕತೆ ಅವರ ಹಿನ್ನೆಲೆಗಿತ್ತು ಎಂಬುದೂ ಸಹಾ ನಿಜ. ಮಹಾತ್ಮ ಗಾಂಧೀಜಿಯವರು ಕ್ರಾಂತಿ ನೆಲೆಗಿಂತ ಭಿನ್ನ ನೆಲೆ ಹೊಂದಿದ್ದವರು. ಅವರು ನಮ್ಮ ದೇಶದ ಬದುಕಿನ ಜಡಬೇರುಗಳನ್ನು ಹಿಡಿದು ಅಲ್ಲಾಡಿಸುವ, ಅವುಗಳಲ್ಲಿ ನಡುಕ ಹುಟ್ಟಿಸುವ ಕ್ರಿಯೆಗೆ ತೊಡಗಲಿಲ್ಲವೆಂಬುದು ಬಹಳ ಮುಖ್ಯ ಪರಕೀಯರ ವಿರುದ್ಧ ಮಹಾತ್ಮ ಗಾಂಧೀಜಿಯವರು ಅನುಸರಿಸಿದ ಸಾಂಘಿಕ ಅಹಿಂಸಾತ್ಮಕ ಚಳುವಳಿ ಸಹಜವಾಗಿ ದೇಶದ ಜನರಲ್ಲಿ ಸಾಮೂಹಿಕ ಕ್ರಿಯಾಶೀಲತೆ ಮೂಡಿಸಿತು.

ಜಯ ಪ್ರಕಾಶ ನಾರಾಯಣರವರ ಸಾಮೂಹಿಕ ಕ್ರಿಯಾಶೀಲತೆ ಅವರ ಸಂಪೂರ್ಣ ಕ್ರಾಂತಿ ಅಥವಾ ಸರ್ವೋದಯ ಚಳಿವಳಿ ನಮ್ಮ ಪ್ರಮುಖ ಸಾಂಘಿಕ ನೆಲೆಯಾಗಿದೆ. ಜೆ.ಪಿ. ಯವರು ನಡೆಸಿದ ಸಾಂಘಿಕ ಹೋರಾಟ ಸ್ವದೇಶಿ ಶೋಷಕರ ವಿರುದ್ಧವಾದುದು. ಇವರು ನಡೆಸಿದ ಹೋರಾಟದ ಸಂದರ್ಭದಲ್ಲಿ ದೇಶ ಆದಾಗಲೇ ಸ್ವಾತಂತ್ರ್ಯ ಪಡೆದಾಗಿತ್ತು. ಜಾತೀಯತೆ, ಅಸ್ಪೃಶ್ಯತೆ, ವರ್ಗಭೇದ ಮುಂತಾದ ಶೋಷಣೆಯ ನೆಲೆಗಳ ವಿರುದ್ಧದ ಸಾಮೂಹಿಕ ಕ್ರಿಯಾಶೀಲತೆ ಸಾಂಘಿಕ ಪ್ರಯತ್ನಗಳು ಆರಂಭವಾಗಿದ್ದನ್ನು ಇವರ ಮುಂದಾಳತ್ವದ ಹೋರಾಟಗಳಲ್ಲಿ ಕಾಣಬಹುದು.

ನಮ್ಮ ದೇಶಕ್ಕೆ ಸ್ವಾತಂತ್ರ್ಯವೇನೋ ದೊರೆಯಿತು. ಕೇವಲ ವ್ಯಾಪಾರಕ್ಕಾಗಿ ದೇಶಕ್ಕೆ ಬಂದ ಬ್ರಿಟೀಷರು ಸುಮಾರು ಎರಡು ನೂರು ವರ್ಷಗಳ ಕಾಲ ನಮ್ಮ ದೇಶವನ್ನು ಎಲ್ಲಾ ರೀತಿಯಿಂದ ಆಳಿದರು. ನಮ್ಮ ದೇಶದ ಪ್ರಾಂತಗಳ ನಡುವೆ, ಸಾಮ್ರಾಜ್ಯಗಳ ನಡುವೆ, ಒಡೆದು ಆಳುವ ನೀತಿ ಅನುಸರಿಸುವ

ಮೂಲಕ ತಮ್ಮ ವ್ಯಾಪಾರ ವಹಿವಾಟಿನ ಹಿಡಿತವನ್ನು ಗಟ್ಟಿಗೊಳಿಸಿದರು. ದೇಶದ ರಕ್ಷಣೆಗಾಗಿ ಒಂದುಗೂಡಿ ಬ್ರಿಟೀಷರ ವಿರುದ್ಧ ಮಹಾತ್ಮ ಗಾಂಧೀಜಿಯವರ ಸಮರ್ಥ ಮುಂದಾಳತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಸಾಮೂಹಿಕ ಧ್ವನಿ ಬ್ರೀಟಿಷರ ಭಾರತ ಬಿಟ್ಟು ತೊಲಗಿ ಎಂಬ ಘೋಷಣೆಯೊಂದಿಗೆ ಯಶಸ್ವಿ ಹೋರಾಟದ ಫಲವಾಗಿ ಭಾರತಕ್ಕೆ ಸ್ವಾತಂತ್ರ್ಯ ೧೯೪೭ ರಲ್ಲಿ ಲಭಿಸಿತು.

ಹೊಸದಾಗಿ ಸ್ವಾತಂತ್ರ್ಯ ಪಡೆದ ದೇಶದ ಮುಂದೆ ಹಸಿರು ತೋರಣ, ಚಪ್ಪರ, ನಿದ್ದೆ ಭರಿಸುವ ನಾಗಸ್ವರಗಳ ಸಮೂಹವಷ್ಟೇ ಇದ್ದಿರಲಿಲ್ಲ. ಹಸಿದ ಹೊಟ್ಟೆ, ಮೂಳೆ ಮೈ, ಕಷ್ಟಪಟ್ಟು ನಿಂತ ಕೊಂಪೆಗಳು, ಹೊಗೆನಿಂತ ಕಾರ್ಖಾನೆಯ ಕೊಳವೆಗಳು, ಸಮೃದ್ಧಿಯನ್ನು ಧಾರೆಯೆರೆಯಲು ಭೂಗರ್ಭದಲ್ಲಿ ಅಡಗಿಕುಳಿತು ಕುಂಭಕರ್ಣ ನಿದ್ದೆಗೆ ಸಂದ ಸಂಪನ್ಮೂಲಗಳು, ಸಂಭ್ರಮಾವೇಶದಲ್ಲಿ ಎತ್ತೆಂದರತ್ತ ಹರಿಯುವ ನದಿಗಳು, ಹೀಗೆ ಒಂದಲ್ಲ ಅನೇಕ ಪ್ರೇರಕಗಳು ಕಣ್ಣಿಗೆ ಬೀಳುತ್ತವೆ. ಬ್ರಿಟೀಷರ ಕಾಲದಲ್ಲಿ ಆರಂಭವಾದ ಭೂಕಂದಾಯ ಸಂಗ್ರಹಣೆಗೆ ಜಮೀನುಗಳನ್ನು ಪ್ಲಾಟುಗಳಾಗಿ ವಿಂಗಡಿಸಿದ್ದು ಇದರ ಸೌಲಭ್ಯ ಪಡೆದ ಅಧಿಕಾರಿ ವರ್ಗ ಅವರೇ ಜಮೀನ್ದಾರರಾದರು. ಇದು ಬರುಬರುತ್ತಾ ಜಮೀನ್ದಾರರು ಮತ್ತು ಗೇಣಿದಾರರು ಎಂಬ ಭೇದ ಬೆಳೆದು ಬಲಿಯಿತು. ಇವೆಲ್ಲಾ ಸ್ಥಿತಿಗತಿಗಳನ್ನು ಜಯಿಸಿ ಈ ದೇಶದ ಬಹುಪಾಲು ಜನರಾದ ಬಡವರ ಉದ್ಧಾರಕ್ಕೆ ಟೊಂಕ ಕಟ್ಟಿ ಸಮೃದ್ಧ ರಾಷ್ಟ್ರ ನಿರ್ಮಾಣ ಸಾಧ್ಯವಾಗಬೇಕಾಗಿತ್ತು.

ಆದರೆ ನಿರುದ್ಯೋಗ, ಬಡತನ, ದಾರಿದ್ರ್ಯ, ಅನಕ್ಷರತೆ, ಜಾತೀಯತೆ, ಅಸ್ಪೃಶ್ಯತೆ, ಅಸಮಾನತೆಯಂತಹ ಜ್ವಲಂತ ಸಮಸ್ಯೆಗಳನ್ನು ಬಗೆಹರಿಸಲು ಈವರೆಗೂ ಸಾಧ್ಯವಾಗದೇ ಇರುವುದು ದುರಂತವೇ ಸರಿ. ಈ ಸಮಸ್ಯೆಗಳ ನಿವಾರಣೆಯ ಜವಾಬ್ದಾರಿ ಸ್ವಾತಂತ್ರ್ಯ ಭಾರತದ ನಮ್ಮ ಸರಕಾರಗಳ ಮೇಲೆ ಬಿತ್ತು. ಈ ನಿಟ್ಟಿನಲ್ಲಿ ಪಂಚವಾರ್ಷಿಕ ಯೋಜನೆಗಳೂ ಸೇರಿದಂತೆ ಸರಕಾರದಿಂದ ಅನೇಕ ಯೋಜನೆಗಳು ಕಾರ್ಯಗತಗೊಂಡವು. ವಿಶೇಷವಾಗಿ ಗ್ರಾಮೀಣ ಅಭಿವೃದ್ಧಿಯ ಹೆಸರಿನಲ್ಲಿ ನೂರಾರು ಯೋಜನೆಗಳು ರೂಪಗೊಂಡವು. ಆದರೆ ನಿಜವಾಗಲೂ ಆಗಿದ್ದೇನು ? ಈ ಯೋಜನೆಗಳು ಜನ ಸಾಮಾನ್ಯರಿಗೆ ನಿಜವಾಗಲೂ ತಲುಪಿವೆಯೆ? ಇವುಗಳ ಬಗ್ಗೆ ಕೊಂಚ ಯೋಚಿಸಿದರೆ ಅತ್ಯಂತ ನಿರಾಶಾದಾಯಕ ಪರಿಸ್ಥಿತಿ ನಮ್ಮನ್ನು ಕಾಡುತ್ತಿದೆ. ಈ ಯೋಜನೆಗಳು ಜನರನ್ನು ಆದರಲ್ಲೂ ಗ್ರಾಮೀಣ ಜನತೆಯನ್ನು ಮುಟ್ಟಲು ಸಂಪೂರ್ಣ ವಿಫಲವಾಗಿರುವದನ್ನು ಗಮನಿಸಬಹುದು. ಸ್ವಜನಪಕ್ಷಪಾತ, ವ್ಯಾಪಕ ಭ್ರಷ್ಟಾಚಾರ, ಅದಕ್ಷತೆಯಿಂದಾಗಿ ಅಭಿವೃದ್ಧಿ ಯೋಜನೆಗಳು ಯಾವ ಜನ ಸಮುದಾಯವನ್ನು ತಲುಪಬೇಕಿತ್ತೋ ಅವರನ್ನು ತಲುಪಲು ಸಾಧ್ಯವಾಗಿಲ್ಲ. ಸಮಾಜದಲ್ಲಿ ಶೋಷಣೆಗೊಳಗಾದವರ, ಕೃಷಿಕರ, ಕೃಷಿಕೂಲಿಕಾರರ ಮತ್ತು ಕಾರ್ಮಿಕರ ಹಿತಾಸಕ್ತಿಯನ್ನು ಕಡೆಗಣಿಸಲಾಯಿತು. ಎಲ್ಲರ ಹಿತ ಕಾಪಾಡುವ ಉದ್ದೇಶಗಳ ಈಡೇರಿಕೆಗೆ ನಿರ್ದಿಷ್ಟ ಗುಂಪು ಸಾಂಘಿಕ ನೆಲೆಯಲ್ಲಿ ತೊಡಗುವುದು ಅನಿವಾರ್ಯವಾಯಿತು. ತಮ್ಮ ವ್ಯಕ್ತಿಗತ ಬೇಡಿಕೆಗಳನ್ನು ಬದಿಗೊತ್ತಿ ಸಮಾಜದಲ್ಲಿ ಎಲ್ಲರ ಸಾಮಾನ್ಯ ಬೇಡಿಕೆ ಮತ್ತು ಸಾಧನೆಗೆ ಒಗ್ಗೂಡುವಂತಾಯಿತು.

ಆದರೆ ಆಗಿದ್ದೇನು ಶೇ. ೪೦ ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಅಂದರೆ ಇವರ ಆದಾಯ ಎರಡು ಹೊತ್ತು ಊಟಕ್ಕೂ ಸಾಕಾಗುವುದಿಲ್ಲ. ಇನ್ನು ಅನೇಕರಿಗೆ ಹೊಟ್ಟೆ ಬಟ್ಟೆಗೆ ಹೇಗೋ ಕಷ್ಟಬಿದ್ದು ಹೊಂದಿಸಿ ಕೊಳ್ಳುವ ಸ್ಥಿತಿ. ಇಂಥಹ ಪರಿಸ್ಥಿತಿಯಲ್ಲಿ ಇಲ್ಲದವನು ಮತ್ತಷ್ಟು ಇಲ್ಲದವನಾಗುತ್ತಾನೆ. ಇದ್ದವನು ಮತ್ತಷ್ಟು ಬೆಳೆಯುತ್ತಾನೆ. ತಮ್ಮ ಆಸ್ಥಿತ್ವಕ್ಕೆ ಹೋರಾಟ ನಡೆಸುವ ಸ್ಥಿತಿಯಲ್ಲಿರುವ ಇಲ್ಲದವರನ್ನು ಇದ್ದವರು ಶೋಷಣೆ ಮಾಡಲು ಇದಕ್ಕೆ ಒಳ್ಳೆಯ ಅವಕಾಶ ಇನ್ನೇನು ಬೇಕು ? ಕೃಷಿಯನ್ನೆ ಅವಲಂಬಿಸಿ ಬದುಕುತ್ತಿರುವ ರೈತರ ಶೋಷಣೆ ನಮ್ಮ ದೇಶದಲ್ಲಿ ಮೊದಲಿನಿಂದಲೂ ಹೆಚ್ಚಾಗಿದೆ. M.V. Pylee ಅವರು ತಮ್ಮ Constitutional Government of India ಎಂಬ ಗ್ರಂಥದಲ್ಲಿ ಹೇಳಿರುವ ಮಾತುಗಳು ಗಮನ ಸೆಳೆಯುತ್ತವೆ. If the ago million or so people who depend upon land for their substances are satisfied, Indian democracy will loan find its roots on firm ground ''ಅಂದರೆ ಪ್ರಜಾಪ್ರಭುತ್ವದ ಉಳಿವು ಈ ದೇಶದ, ಹಳ್ಳಿಗರ ಅರ್ಥಾತ್ ರೈತರ ಮೇಲೆ ಅವಲಂಬಿತವಾಗಿರುವುದನ್ನು ಗಮನಿಸಬೇಕು. ಪ್ರಜಾಪ್ರಭುತ್ವ ಉಳಿಯುವುದು ಕೇವಲ ಶಾಸನ ಸಭೆ, ಲೋಕ ಸಭೆಗಳ ಹಂತದಲ್ಲಿಲ್ಲ. ಕೆಳಕ್ಕೆದೊಡಲ್ಪಟ್ಟ ಶ್ರಮ ಜೀವಿಗಳ ಪ್ರಾಮಾಣಿಕ ಪ್ರಗತಿಯಲ್ಲಿ ಎಂಬುದನ್ನಿಲ್ಲಿ ನೆನಪಿಡಬೇಕು. ನಮ್ಮಲ್ಲಿ ಸಮಾನತೆ ಎಲ್ಲಿದೆ ಎಂಬುದನ್ನು ಕೇಳಬೇಕಾಗುತ್ತದೆ. Equality before law ಎನ್ನುವ ಸಂವಿಧಾನ 16ನೇ ವಿಧಿ ಸಮಾನತೆಗೆ ಸಾಂಕೇತಿಕ ಸಾಕ್ಷಿಯಾಗಿದೆ. ಬಡವರ, ರೈತರ, ಕಾರ್ಮಿಕರ, ದುಡಿಯುವ ಶ್ರಮ ಜೀವಿಗಳ ಸಂರಕ್ಷಣೆ ಬೇಡವೆ ?

ಈಗಿನ ವಿದ್ಯಾಭ್ಯಾಸದ ವಿಚಾರದ ಬಗ್ಗೆ ಹೇಳಬೇಕೆಂದರೆ ನಾಡಿನ ಮಕ್ಕಳಿಗೆ ಉತ್ತಮ ರೀತಿಯಲ್ಲಿ ಕಲಿಸುವ ಸಾರ್ವತ್ರಿಕ ಶಿಕ್ಷಣವಿಲ್ಲ. ಹಣವಿದ್ದವರು ಒಳ್ಳೆಯ ಶಾಲೆಗೆ ಕಳಿಸಿದರೆ, ಹಣವಿಲ್ಲದವರು ಜನತಾ ಶಾಲೆಗಳೇಗತಿ. ಪ್ರಾಥಮಿಕ ಪೂರ್ವ ಮತ್ತು ಪ್ರಾಥಮಿಕ ಶಾಲೆಗಳಲ್ಲಿ ಬೀಳುವ ತಳಹದಿ ಒಂದು ವ್ಯಕ್ತಿತ್ವದ ವಿಕಾಸದಲ್ಲಿ ಪರಿಣಾಮಕಾರಿ ಪಾತ್ರ ನಿರ್ವಹಿಸುತ್ತದೆ. ಈಗ ನಗರಗಳಲ್ಲಿ ಅಪಾರ ಹಣ ಪಡೆದು ವಿದ್ಯೆ ನೀಡುವ ನರ್ಸರಿ, ಕಾನ್ವೆಂಟು ಶಾಲೆಗಳಿಗೂ ನಗರಗಳ ಮತ್ತು ಗ್ರಾಮಗಳ ಸರಕಾರಿ ಶಾಲೆಗಳು ನೀಡುವ ವಿದ್ಯೆಗೂ ಅಪಾರ ವ್ಯತ್ಯಾಸಗಳಿವೆ. ಹೆಚ್ಚು ಹಣ ನೀಡುವ ನರ್ಸರಿ, ಕಾನ್ವೆಂಟು ಶಾಲೆಗಳಿಗೆ ಮಕ್ಕಳನ್ನು ಸೇರಿಸಲು ಎಷ್ಟು ಜನರಿಗೆ ಸಾಧ್ಯ ? ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚಿರುವ ಹಳ್ಳಿಯ ಶ್ರಮಜೀವಿಗಳಿಗೆ ತಮ್ಮ ಮಕ್ಕಳಿಗೆ ಈ ರೀತಿಯ ವಿದ್ಯೆ ನೀಡಲು ಸಾಧ್ಯವೆ ? ದೇಶದ ಬಹುಪಾಲು ದುರ್ಬಲರಿಗೆ ಈ ರೀತಿಯ ಶಿಕ್ಷಣ ಸೌಲಭ್ಯ ಮರೀಚಿಕೆಯೇ ಸರಿ.

ಈ ರೀತಿ ಎಲ್ಲರನ್ನು ನಿಯಂತ್ರಿಸಿ ಬಡವರನ್ನು ಸರ್ವತೋಮುಖ ಬಡವರನ್ನಾಗಿಯೇ ಇಡುವ ವರ್ಗದ ವಿರುದ್ಧ ಸಾಂಘಿಕ ಪ್ರಯತ್ನಗಳು ನಡೆಯಬೇಕಾಗಿದೆ. ಬಡವ, ಬಲ್ಲಿದ, ಉಚ್ಚ-ನೀಚ ಭಾವನೆಗಳಿಗೆ ಆಸ್ಪದವಿಲ್ಲದೆ ಅರ್ಥಪೂರ್ಣ ಸಮಾನತೆಯ ಸಮಾಜ ನಿರ್ಮಾಣಕ್ಕೆ ಇಂಥಹ ಸಾಂಘಿಕ ಯತ್ನಗಳು ಸಹಕಾರಿಯಾಗಬಲ್ಲವು. ಮನುಷ್ಯ ಹುಟ್ಟಿ ಬಂದಾಗ ಯಾವ ಸಂಪತ್ತನ್ನು ಬೆನ್ನಿಗೆ ಕಟ್ಟಿಕೊಂಡು

ಬಂದಿಲ್ಲ. ಎಲ್ಲರೂ ಬರಿಗೈಯಲ್ಲೇ ಬಂದವರು. ನೆಲ, ಜಲ, ಸಂಪನ್ಮೂಲ ಯಾರದೂ ಆಗಿರಲಿಲ್ಲ, ಎಲ್ಲರದೂ ಆಗಿತ್ತು. ಆದರೆ ಅಸಮರ್ಪಕ ವ್ಯವಸ್ಥೆ, ಕೆಲವೇ ಜನರಿಗೆ ಹೆಚ್ಚು ಸಿಗಲು ಕಾರಣವಾಯಿತು. ಒಬ್ಬ ನೂರಾರು ಜನರಿಗಿಂತ ಹೇಗೆ ಮೇಲಕ್ಕೇರಿದ? ಅವನೊಬ್ಬನೇ ಸಂಪತ್ತಿಗನಾಗಬೇಕಾದರೆ ಉಳಿದ ಯಾರದಕ್ಕಾದರೂ ಊನವಾಗಿರಬೇಕಲ್ಲವೆ? ಅಂದ ಮೇಲೆ ಇವತ್ತು ಅವನಿಗೆ ಬಂದಿರುವ ಬಂಡವಾಳ್ತನ ಬೇರೆಯವರ ಬಡತನಕ್ಕೂ ಕಾರಣವಾಗಿರಬೇಕಲ್ಲವೆ ?

ಹೀಗೆ ನಮ್ಮ ಇಡೀ ವ್ಯವಸ್ಥೆ ದೋಷಪೂರಿತ ತಳಹದಿಯ ಮೇಲೆ ನಿಂತಿದೆ. ಆದರೂ ಭಾರತಕ್ಕೆ ಬ್ರಿಟಿಷರ ಆಗಮನ ಅನೇಕ ಬದಲಾವಣೆಗಳಿಗೆ ಕಾರಣವಾಯಿತು. ಈ ಬದಲಾವಣೆ ಎಷ್ಟರ ಮಟ್ಟಿಗೆ ರಾಜಕೀಯದ್ದೋ ಅಷ್ಟರ ಮಟ್ಟಿಗೆ ಆರ್ಥಿಕ ಮತ್ತು ಸಾಂಸ್ಕೃತಿಕವಾದದ್ದು ಆಗಿದೆ. ರೈಲ್ವೆಯ ಪ್ರಾರಂಭ ಇಲ್ಲಿನ ಆರ್ಥಿಕ ಪದ್ಧತಿಯ ಮೇಲೆ ಸಾಕಷ್ಟು ಪರಿಣಾಮ ಬೀರಿತು. ಅಂಚೆ, ದೂರವಾಣಿಗಳಾದರೂ ಅಷ್ಟೆ. ಇವೆಲ್ಲಾ ಹಳ್ಳಿ ಹಳ್ಳಿಯ ಅಂತರವನ್ನು ಕುಗ್ಗಿಸುವ ಸಾಧನಗಳಾಗಿ ಸಂಬಂಧದ ಹೊಸ ಅಧ್ಯಯವನ್ನು ಆರಂಭಿಸಿದವು. ರೈಲ್ವೆ ಪದ್ಧತಿಯು ಭಾರತದ ಆಧುನಿಕ ಕೈಗಾರಿಕೆಯ ಬೆಳವಣಿಗೆಗೆ ಪೂರಕ ಸಾಧನವಾಯಿತು. ಕೈಗಾರಿಕೆಯ ಬೆಳವಣಿಗೆಯೊಂದಿಗೆ ನಮ್ಮವರು ತಮ್ಮ ಸಲುವಾಗಿಯೇ ಸಂಪೂರ್ಣವಾಗಿ ಹೊಸದಾದ ದುಡಿಮೆಗೆ ಹೊಂದಿಕೊಂಡರು. ಬ್ರಿಟೀಷರು ಇದಕ್ಕೆ ಅವಕಾಶ ಮಾಡಿಕೊಟ್ಟರೆಂದು ಹೇಳಬಹುದು. ವಿದ್ಯುಚ್ಛಕ್ತಿಯನ್ನು ಪರಿಚಯಿಸುವುದರ ಮೂಲಕ ಇಂಡಿಯಾದಲ್ಲಿ ಬ್ರಿಟೀಷರಿಂದ ಉಂಟಾಗಿದ್ದ ಏಕ ಚಕ್ರಾಧಿಪತ್ರದ ಒಗ್ಗಟ್ಟು ಮುಂದುವರೆಯಲು ಸಹಕಾರಿಯಾಯಿತು. ಏಕ ಭಾವನೆ ಮೂಡಿಸುವಲ್ಲಿ ಇಂಥಹ ಸುಧಾರಣೆಗಳ ಪಾತ್ರ ಅಪಾರ. ಸ್ಟೀಮರ್ ತಂದದ್ದು, ಯುರೋಪಿನ ಬಂದರುಗಳನ್ನು ಭಾರತದ ಹತ್ತಿರಕ್ಕೆ ತಂದು ಭಾರತದ ಸ್ಥಿರಸ್ಥಿತಿಗೆ (Stagnant condition) ಮೂಲಕಾಯಿದೆಯಂತಿದ್ದ ಪ್ರತ್ಯೇಕತೆಯನ್ನು ದೂರ ಮಾಡುವಲ್ಲಿ ಪರಿಣಮಿಸಿತು. ಇವೆಲ್ಲದರ ಜೊತೆಗೆ ಇಂಗ್ಲೀಷ್ ವಿದ್ಯಾಭ್ಯಾಸವನ್ನು ಪ್ರಚಲಿತಗೊಳಿಸಲಾಯಿತು. ಒಟ್ಟಿನಲ್ಲಿ ಹೇಳುವುದಾದರೆ ಬ್ರಿಟನ್ನಿನ ಆಳುವ ವರ್ಗ ಇಂಡಿಯಾದ ಪ್ರಗತಿಯಲ್ಲಿ ಆಸಕ್ತಿ ತಾಳಿತ್ತು. ಇದಕ್ಕೆ ಕಾರಣವಿಲ್ಲದೆ ಇಲ್ಲ. The aristocracy wanted to conquer it. The monocracy to plunder if and the millocracy to undersell it ಎಂಬ ಮಾತುಗಳು ಭಾರತದ ಪಾಲಿಗೆ ಬ್ರಿಟೀಷರು ತಾಳಿದ್ದ ಮನೋಭಾವವನ್ನು ಹೇಳುತ್ತವೆ. ಆದರೆ ಸ್ವಲ್ಪ ಕಾಲಾನಂತರ ಭಾರತವನ್ನು ಪುನರುತ್ಪಾದನಾ ದೇಶವನ್ನಾಗಿ (Reprodnetive country ) ಮಾಡುವುದು ತಮ್ಮ ದೃಷ್ಠಿಯಿಂದ ತೀರಾ ಅಗತ್ಯವೆಂಬ ಅರಿವಾಯಿತು. ಇದಕ್ಕಾಗಿ ನೀರಾವರಿ ಮತ್ತು ಆಂತರಿಕ ಸಂಪರ್ಕವನ್ನು ಬಲಿಗೊಳಿಸುವ ಮನಸ್ಸು ಬಂತು. ಇದರ ಫಲ ಇಂಡಿಯಾಕ್ಕೆ ರೈಲ್ವೆಯ ಆಗಮನ.

ಯಂತ್ರ, ಶಕ್ತಿ ಮತ್ತು ಇಂಗ್ಲೀಷ್ ಜ್ಞಾನಗಳು ಭಾರತದಲ್ಲಿ ಸಾಂಸ್ಕೃತಿಕವಾಗಿ ಸಾಕಷ್ಟು ಪರಿಣಾಮಕಾರಿಯಾದವು. ಆರ್ಥಿಕ ಪದ್ಧತಿಯ ಬೇರುಗಳು ಸಡಿಲಗೊಂಡು ಸಾಮಾಜಿಕ ಸಂಬಂಧಗಳ ವ್ಯತ್ಯಾಸಕ್ಕೂ ಕಾರಣವಾದವು. ಈ ಸುಧಾರಣೆಗಳಲ್ಲಿ ಸಕ್ರಿಯವಾಗಬೇಕಾಗಿ ಬಂದವರ

ಮನೋಧರ್ಮದಲ್ಲೂ ಅದಕ್ಕನುಗುಣ ಸುಧಾರಣೆ ಕಂಡಿತು. ಈ ಎಲ್ಲಾ ಕ್ರಿಯೆಗಳಿಂದ ಇಂಡಿಯಾದ ಸಾಮಾಜಿಕ ಚರಿತ್ರೆಯಲ್ಲಾದ ಪ್ರಮುಖ ಘಟನೆಯೆಂದರೆ ಹೊಸ ಮಧ್ಯಮವರ್ಗದ ಉದಯ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಬಂಡವಾಳ ಶಾಹಿ ಪದ್ಧತಿಯ ಪ್ರಾರಂಭ.

ಶೇ. ೭೩ ಕ್ಕಿಂತಲೂ ಹೆಚ್ಚಿರುವ ಗ್ರಾಮೀಣ ಪ್ರದೇಶದ ಆರ್ಥಿಕ ಸಂರಚನೆ ಪಿರಮಿಡ್ಡಿನೋಪಾದಿಯಲ್ಲಿರುವದನ್ನು ಗಮನಿಸಬಹುದು. ಡಾ॥ ಬಿ. ಆರ್. ಅಂಬೇಡ್ಕರ್ ರವರು ಗುರುತಿಸಿರುವ ವೈರುಧ್ಯಗಳ ವೈರುಧ್ಯಗಳೇನೆಂದರೆ, ಆ ವೈರುಧ್ಯಗಳು ವಿಷಮತೆಯ ಸಂಘರ್ಷದ ರೂಪ ಪಡೆದುಕೊಂಡಿಲ್ಲ. ಪಿರಮಿಡ್ಡಿನ ಅಡಿಪಾಯದಲ್ಲಿ ಅಸಹನೆ. ಅಸಮಾಧಾನವು ಆಸ್ಫೋಟಕಾರಿ ಸ್ವರೂಪ ಪಡೆದುಕೊಳ್ಳುತ್ತಿಲ್ಲ. ನಮಗೆ ಸ್ವಾತಂತ್ರ್ಯ ಬಂದ ೧೯೪೭ ರ ಘಳಿಕೆಯಲ್ಲಿ ಜವಹಾರಲಾಲ್ ನೆಹರೂರವರು ಗುರುತಿಸಿದ್ದ ದೇಶದ ಮುಂದಿನ ಸವಾಲುಗಳಾದ ಬಡತನ, ಅಜ್ಞಾನ, ಅಸ್ಪೃಶ್ಯತೆ, ಅವಕಾಶಗಳಲ್ಲಿನ ಅಸಮಾನತೆಯ ನಿವಾರಣೆಗಳು ಇಂದಿಗೂ ಸವಾಲುಗಳಾಗಿ ಮುಂದುವರೆಯುತ್ತಿವೆ. ಬೇಸ್‌ಲೈನ್ ಹೇಳುವಂತೆ ಅಸಮಾನತೆ ಉಲ್ಬಣಗೊಳ್ಳುತ್ತಾ ನಡೆಯುತ್ತಿದೆ. ಜಿನ್ ಬ್ರೆಮನ್ ಹೇಳುವ ಆರೋಪಣವಾದಿ ಅಸಮಾನತೆ ಅನಿರ್ಬಂಧಿತವಾಗಿ ಮುಂದುವರೆದಿದೆ.

**೧.೨ : ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

ಸಮಾಜವು ಸಂಕೀರ್ಣವಾಗಿ ಬೆಳೆದಂತೆ, ಮಾನವನ ಅಗತ್ಯಗಳು ಹೆಚ್ಚುತ್ತಾ ಹೋಗಿ, ಜೀವನ ನಿರ್ವಹಣೆಯು ತುಂಬಾ ಕಷ್ಟಕರವಾಗ ತೊಡಗಿತು. ಇಂಥಹ ಸಂದಿಗ್ಧ ಸ್ಥಿತಿಯಲ್ಲಿ ತಮ್ಮ ದೈನಂದಿನ ಬೇಡಿಕೆಗಳನ್ನು ಈಡೇರಿಸಿಕೊಂಡು ನೆಮ್ಮದಿಯ ಜೀವನವನ್ನು ಹೊಂದಲು ಹಲವು ವ್ಯಕ್ತಿಗಳು ಸೇರಿ ಒಂದು ಸೀಮಿತ ಚೌಕಟ್ಟಿನಲ್ಲಿ ನಿರ್ಧಿಷ್ಠ ಸಂಘಟನೆಯಲ್ಲಿ ತೊಡಗುವ ಕ್ರಿಯೆ ಆರಂಭವಾಯಿತು. ಇಂಥಹ ಸಂಘಟನೆಗಳಿಂದ ನಿರ್ಧಿಷ್ಠ ಪ್ರದೇಶದಲ್ಲಿ, ನಿರ್ಧಿಷ್ಠ ಗುಂಪಿನ ಮೇಲೆ ಆಗಿರುವ ಪ್ರಗತಿ ಏನು? ಅವುಗಳ ಹಿಂದಿರುವ ಧ್ಯೇಯೋದ್ದೇಶಗಳೇನು ? ಸೀಮಿತ ಹಾಗೂ ದೀರ್ಘಕಾಲಿಕ ಸಾಧನೆಗಳೇನು? ಯಾವ ಯಾವ ಕ್ಷೇತ್ರಗಳಲ್ಲಿ ತಮ್ಮನ್ನು ಹೇಗೆ ತೊಡಗಿಸಿಕೊಂಡಿವೆ? ಈ ಸಂಘ - ಸಂಸ್ಥೆಗಳಿಗೆ ಸರಕಾರದ ಕೊಡುಗೆ ಏನು? ಈ ಸಂಘಗಳು ನಿರಂತರವಾಗಿ ಕಾರ್ಯನಿರ್ವಹಿಸುತ್ತಿವೆಯೇ? ಸಾಮಾಜಿಕ ಬದಲಾವಣೆ ಸ್ಥಿತ್ಯಂತರಗಳೇ ನಾದರೂ ಇವೆಯೇ? ಪರ್ಯಾಯ ಮಾರ್ಗಗಳೇನು ಎಂಬುದನ್ನು ಪ್ರಸ್ತುತ ಪಡಿಸುವ ಮೂಲಕ ನಿಜ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲಿದ್ದೇನೆ.

ಗ್ರಾಮೀಣ ಮತ್ತು ನಗರಗಳ ಜನರ ಜೀವನ ಮಟ್ಟವನ್ನು ಕೆಳಮಟ್ಟದಿಂದ ಮೇಲ್ಮಟ್ಟಕ್ಕೆ ಹರಿಯುವಂತೆ ಮಾಡಬೇಕೆಂದು ಸ್ವಾತಂತ್ರ್ಯ ಬಂದಾಗಿನಿಂದಲೂ ನಮ್ಮ ಆಳುವ ಸರಕಾರಗಳು ಹೇಳುತ್ತಿವೆ. ಅಧಿಕಾರ ವಿಕೇಂದ್ರೀಕರಣಕ್ಕೆ ಇದೇ ತಾತ್ವಿಕ ನೆಲೆಯಾಗಿದೆ. ತಳಮಟ್ಟದಲ್ಲಿ ಅಭಿವೃದ್ಧಿಯಿಂದ ಯಾರುವಂಚಿತರಾಗಿದ್ದಾರೋ ಅವರನ್ನು ಒಳಗೊಳ್ಳುವ ಪ್ರಕ್ರಿಯೆಯನ್ನು ತಳ ಮಟ್ಟದ ಅಭಿವೃದ್ಧಿ ಎನ್ನಬಹುದು. ಸರಕಾರದ ಸೌಲತ್ತುಗಳು ಮೇಲಿನಿಂದ ಕೆಳಮುಖಿಯಾಗಿ ಹರಿಯುವಂತೆ ಮಾಡುವ

ಅಭಿವೃದ್ಧಿಯ ತಂತ್ರ ಪ್ರಚಲಿತದಲ್ಲಿದೆ. ಈ ಬಗ್ಗೆ ಬೆಳವಣಿಗೆಯು ಮೇಲಿನಿಂದ ಕೆಳಗಿನ ಮಜಲಿಗೆ ಹರಿಯುವ ಅಭಿವೃದ್ಧಿ ತಂತ್ರವನ್ನು ತಲೆಕೆಳಗು ಮಾಡಬೇಕಾಗಿದೆ. ಇದನ್ನು ತಲೆಕೆಳಗು ಮಾಡಲು ಸಾಧ್ಯವಾಗದೇ ಇರುವುದನ್ನು ರಾಜಕೀಯ ವೈಫಲ್ಯ, ವ್ಯವಸ್ಥೆಯ ವೈಫಲ್ಯವೆಂದು ಕರೆಯಲಾಗಿದೆ. ಬಡವರನ್ನು, ದುರ್ಬಲರನ್ನು, ದಲಿತರನ್ನು, ಮಹಿಳೆಯರನ್ನು ಸಾಧ್ಯವಾಗಿ ಹಾಗೂ ಸಾಧ್ಯವೂ ಆಗಿ ಒಳಗೊಳ್ಳದಿರುವ ಪ್ರಗತಿಯನ್ನು ವೈಫಲ್ಯವೆಂದೇ ಹೇಳಬಹುದು ಆವರ ಅಗತ್ಯಗಳಿಗೆ ಅನುಗುಣವಾಗಿ ಸಾಂಘಿಕ ಚೌಕಟ್ಟಿನೊಳಗೆ ತಂದು ಹಿತಾಸಕ್ತಿ ಕಾಪಾಡುವುದು ತುಂಬಾ ಅಗತ್ಯ.

ಈ ವ್ಯವಸ್ಥೆಯ ವೈಫಲ್ಯ, ಸಾಮಾಜಿಕ ವೈಫಲ್ಯವನ್ನು ತೊಡೆದು ಹಾಕಲು ಪ್ರಮುಖ ಮೂರು ಕ್ರಮಗಳನ್ನು ಜೀವ್ ಡ್ರೀಜ್ ಮತ್ತು ಅಮರ್ತ್ಯಸೇನ್ ಸೂಚಿಸುತ್ತಾರೆ.

೧. ಅಭಿವೃದ್ಧಿ ಅಥವಾ ಪ್ರಗತಿ ಪ್ರಕ್ರಿಯೆಯಲ್ಲಿ ರಾಜಕಾರಣಕ್ಕೆ ಪ್ರಮುಖ ಪಾತ್ರ ನೀಡಬೇಕು.

೨. ವಂಚಿತ ಅಥವಾ ಶೋಷಿತ ವರ್ಗದ ರಾಜಕೀಯ ಸಂಘಟನೆಗೆ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳುವುದು.

೩. ರಾಜಕೀಯ ಹಾಗೂ ಸಾಂಸ್ಕೃತಿಕ ಕ್ರಿಯಾಶೀಲತೆಯಲ್ಲಿ ಭಾಗವಹಿಸಲು ಅಗತ್ಯವಾದ ಮೂಲ ಸಾರ್ವತ್ರಿಕ ಶಿಕ್ಷಣ ನೀಡುವುದು.

ಜನರ ಸಾಂಘಿಕ ಚಟುವಟಿಕೆಯಿಲ್ಲದೆ ಗ್ರಾಮೀಣ ಪ್ರದೇಶದಲ್ಲಿರುವ ಅಧಿಕಾರ ಸಂಬಂಧವನ್ನು ಬದಲಾಯಿಸಲು ಸಾಧ್ಯವಿಲ್ಲ. ಅಸ್ಥಿತ್ವದಲ್ಲಿರುವ ಅಧಿಕಾರಿ ಸಂಬಂಧಗಳ ಪುನರುತ್ಪಾದನೆ ಕೊನೆಗೊಳ್ಳ ಬೇಕಾದರೆ ಬಡವರು, ದುರ್ಬಲರು, ದಲಿತರು, ತಮ್ಮ ಹಕ್ಕು ಅಧಿಕಾರಗಳನ್ನು ಸಂಘಟಿತ ರೀತಿಯಲ್ಲಿ ಒತ್ತಾಯಿಸುವಂತಿರಬೇಕು. ರಾಜಕೀಯ ಹಾಗೂ ಸಾಮಾಜಿಕ ವೈಫಲ್ಯಕ್ಕೆ ಮುಖ್ಯ ಕಾರಣವೇನೆಂದರೆ, ಅಂಚಿನಲ್ಲಿರುವ ವಂಚಿತರು 'ದನಿ' ಕಳೆದುಕೊಂಡಿರುವುದಾಗಿದೆ. ಮೀಸಲಾತಿಯನ್ನು ನೀಡಿ ರಾಜಕೀಯ ಪಕ್ಷಗಳು ದಲಿತ, ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ತಮ್ಮ ಜವಾಬ್ದಾರಿಯನ್ನು ತೊಳೆದುಕೊಂಡರೆ ಸಾಲದು.

ಗ್ರಾಮ ಸ್ವರಾಜ್ಯದ ಅಧಿಕಾರ ವಿಕೇಂದ್ರೀಕರಣವಾಗಲಿ, ಮಹಿಳೆಯರ ಸಬಲೀಕರಣವಾಗಲಿ ಅಸ್ಥಿತ್ವದಲ್ಲಿರುವ ಅಸಮಯಜಮನ್ಯ, ಜಾತಿ ಸಂಬಂಧಗಳಿಗೆ ಭಿನ್ನವಾದ ರೀತಿಯಲ್ಲಿ ಸಂಭವಿಸಲು ಸಾಧ್ಯವಿಲ್ಲವೆಂಬುದನ್ನು ಗಮನಿಸಬೇಕು.

ಪ್ರಸ್ತುತ ನನ್ನ ಅಧ್ಯಯನ ಉದ್ದೇಶಗಳನ್ನು ಮೇಲಿನ ನನ್ನ ವಿಶ್ಲೇಷಣೆಯಿಂದ ತಿಳಿದು ಬರುವ ಸಂಗತಿಗಳೇನೆಂದರೆ, ಸ್ವಾತಂತ್ರ್ಯ ಬಂದು ೬೦ ವರ್ಷಕ್ಕೂ ಮೇಲಾದರೂ ಪ್ರತಿಯೊಂದು ಕ್ಷೇತ್ರದಲ್ಲಿ ಅಸಮಾನತೆ, ಬಿಕ್ಕಟ್ಟುಗಳು ಕಾಣುತ್ತವೆ. ಯಾವುದೇ ಕ್ಷೇತ್ರ ಸಮಸ್ಯೆಗಳಿಂದ ಮುಕ್ತವಾಗಿಲ್ಲ. ಶೈಕ್ಷಣಿವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಈ ಎಲ್ಲಾ ಸಮಸ್ಯೆಗಳ ಪರಿಹಾರಕ್ಕೆ ನಮಗೆ ಇರುವ ದಾರಿಯೆಂದರೆ ಪ್ರತಿಯೊಂದು ಕ್ಷೇತ್ರದ, ಪ್ರತಿಯೊಂದು

ಹಿತಾಸಕ್ತಿಯ ಗುಂಪಿನ ಸಂಘಟನೆ ಆ ಮೂಲಕ ಸಮಸ್ಯೆಗಳ ಈಡೇರಿಕೆ, ಒಂದೇ ರೀತಿಯ ಗುರಿ, ಉದ್ದೇಶಗಳಿರುವ ಸಂಘಟನೆಗಳ ಸಮನ್ವಯತೆಯನ್ನು ಸಾಧಿಸುವುದರ ಮುಖಾಂತರ ಸಾಂಘಿಕ ಪ್ರಯತ್ನಗಳ ಮೂಲಕವೇ ಸಮಾಜದ ಬದಲಾವಣೆಗೆ ಇಡೀ ವ್ಯವಸ್ಥೆಯನ್ನು ಸಿದ್ಧಗೊಳಿಸುವಲ್ಲಿ ಸಾಂಘಿಕ ಯತ್ನ ಸಾಗಬೇಕಾಗಿರುತ್ತದೆ.

ಭಾರತದ ಜನಸಂಖ್ಯೆಯು ಒಂದು ಸಂಪತ್ತಾಗಿದೆ. ೧೯೫೧ ರಲ್ಲಿ ಭಾರತದ ಜನಸಂಖ್ಯೆ ೩೬ ಕೋಟಿ ಇದ್ದು, ೨೦೦೧ ರಲ್ಲಿ ಇದು ೧೧೦ ಕೋಟಿಯಾಗಿದೆ. ಜನಸಂಖ್ಯೆ ಹೆಚ್ಚಳವೇ ಬಡತನ, ದಾರಿದ್ರ್ಯ ಅನಕ್ಷತರೆ, ನಿರುದ್ಯೋಗಗಳಿಗೆ ಕಾರಣ ಎಂಬ ವಾದವಿದೆ. ಆದರೆ ಬಡತನ, ದಾರಿದ್ರ್ಯ, ಅನಕ್ಷರತೆ, ನಿರುದ್ಯೋಗಿಗಳೇ ಜನಸಂಖ್ಯೆ ಹೆಚ್ಚಳಕ್ಕೆ ಕಾರಣವೆಂದು ತಜ್ಞರ ಅಧ್ಯಯನಗಳಿಂದ ಸಾಬೀತಾಗಿದೆ. ಶ್ರೀಮಂತರಿಗೆ ಮಕ್ಕಳು ಕಡಿಮೆ, ಬಡವರಿಗೆ ಮಕ್ಕಳು ಹೆಚ್ಚು ದರವು ಬಹಳ ಕಡಿಮೆ ಅಥವಾ ಇಲ್ಲವೇ ಇಲ್ಲ ಎಂದೂ ಬಡದೇಶಗಳಲ್ಲಿ ಜನಸಂಖ್ಯಾ ಹೆಚ್ಚಳ ದರವು ಬಹಳ ಏರಿಕೆಯಲ್ಲಿರುವುದು, ಸಾರ್ವತ್ರಿಕ ಅನುಭವಗಳಾಗಿವೆ.

ಈ ಹಿನ್ನೆಲೆಯಲ್ಲಿ ಜನತೆಯ ಅದರಲ್ಲೂ ದುಡಿಯುವ ವರ್ಗದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಈ ವರ್ಗಗಳ ಸ್ವತಂತ್ರ್ಯ ಭಾರತದ ಪ್ರಗತಿ, ಸಾಂಘಿಕ ಚಟುವಟಿಕೆಗಳನ್ನು ಕುರಿತು ನನ್ನ ಅಧ್ಯಯನವನ್ನು ಕೈಗೊಂಡಿದ್ದೇನೆ. ಪ್ರತಿಯೊಂದು ಕ್ಷೇತ್ರದ ಸಾಂಕೇತಿಕ ಅಧ್ಯಯನಕ್ಕಾಗಿ ನನ್ನ ಜಿಲ್ಲೆಯ ನಾನು ಹಾಲೀ ವಾಸವಾಗಿರುವ ತಾಲೂಕು ಕೇಂದ್ರವಾಗಿರುವ ಹೊಸಪೇಟೆ ತಾಲೂಕನ್ನು ಕೇಂದ್ರವಾಗಿಟ್ಟುಕೊಂಡು ಸಂಶೋಧನೆಯನ್ನು ಕೈಗೊಂಡಿದ್ದೇನೆ. ನನ್ನ ಅಧ್ಯಯನದ ಉದ್ದೇಶ ಈ ವರ್ಗಗಳ ಅಭ್ಯುದಯಕ್ಕೆ ಈವರೆಗಿನ ಸಾಂಘಿಕ ಯತ್ನಗಳ ಸಾಧಕ ಬಾಧಕಗಳ ಕುರಿತು ಆಗಿರುವುದೇನು ಆಗಬೇಕಾಗಿರುವುದೇನು ಎಂಬುದರ ಕುರಿತು ವಾಸ್ತವಿಕ ನಿಜ ಸಂಗತಿಗಳನ್ನು ಬಳಕಿಗೆ ತರುವುದು ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿರುತ್ತದೆ.

ಕರ್ನಾಟಕ ರಾಜ್ಯದಲ್ಲಿ ಹೊಸಪೇಟೆ ತಾಲೂಕು ಐತಿಹಾಸಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ತುಂಬಾ ಪ್ರಸಿದ್ಧಿಯನ್ನು ಪಡೆದಿದೆ. ಹೊಸಪೇಟೆ ಎಂದೊಡನೆ ಐತಿಹಾಸಿಕ ವಿಜಯನಗರ ಸಾಮ್ರಾಜ್ಯವು ನೆನಪಿಗೆ ಬರುತ್ತದೆ. ಒಂದು ಕಡೆ ಸಾಮ್ರಾಜ್ಯದ ವೈಭವದ ಮೆರಗು, ಮತ್ತೊಂದು ಕಡೆ ವಿಶ್ವಗುಣದರ್ಜೆಯ ಅಪಾರ ಗಣಿ ಸಂಪತ್ತಿನಿಂದಾಗಿ ದೇಶ ವಿದೇಶಿಗರ ಗಮನವನ್ನು ಸೆಳೆದಿರುತ್ತದೆ. ವಾಣಿಜ್ಯ ಹಾಗೂ ಸಾಂಸ್ಕೃತಿಕ ಪ್ರಮುಖ ನೆಲೆಯಾಗಿರುವ ಹೊಸಪೇಟೆ ತಾಲೂಕಿನ ಬಗ್ಗೆ ಅಧ್ಯಯನ ನಡೆಸುವುದು ಒಂದು ರೀತಿಯ ಕುತೂಹಲಕಾರಿಯೂ, ಸವಾಲಿನದೂ ಹೌದು. ಕೃಷಿ, ಕೈಗಾರಿಕೆ ಪ್ರಧಾನವಾದ ಈ ಪರಿಸರವು ಅನಾದಿಕಾಲದಿಂದಲೂ ಜನರ ವಸತಿ, ಸಾಂಸ್ಕೃತಿಕ, ಮತ್ತು ಧಾರ್ಮಿಕ ಆಚರಣೆಗಳ ತವರಾಗಿತ್ತೆಂಬುದನ್ನು ನಮಗೆ ದೊರೆತಿರುವ ಹಲವು ಅವಶೇಷಗಳು ಮೌರ್ಯವಂಶದ ಅಶೋಕನ ಶಿಲಾಶಾಸನಗಳಿಂದ, ಹೊಯ್ಸಳ ಚಾಲುಕ್ಯರ ಶಿಲಾ ಶಾಸನಗಳಿಂದ ತಿಳಿಯಬಹುದು.

ಈ ಹಿನ್ನೆಲೆಯಲ್ಲಿಯೂ ಹೊಸಪೇಟೆ ತಾಲೂಕಿನ ವಿಜಯನಗರದ ಸಾಮ್ರಾಜ್ಯದ ಪತನ ನಂತರದಲ್ಲಿ ಇವತ್ತಿನ ವಿವಿಧ ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳ ಕಡೆಗೆ ಗಮನಹರಿಸುವುದೂ ನನ್ನ ಅಧ್ಯಯನದ ಉದ್ದೇಶವಾಗಿರುತ್ತದೆ.

ಸಾಂಘಿಕ ನೆಲೆಗಳ ಕುರಿತು ಅಧ್ಯಯನ ಕೈಗೊಂಡಿರುವ ನನ್ನ ವ್ಯಾಪ್ತಿ ಹೊಸಪೇಟೆ ತಾಲೂಕಿನ ಒಟ್ಟಾರೆ ಜನ ಜೀವನವನ್ನು ಗಮನದಲ್ಲಿರಿಸಿಕೊಂಡು ಸಾಂಸ್ಕೃತಿಕವಾಗಿ, ಭೌಗೋಳಿಕವಾಗಿ ವಿಭಿನ್ನ ವೈಶಿಷ್ಟ್ಯತೆಯನ್ನು ಬಿಂಬಿಸುವ ನಿಟ್ಟನಲ್ಲಿ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿರುತ್ತೇನೆ. ನಗರ ಮತ್ತು ಗ್ರಾಮಗಳ ನಡುವಿನ ಸಾಂಘಿಕ ನೆಲೆಗಳ ಭಿನ್ನತೆಯ ಬಗ್ಗೆ ಅಧ್ಯಯನ ಮಾಡಲು ಸಾಧ್ಯವಾಗುವಂತೆ ಹೊಸಪೇಟೆ ಸಾಂಘಿಕ ನೆಲೆಗಳ ಪರಿಕಲ್ಪನೆ ಆಧುನಿಕ ಸಮಾಜದಲ್ಲಿ ಆಧುನಿಕ ಪೂರ್ವ ಸಮಾಜವೂ ಕೂಡ ಸಾಮಾಜಿಕ ಸ್ಥಿತ್ಯಂತರಗಳಿಗೆ ತನ್ನನ್ನು ಒಡ್ಡಿಕೊಂಡಿದ್ದೇ ಆಗಿತ್ತು. ಈ ಹಿನ್ನೆಲೆಯಲ್ಲಿ ನೋಡುವುದಾದರೆ ನನ್ನ ಅಧ್ಯಯನದ ದೃಷ್ಠಿಯಿಂದ ಸಾಂಘಿಕ ನೆಲೆಗಳು ಜನರ ಜೀವನ ವಿಧಾನವನ್ನು ಬದಲಾಯಿಸುತ್ತವೆ. ಬದಲಾದ ಸಾಮಾಜಿಕ ಜೀವನ, ಜೀವನ ಕ್ರಮ ಕ್ರಿಯಾಶೀಲತೆಯನ್ನು ಬದಲಾಯಿಸುತ್ತದೆ. ಹೊಸಪೇಟೆ ತಾಲೂಕಿನ ಜನಜೀವನ ಕ್ರಮದ ಬದಲಾವಣೆಗಳು ವಿಶೇಷವಾಗಿ ಸ್ವಾತಂತ್ರ್ಯ ನಂತರದಲ್ಲಿ ಸಾಂಘಿಕ ನೆಲೆಗಳ ಹಿನ್ನೆಲೆಯಲ್ಲಿ ನಡೆದ ಹಲವಾರು ಚಳುವಳಿಗಳಾದ, ಕಾರ್ಮಿಕ, ಮಹಿಳಾ, ರೈತ, ದಲಿತ, ಆದಿವಾಸಿ ಇತ್ಯಾದಿ ಹಲವು ವಿಭಿನ್ನ ಸಮುದಾಯಗಳ ಮುಖವಾಣಿಯಾಗಿ ಸಂಘಟನಾತ್ಮಕ ಚಟುವಟಿಕೆಗಳು ಸಮಕಾಲೀನ ಭಾರತದ ಅವಿಭಾಜ್ಯ ಲಕ್ಷಣವಾಗಿದೆ. ಈ ಬಗೆಯ ಸಾಂಘಿಕ ಪ್ರಯತ್ನಗಳಿಗೆ ಹೋರಾಟ, ಕ್ರಾಂತಿ, ಆಂಧೋಲನ, ದಂಗೆ ಇತ್ಯಾದಿ ಹಲವು ಪರಿಭಾಷೆಗಳನ್ನು ಬಳಸಿ ಗ್ರಹಿಸುವ, ಸೈದ್ಧಾಂತೀಕರಿಸುವ ಪ್ರಯತ್ನಗಳು ನಡೆದಿವೆ. ಕ್ರಾಂತಿ, ಹೋರಾಟ ಇತ್ಯಾದಿ ಪದಗಳನ್ನು ಮಾರ್ಕ್ಸಿಸ್ಟ್ ಧೋರಣೆಯ ಹಿನ್ನೆಲೆಯಲ್ಲಿ ಬಳಸಿದ್ದರೆ, ಆಂದೋಲನ, ಚಳುವಳಿ, ಸುಧಾರಣೆ, ಇತ್ಯಾದಿ ಪದಗಳು ಸಮಾಜವಾದಿ ಚಿಂತಕರು ಪರಿಭಾವಿಸಿರುವುದಾಗಿದೆ. ಇಂಗ್ಲೀಷ್‌ನ "Movement" ಎಂಬ ಪದಕ್ಕೆ ಚಲನೆ ಪರ್ಯಾಯ ಪದವಾಗಿದ್ದು, ಇದು ಸಾಮಾಜಿಕ ಬದಲಾವಣೆ ಅಥವಾ ಸ್ಥಿತ್ಯಂತರವನ್ನು ಸೂಚಿಸುತ್ತದೆ.

ಮೇಲಿನ ವಿಶೇಷತೆಯಿಂದ ತಿಳಿದುಬರುವುದೇನೆಂದರೆ ಅಂದಿನ ಕಾಲಘಟ್ಟದ ಭಾರತದ ಸಂದರ್ಭದಲ್ಲಿ ಉದ್ಭವಿಸಿದ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಒಟ್ಟಾರೆ ಬದಲಾವಣೆಯನ್ನು ತಿಳಿಯುವ ದೃಷ್ಠಿಯಿಂದ ನನ್ನ ಅಧ್ಯಯನದ ವ್ಯಾಪ್ತಿ ಒಂದು ತಾಲೂಕಿನ ಸಮಗ್ರ ದೃಷ್ಠಿಕೋನವನ್ನು ಹೊಂದಿರುತ್ತದೆ ಎಂದು ಭಾವಿಸಿದ್ದೇನೆ.

ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳ ವ್ಯಾಪ್ತಿಯ ಪರಿಚಯಕ್ಕೆ ಮುನ್ನ ಮೊದಲನೆಯದಾಗಿ ಸಾಮಾಜಿನ ಚಳುವಳಿ ಎಂದರೇನೆಂಬುದನ್ನು ತಿಳಿದುಕೊಳ್ಳಬೇಕು. ಈ ಬಗ್ಗೆ ಹಲವಾರು ವಿದ್ವಾಂಸರು ತಮ್ಮ ಹೇಳಿಕೆಗಳನ್ನು ನೀಡಿದ್ದಾರೆ. ಹರ್ಬಟ್ ಬ್ಲೂಮರ್ ರವರ ಪ್ರಕಾರ ''ಹೊಸ ಜೀವನ ಕ್ರಮವನ್ನು

ರೂಢಿಸುವುದಕ್ಕಾಗಿ ಮಾಡುವ ಸಾಮುದಾಯಿಕ ಪ್ರಯತ್ನವೇ ಚಳುವಳಿಯಾಗಿರುತ್ತದೆ. ಲಿವಿಸ್ ಕಿಲ್ಲಿಯನ್‌ರವರ ಪ್ರಕಾರ ಸಾಮಾಜಿಕ ಸಾಂಸ್ಕೃತಿಕ ಕ್ರಮವನ್ನು ಬದಲಿಸಲು ಅಥವಾ ಬದಲಾಗುತ್ತಿರುವುದನ್ನು ತಡೆಗಟ್ಟಲು ಕೈಗೊಳ್ಳುವ ಸಾಮುದಾಯಿಕ ಶ್ರಮವನ್ನು ಚಳುವಳಿ ಎಂದು ಕರೆದಿದ್ದಾರೆ. ಜೇಮ್ಸ್‌ವುಡ್ ಮತ್ತು ಜಾಕ್‌ಸನ್ ಮೊಲಿಸ್‌ರವರು ಸಾಮಾಜಿಕ ಚಳುವಳಿಗಳ ಸಂಘಟನೆಯ ಸ್ವರೂಪವನ್ನಾಧರಿಸಿ ಕ್ರಾಂತಿಕಾರಕ ಅಥವಾ ಸುಧಾರಣಾತ್ಮಕವಾದ ಬದಲವಾಣೆಯನ್ನು ರೂಪಿಸುವ ಅಥವಾ ತಡೆಗಟ್ಟುವ ದಿಕ್ಕಿನಲ್ಲಿ ಯಾವುದೇ ರಾಜೀಗೊಳಪಡದ ಗುಂಪುಗಳ ಸಂಘಟನಾತ್ಮಕ ಪ್ರಯತ್ನವನ್ನು ಚಳುವಳಿ ಎಂದು ಕರೆದಿದ್ದಾರೆ. ಟಿ.ಕೆ. ಒಮನ್ ''ಪರಿಧಿಯಲ್ಲಿರುವ ಮನುಷ್ಯನು ಕೇಂದ್ರದೆಡೆಗೆ ಚಲಿಸಲು ವ್ಯವಸ್ಥಿತವಾಗಿ ರೂಪಿಸಿಕೊಳ್ಳುವ ಸಾಮೂಹಿಕ ಕ್ರಿಯೆಯನ್ನು ಚಳುವಳಿ ಎಂದು ಕರೆಯುತ್ತಾರೆ.

ಮೇಲಿನ ಎಲ್ಲಾ ಅಭಿಪ್ರಾಯಗಳು ಚಳುವಳಿಯ ಸಮುದಾಯಿಕ ಸ್ವರೂಪವನ್ನು ಸಾಮಾಜಿಕ ಬದಲಾವಣೆ ಅಥವಾ ಬದಲಾವಣೆಯ ವಿರುದ್ಧದ ನೆಲೆಯಲ್ಲಿ ಗುರುತಿಸಿಕೊಳ್ಳುತ್ತವೆ. ಇಂತಹ ಹಲವು ಅಭಿಪ್ರಾಯಗಳನ್ನು ಕ್ರೂಢೀಕರಿಸುತ್ತಾ ಈ ವಿವರಣೆಗಳನ್ನು ಮತ್ತೊಮ್ಮೆ ನಾವು ಸೂತ್ರೀಕರಿಸಿಕೊಳ್ಳುವುದಾದರೆ ನಿರ್ದಿಷ್ಟ ಗುರಿಯೊಂದನ್ನು ತನ್ನದೇ ಆದ ಸೈದ್ಧಾಂತಿಕತೆಯೊಂದಿಗೆ ಇಟ್ಟುಕೊಂಡು ಸಾಮಾಜಿಕ ಬದಲಾವಣೆಗಾಗಿ ಬೇಡಿಕೆಯನ್ನು ಮಂಡಿಸುವ ಸಾಮುದಾಯಿಕ ಕ್ರಿಯೆಯನ್ನು ಚಳುವಳಿ ಎಂದು ಕರೆಯಬಹುದು.

ನನ್ನ ಅಧ್ಯಯನದ ದೃಷ್ಠಿಯಿಂದ ಹೊಸಪೇಟೆ ತಾಲೂಕಿನ ೪ ಹೋಬಳಿಗಳಲ್ಲಿ ಪ್ರತಿಯೊಂದು ಹೋಬಳಿಯ ತಲಾ ೪ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡಿರುತ್ತೇನೆ. ನಾಲ್ಕು ಹೋಬಳಿಗಳೆಂದರೆ ಕಮಲಾಪುರ, ಹೋಬಳಿ, ಗಾದಿಗನೂರು ಹೋಬಳಿ, ಕಂಪ್ಲಿ ಹೋಬಳಿ, ಮರಿಯಮ್ಮನ ಹೋಬಳಿ ಎಂದು ನಾಲ್ಕು ಹೋಬಳಿಗಳಿವೆ. ಕಮಲಾಪುರ ಹೋಬಳಿಯಲ್ಲಿ ಕಮಲಾಪುರ ಪುರಸಭೆ ಸೇರಿದಂತೆ ಹಂಪಿ, ಪಾಪಿನಾಯಕನಹಳ್ಳಿ, ಇಂಗಳಿಗಿ, ಬುಕ್ಕಸಾಗರ ಮತ್ತು ವೆಂಕಟಾಪುರ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಗಾದಿಗನೂರು ಹೋಬಳಿಯಲ್ಲಿ ಗಾದಿಗನೂರು, ಧರ್ಮಸಾಗರ, ಕಾಕುಬಾಳು, ಮಲಪನಗುಡಿ ಮತ್ತು ಕಾರಿಗನೂರು ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿರುತ್ತೇನೆ.

ಮರಿಯಮ್ಮನಹಳ್ಳಿ ಹೋಬಳಿಯಿಂದ ಕಲಾಗ್ರಾಮ ಮರಿಯಮ್ಮನಹಳ್ಳಿ ಸೇರಿದಂತೆ, ಚಿಲಕನಹಟ್ಟಿ ಗರಗ, ಡಣಾಯಕನಕೆರೆ ಹಾಗೂ ಡಣಾಪುರ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಕಂಪ್ಲಿ ಹೋಬಳಿಯಲ್ಲಿ ಕಂಪ್ಲಿ ಸೇರಿದಂತೆ ರಾಮಸಾಗರ, ಅರಳಿಹಳ್ಳಿ, ದೇವಸಮುದ್ರ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿರುತ್ತೇನೆ.

ಹೊಸಪೇಟೆ ಹೋಬಳಿಯಲ್ಲಿ ಹೊಸಪೇಟೆ ನಗರ ಸಭೆ ಸೇರಿದಂತೆ ಅನಂತಶಯನಗುಡಿ, ಕಲ್ಲಹಳ್ಳಿ, ನಾಗೇನಹಳ್ಳಿ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಒಟ್ಟು ನಾಲ್ಕು ಹೋಬಳಿಗಳ ತಲಾ ೪ ಗ್ರಾಮಗಳಂತೆ ಒಟ್ಟು ೧೬ ಗ್ರಾಮಗಳನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದು, ಈ ಗ್ರಾಮಗಳ ಸ್ವಾತಂತ್ರ್ಯ ನಂತರ ವಿವಿಧ ಸಾಂಘಿಕ ನೆಲೆಗಳು ಅದರ ಪರಿಣಾಮವಾಗಿ ನಡೆದ ಸಾಂಘಿಕ ಚಳುವಳಿಗಳು ಅದರಿಂದಾದ ಸಾಮಾಜಿಕ ಬದಲಾವಣೆಗಳಿಗೆ ಪ್ರಮುಖ ಒತ್ತು ನೀಡಿ, ವ್ಯಾಪಕವಾದ ಕ್ಷೇತ್ರಕಾರ್ಯ ನಡೆಸಿ ಅಧ್ಯಯನದ ಫಲಿತಗಳನ್ನು ಈ ಪ್ರಬಂಧದಲ್ಲಿ ಮಂಡಿಸಿದ್ದೇನೆ.

### ೧.೩ : ಅಧ್ಯಯನದ ಮಹತ್ವ :

ಹೊಸಪೇಟೆ ತಾಲೂಕಿನ ಪ್ರಮುಖ ಸಾಂಘಿಕ ನೆಲೆಗಳು ಮತ್ತು ಅವರ ಭಾಗವಾಗಿ ನಡೆದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತು ನಡೆಸುತ್ತಿರುವ ನನ್ನ ಸಂಶೋಧನೆ ಮಾನವನ ಬೆಳವಣಿಗೆ, ಸರಕಾರದ ಯೋಜನೆಗಳ ಅನುಷ್ಠಾನ ಶೈಕ್ಷಣಿಕ ಹಾಗೂ ರಾಜಕೀಯ ಅಭಿವೃದ್ಧಿ ದೃಷ್ಠಿಯಿಂದ ಅತ್ಯಂತ ಮಹತ್ವವೆಂದು ನಾನು ಭಾವಿಸಿದ್ದೇನೆ.

ಸಮಾಜವಾದಿ ಮಾದರಿ ಸಮಾಜ, ಕಲ್ಯಾಣ ರಾಜ್ಯ, ರಾಮರಾಜ್ಯ, ಗರೀಬಿ ಹಠಾವೋ, ಅಭಿವೃದ್ಧಿಯೊಂದೇ ಇಪ್ಪತ್ತೊಂದನೆ ಶತಮಾನದ ಕಡೆಗೆ ಮುಂತಾದ ಆಕರ್ಷಕ ಆದರ್ಶಗಳನ್ನು ಇಟ್ಟುಕೊಂಡು ಬಂದ ಆರ್ಥಿಕ ಅಭಿವೃದ್ಧಿಯನ್ನು ನೋಡಿದರೆ ಎದೆ ನಡುಕದ ಭ್ರಮನಿರಸನ-ವಾಗುವುದು. ಬಡವರನ್ನು ದಲಿತರನ್ನು ಹಿಂದುಳಿದವರನ್ನು, ಮಹಿಳೆ ಮತ್ತು ಮಕ್ಕಳನ್ನು ಅವರ ಸರ್ವತೋಮುಖ ಅಭಿವೃದ್ಧಿಗೆ ಅಣಿಗೊಳಿಸುವ ಪ್ರಾಮಾಣಿಕತೆಯ ಕೊರತೆ ಎದ್ದು ಕಾಣುತ್ತದೆ. ಕೆಳಜಾತಿ ವರ್ಗಕ್ಕೆ ಪೂರಕವಲ್ಲದ ಮೌಲ್ಯವ್ಯವಸ್ಥೆಯ ಪರಿಣಾಮವಾಗಿ ಬಡವರು, ದುರ್ಬಲರು, ಮಹಿಳೆಯರು, ದಲಿತರು ಪ್ರಗತಿಯಿಂದ ವಂಚಿತರಾಗಿದ್ದಾರೆ. ಇದಕ್ಕೆ ಪರಿಹಾರವೆಂದರೆ, ಬಡವರ ದುರ್ಬಲರ, ದಲಿತರ, ಸಂಘಟನೆ ಸಂಘರ್ಷ, ಸಂಘಟನೆಗಳಿಲ್ಲದೆ ನ್ಯಾಯ ಪಡೆಯುವುದು ಅಸಾಧ್ಯವೇ ಸರಿ. ಭೂರಹಿತ ಕೃಷಿಕೂಲಿಕಾರರರು, ಉನ್ನತ ಜಾತಿ, ಕೆಳಜಾತಿ, ಗಂಡ-ಹೆಂಡತಿ, ಗಂಡು-ಹೆಣ್ಣು ಮುಂತಾದ ನೆಲೆಗಳಲ್ಲಿ ಮೂಲಭೂತವಾದ ಅಸಮಾನತೆ ಇದೆ. ಯಾರು ಯಾರ ಮುಂದೆ ಹೇಗೆ ಮಾತಾಡಬೇಕು, ಯಾವ ವಿಷಯ ಮಾತಾಡಬೇಕು, ಯಾರು ಯಾವ ಸ್ಥಳಗಳಿಗೆ ಪ್ರವೇಶಿಸಬೇಕು, ಪ್ರವೇಶಿಸಬಾರದು ಮುಂತಾದ ನಿಷೇಧಗಳು ಜೀವಂತವಾಗಿರುವ ಗ್ರಾಮಾಂತರ ಪ್ರದೇಶಗಳಲ್ಲಿ ಅಭಿವೃದ್ಧಿ ಅಥವಾ ಪ್ರಗತಿಯು ಪ್ರಜಾಸತ್ತಾತ್ಮಕವಾಗಿ ಸಂಭವಿಸಲು ಸಾಧ್ಯವಿಲ್ಲ. ಕುಡಿಯುವ ನೀರಿನ ಸಂಗ್ರಹದ ಬಗ್ಗೆ ಡಾ|| ಬಿ. ಆರ್. ಅಂಬೇಡ್ಕರ್ ನಡೆಸಿದ ಮಹಾನ್ ನಾಯಕನ ಕೆರೆ ಹೋರಾಟ ಚರಿತ್ರೆಗೆ ಸೇರಿಲ್ಲ. ಆದರೆ ಇಂಥಹ ಕ್ರೂರ ಪದ್ಧತಿ. ಇನ್ನೂ ಜೀವಂತವಾಗಿರುವ ಸಂಗತಿ ನಮ್ಮ ದುರಿಗಿದೆ.

ಮಾನವ ಒಂದೇ ಸಂದರ್ಭಗಳಲ್ಲಿ ಏಕಾಂಗಿಯೂ ಹೌದು, ಸಂಘ ಜೀವಿಯೂ ಹೌದು ಏಕಾಂಗಿಯಾಗಿ ಅವನು ತನ್ನ ಸ್ವಂತ ಅಸ್ಥಿತ್ವದ ರಕ್ಷಣೆಗೋಸ್ಕರ ಹೊರಾಡುತ್ತಾನೆ. ತನ್ನ ಆಸೆಗಳ ಈಡೇರಿಕೆ ಮತ್ತು ಸ್ವಾಭಾವಿಕ ಸಾಮರ್ಥ್ಯದ ಅಭಿವೃದ್ಧಿಗಾಗಿ ಪ್ರಯತ್ನಿಸುತ್ತಾನೆ. ತನಗೆ ತೀರಾ ಹತ್ತಿರವಾದವರ ಯೋಗಕ್ಷೇಮ ಕುರಿತು ಚಿಂತಿಸುತ್ತಾನೆ. ಸಂಘಜೀವಿಯಾಗಿ ತನ್ನನ್ನು ನೆರೆಹೊರೆಯವರು ಗುರುತಿಸಬೇಕೆಂದು ಆಶಿಸುತ್ತಾನೆ. ಅವನ ಆನಂದದಲ್ಲಿ ಪಾಲ್ಗೊಳ್ಳಲು, ದುಃಖದಲ್ಲಿ ಸಮಾಧಾನಿಸಲು ಅವರ ಜೀವನ ಸ್ಥಿತಿಯನ್ನು ಉತ್ತಮಗೊಳಿಸಲು ಇಚ್ಚಿಸುತ್ತಾನೆ. ಆಗಾಗ್ಗೆ ಸಂಘರ್ಷಿಸುವ ಈ ವಿವಿಧ ಪ್ರವೃತ್ತಿಗಳ ಸಾಂಘಿಕ ನೆಲೆಗಳು, ಅವನ ಬಟ್ಟೆ, ವಸತಿ, ಭಾಷೆ, ಆಲೋಚನಾವಸ್ತು, ಆಲೋಚನಾ ತಂತ್ರ, ಆಲೋಚನರೂಪ, ಕಾರ್ಯ-ಸಾಧನ ಇವೆಲ್ಲವನ್ನು ಸಮಾಜವೇ ವ್ಯಕ್ತಿಗಳಿಗೆ ಒದಗಿಸುತ್ತದೆ. ಈ ಸೌಲಭ್ಯಗಳಿಗೆ ಧಕ್ಕೆಯಾದರೆ ಅವನು ವ್ಯವಸ್ಥೆಯೊಂದಿಗೆ ನಡೆಸುವ ಸಂಘರ್ಷ ಸಹಜವಾದುದು. ತಾನು, ತನ್ನಂತಿರುವ, ತನ್ನವರೊಡನೆ ಒಂದಾಗಿ, ನಿರ್ದಿಷ್ಟ ಗುರಿ, ಉದ್ದೇಶಗಳ ಈಡೇರಿಕೆಗಾಗಿ ನಡೆಸುವ ಈ ಹೋರಾಟದ ಸ್ವರೂಪ, ಗುರಿ, ಪರಿಣಾಮ ಎಲ್ಲವುಗಳು ಕುರಿತು ವೈಜ್ಞಾನಿಕ, ವಸ್ತುನಿಷ್ಠ ಅಧ್ಯಯನ ನನ್ನ ಸಂಶೋಧನೆಯ ಮಹತ್ವದ ಸಂಗತಿ ಎಂದು ಭಾವಿಸಿದ್ದೇನೆ.

ನೂರಾರು ಸಂಘಟನೆಗಳು ಹುಟ್ಟಿರುವ ಈ ನೆಲದಲ್ಲಿ ಸಂಘಟನೆಗಳು ನಿರಂತರ ಕ್ರಿಯಾಶೀಲತೆ, ಚಲನೆ ಶೀಲತೆ ಸಾಧ್ಯವಾಗಬೇಕು. ಕಾರಣ ಜನರ ನೋವು ಹಾಗೂ ಶೋಷಿತ ಸಮಾಜ ಆಗಿದೆ. ಹಳ್ಳಿಗಾಡಿನ ಜನರ ಕಡೆಗೆ ಪೂರ್ಣವಾಗಿ ಮುಖ ತಿರುಗಿಸಬೇಕು. ಎಲ್ಲಾ ಬಡ ಜನತೆಯ, ನೊಂದ ಜನತೆಯ, ದೀನದಲಿತರ, ದುರ್ಬಲರ, ಶ್ರಮಜೀವಿಗಳ ಹೋರಾಟದ ನಡುವೆ ಸಮನ್ವಯತೆ ಸಾಧಿಸಬೇಕು. ಇದಕ್ಕೆ ಖಚಿತ ರಾಜಕೀಯ ತಿಳುವಳಿಕೆಯ ಅವಶ್ಯಕತೆ ಇದೆ. ದುಡಿಯುವ ಜನತೆಯ ಸಂಘಟನೆಯ ತಳ ಮತ್ತಷ್ಟು ಗಟ್ಟಿಯಾಗಬೇಕು. ಇದು ಸಹ ನನ್ನ ಅಧ್ಯಯನದ ಮಹತ್ವ ಸಂಗತಿಗಳಲ್ಲಿ ಒಂದಾಗಿದೆ.

ಅತಿಯಾದ ಅಸಮಾನತೆಯಿಂದ ತುಂಬಿರುವ ನಮ್ಮಂತಹ ವ್ಯವಸ್ಥೆಯಲ್ಲಿ ಕುಟುಂಬ, ಸಮುದಾಯಗಳು ಬಲಗೊಳ್ಳುತ್ತಿವೆ ಎಂಬುದನ್ನು ಸಕಾರಾತ್ಮಕ ಬೆಳವಣಿಗೆಯೆಂದು ಭಾವಿಸಲು ಸಾಧ್ಯವಿಲ್ಲ. ಸಮಾಜ ಅಥವಾ ಸರಕಾರದಿಂದ ದೊರೆಯಬಹುದಾದ ಸೌಲಭ್ಯಗಳನ್ನು ಸಮಾಜದ ವಿವಿಧ ಸ್ಥರಗಳಿಗೆ ಸೇರಿದ ಜನರು ಬಳಸಿಕೊಳ್ಳುವ ಸಾಮರ್ಥ್ಯ ಬೇರೆ ಬೇರೆ ಆಗಿರುತ್ತದೆ. ಯಾವಾಗ ಪ್ರತಿಯೊಂದು ಸಮುದಾಯದ ದುಡಿಯುವ ಜನ ಪಾರಂಪರಿಕವಾಗಿ ಬಂದಿರುವ ಅಸಮಾನತೆಗಳಿಂದ ಹೊರಬರಲು ಸಮಾಜ ಅವಕಾಶ ಮಾಡಿಕೊಡುತ್ತದೆಯೋ ಆಗ ವ್ಯಕ್ತಿ ತನ್ನ ಕುಟುಂಬ ಸಮುದಾಯಗಳ ಅವಲಂಬನೆಯಿಂದ ಹೊರ ಬರಲು ಸಾಂಘಿಕ ಯತ್ನ ಮಾಡಲು ಸಾಧ್ಯವಾಗುತ್ತದೆ. ಆದುದರಿಂದ ದುರ್ಬಲ ಕುಟುಂಬ, ಸಮುದಾಯಗಳ ದೃಷ್ಠಿಯಿಂದ ಕುಟುಂಬ, ಸಮುದಾಯಗಳು ಬಲಗೊಳ್ಳುತ್ತಿವೆ ಎಂದರೆ ಅಸಮಾನತೆಯಿಂದ ದೂರವಾಗುತ್ತದೆ ಎಂದೇ ತಿಳಿಯಬೇಕಾಗುತ್ತದೆ. ಆಯ್ದ ಗ್ರಾಮಗಳ ಈ ತಾತ್ವಿಕ ನೆಲೆಗಟ್ಟಿನ ಮೇಲೆ ಗ್ರಾಮಗಳ ಕುಟುಂಬ, ಸಮುದಾಯಗಳ ಬಲಗೊಳ್ಳುವಿಕೆಯಲ್ಲಿ ಸಾಂಘಿಕ ಚಟುವಟಿಕೆಗಳ ಮೇಲೆ ಗಮನಹರಿಸುವುದೂ ಸಹ ನನ್ನ ಅಧ್ಯಯನ ಮಹತ್ವವನ್ನು ತಿಳಿಸುತ್ತದೆ.

ಮೂಲತಃ ಹೊಸಪೇಟೆ ಕೃಷಿ ಪ್ರಧಾನ ಪ್ರದೇಶ ಫಲವತ್ತಾದ ಮಣ್ಣನ್ನು ಹೊಂದಿರುವ ಭೂಪ್ರದೇಶ, ತುಂಗಾಭದ್ರಾ ಆಣೆಕಟ್ಟಿನ ಪ್ರದೇಶ ಕೂಡ ಕೃಷಿಯಲ್ಲಿ ಮಹತ್ವದ ಪಾತ್ರವಹಿಸಿದೆ. ಆದರೆ ಹೊಸಪೇಟೆ ತಾಲೂಕಿನ ಅನೇಕ ಗ್ರಾಮಗಳು ಇಂದಿಗೂ ಕೃಷಿಗೆ ಮಳೆಯ ನೀರು, ಕೊಳವೆ ಬಾವಿ ನೀರನ್ನೇ ಅವಲಂಬಿಸಿವೆ. ತಾಲೂಕಿನ ಎಲ್ಲಾ ಗ್ರಾಮಗಳಿಗೂ ಜಲಾಶಯದ ನೀರು ಲಭ್ಯವಾಗಿಲ್ಲ. ಹೊಸಪೇಟೆ ತಾಲ್ಲೂಕಿನ ಐತಿಹಾಸಿಕ ಕೆರೆಗಳು, ಕಾಲುವೆಗಳೂ, ಪ್ರಸಿದ್ಧ. ಆದರೆ ಅಂತಹ ಹಲವು ಕೆರೆಗಳು ಇಂದು ಹೂಳು ತುಂಬಿ ಹದಗೆಟ್ಟಿವೆ. ತಕ್ಕ ಪ್ರಮಾಣದ ನೀರು ಅವುಗಳಲ್ಲಿ ಶೇಖರಣೆ ಆಗುತ್ತಿಲ್ಲ.

ಕೆರೆಗಳ ಹೊಳನ್ನು ತೆಗೆದು ಜಲಾಶಯದ ನೀರನ್ನು ಸಂಗ್ರಹಿಸಿದರೆ ಈ ಗ್ರಾಮಗಳ ರೈತರ ಬಾಳು ಹಸನಾಗುವುದರಲ್ಲಿ ಸಂದೇಹವಿಲ್ಲ. ಆದರೆ ಈ ನಿಟ್ಟಿನಲ್ಲಿ ರೈತರ ಕೃಷಿಗೆ, ನೀರಾವರಿ ಅನುಕೂಲಕ್ಕಾಗಿ ನಡೆದ ಸಾಂಘಿಕ ನೆಲೆ ಮತ್ತು ಅದರ ಭಾಗವಾಗಿ ನಡೆದಿರುವ ಚಳುವಳಿಗಳಿಂದಾದ ಬದಲಾವಣೆಗಳನ್ನು ಕುರಿತು ಸಂಶೋಧನ ನಡೆಸುವುದು ನನ್ನ ಅಧ್ಯಯನ ಮಹತ್ವದ ಸಂಗತಿಯಾಗಿರುತ್ತದೆ.

ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕು ಸೇರಿದಂತೆ ಕರ್ನಾಟಕ ರಾಜ್ಯದಲ್ಲಿ ಅಭಿವೃದ್ಧಿ ನೀತಿಗಳು ಸಾಮಾಜಿಕ ಪರಿವರ್ತನೆಗೆ ಪೂರಕವಾಗಿರಲಿಲ್ಲ. ಸಾಮಾಜಿಕ ಅಸಮಾನತೆಗಳನ್ನು ಯಥಾ ರೀತಿಯಲ್ಲಿ ಇರಿಸಿಕೊಂಡು ನಡೆಸಿದ ಆಧುನೀಕರಣ ಪ್ರಕ್ರಿಯೆ ಸಮಾಜದ ಮೇಲು ವರ್ಗಗಳ, ಪಟ್ಟಭದ್ರರ ಹಿತಾಸಕ್ತಿಗೆ ಪೂರಕವಾಗಿಯೇ ಇತ್ತು. ಇದರಿಂದಾಗಿ ಕೆಳವರ್ಗಗಳು ತಮ್ಮ ಸಾಂಪ್ರದಾಯಿಕ ಮಾರ್ರಂಜಿತ ಬದುಕನ್ನು ತ್ಯಾಗ ಮಾಡಬೇಕಾಯಿತು. ಆದುದರಿಂದ ಇಂದಿನ ವ್ಯವಸ್ಥೆಯಲ್ಲಿ ನೋವಿರುವುದು ಕೆಳವರ್ಗದ ಅಸಹಾಯಕ ಪರಿಸ್ಥಿತಿ ಕುರಿತು. ಸಾಂಪ್ರದಾಯಿಕ ಬಡತನ ಕೇವಲ ಆರ್ಥಿಕ ಪ್ರಶ್ನೆ ಅಲ್ಲ. ಉತ್ತಮ ಕೂಲಿ, ಪೌಷ್ಠಿಕಾಂಶ, ಉತ್ತಮ ಶಿಕ್ಷಣ, ಆಶ್ರಯ ಇತ್ಯಾದಿಗಳು ಕೆಳವರ್ಗದ ಜನರಿಗೆ ಗಗನ ಕುಸುಮ. ಆದರೆ ಇದೆಲ್ಲಾ ಸಾಧ್ಯವಾಗುವುದು. ಈ ವರ್ಗಗಳ ಪ್ರಾತಿನಿಧಿಕ ಸಾಂಘಿಕ ನೆಲೆಗಳು ನಡೆಸುವ ರಚನಾತ್ಮಕವಾದ ಚಳುವಳಿಗಳಿಂದ ಮಾತ್ರ, ಗುಣಾತ್ಮಕ ಮತ್ತು ಪ್ರಮಾಣಾತ್ಮಕ ಸಾಮಾಜಿಕ ಬದಲಾವಣೆಗಳನ್ನು ತರಲು ಸಾಧ್ಯವೆಂಬುದನ್ನು ನಿದರ್ಶನಗಳ ಸಮೇತ ಅಧ್ಯಯನ ನಡೆಸುವುದು ನನ್ನ ಅಧ್ಯಯನದ ಮಹತ್ವಪೂರ್ಣ ಸಂಗತಿಗಳಲ್ಲಿ ಒಂದಾಗಿದೆ.

ಶೋಷಕ ಮತ್ತು ಶೋಷಿತ ವರ್ಗದ ಸಂಬಂಧಗಳು ಎಷ್ಟೇ ಅಸಹ್ಯವಾದರೂ ಅದೊಂದು ಚಾರಿತ್ರಿಕವಾಗಿ ರೂಪಗೊಂಡ ಸಂಬಂಧ ಮತ್ತು ಅದರಿಂದ ಇಬ್ಬರೂ ಪ್ರಭಾವಿತರು. ಅದರಲ್ಲಿ ಪರಸ್ಪರರು ಇಷ್ಟಪಡದ ಮತ್ತು ಪಡುವ ಅಂಶಗಳು ಇರಬಹುದು. ತಮ್ಮ ಕೈಕೆಳಗೆ ದುಡಿಯುವ ವ್ಯಕ್ತಿ ಬಗ್ಗೆ ಗುಣಹಾನಗಳಿರಬಹುದು. ಆದರೆ ಕೆಳ ಜಾತಿಗಳ ಬಗ್ಗೆ ಮಾತನಾಡುವಾಗ ಒಳ್ಳೆಯ ಅಂಶಗಳು ಸರಾಗವಾಗಿ ಬರಬಹುದು. ಅದಕ್ಕೆ ಬದಲಾಗಿ ಕೆಳವರ್ಗಗಳ ಬಗ್ಗೆ ಕೆಟ್ಟ ಗುಣಗಳ ಪಟ್ಟಿಯೇ ದೊರೆಯಬಹುದು. ಅವರ ಮೈಗಳ್ಳತನ, ಹೆಚ್ಚು ಸಂಬಳ ಕೇಳುವುದು, ಕಡಿಮೆ ಕೆಲಸ ಮಾಡುವುದು, ಪ್ರಾಮಾಣಿಕರಲ್ಲದಿರುವುದು, ಸುಳ್ಳು ಹೇಳುವುದು ಹೀಗೆ ದುಡಿತದ ಮಾರ್ಗಕ್ಕೆ ಕೇವಲ ಮೆಟೇರಿಯಲ್ ವಂಚನೆ ಮಾತ್ರವಲ್ಲ.

ಸಾಮಾಜಿಕ ಸ್ಥಾನಮಾನದ ವಂಚನೆಕೊಡ ನಡೆದೇ ಇದೆ. ಕೆಳವರ್ಗದ ನಿಂದನೆ ಮತ್ತು ಅವಹೇಳನ ಮೇಲು ವರ್ಗದ ಯಜಮಾನಿಕೆಗೆ ಅನಿವಾರ್ಯ. ಕೇವಲ ಸಂಪನ್ಮೂಲದ ಒಡೆತನ ಮೇಲು ವರ್ಗಕ್ಕೆ ಎಲ್ಲಾಕ್ಷೇತ್ರಗಳಲ್ಲೂ ಯಜಮಾನಿಕೆಯನ್ನು ಕೊಡ ಮಾಡುವುದಿಲ್ಲ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಯಜಮಾನಿಕೆ ಸಂಪನ್ಮೂಲದ ಯಜಮಾನಿಕೆಯನ್ನು ಕಾಪಾಡಲು ಅಗತ್ಯ. ಆದುದರಿಂದ ಕೆಳವರ್ಗದ ಜನರಲ್ಲಿ ಒಳ್ಳೆಯ ಅಂಶಗಳನ್ನು ಗುರುತಿಸಿ, ತಮ್ಮ ಹಿತಾಸಕ್ತಿ ಕಾಪಾಡಲು, ಸಂಘಟಿತರಾಗಿ ಸಾಂಘಿಕ ಪ್ರವೃತ್ತಿಯಲ್ಲಿ ತೊಡಗುವಂತೆ ಪ್ರೇರೇಪಿಸುವ ತಂತ್ರಗಳನ್ನು ರೂಪಿಸುವಲ್ಲಿ ನನ್ನ ಅಧ್ಯಯನ ಈ ದೃಷ್ಠಿಯಿಂದಲೂ ಮಹತ್ವವಾಗಿರುತ್ತದೆ.

ದುಡಿಯುವ ಜನವಿಭಾಗಗಳಾದ ರೈತರು, ಕಾರ್ಮಿಕರು, ಕೃಷಿಕೂಲಿಕಾರರು, ಮೊದಲಾದವರ ತಮ್ಮ ಬದುಕಿನ ಆಧುನಿಕ ಸವಾಲುಗಳನ್ನು ಎದುರಿಸಲು ಆ ಮೂಲಕ ಅವರ ನೈಜ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ತಮ್ಮವರೊಂದಿಗೆ ಒಂದಾಗಿ ಸಾಂಘಿಕ ಪ್ರವೃತ್ತಿ, ಚುಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಸೂಕ್ತ ವೇದಿಕೆ ಒದಗಿಸುವ ದೃಷ್ಠಿಯಿಂದಲೂ ನನ್ನ ಅಧ್ಯಯನ ಬಹುಮಟ್ಟಿಗೆ ಮಹತ್ವದ ಹೊಣೆಗಾರಿಕೆಯನ್ನು ಹೊಂದಿರುತ್ತದೆ.

ಇದರ ಜೊತೆಗೆ ನಿರುದ್ಯೋಗಿ, ಬಡತನ ದಾರಿದ್ರ್ಯ, ಅನಕ್ಷರತೆ, ಲೈಂಗಿಕ ಶೋಷಣೆ, ಬಾಲಕಾರ್ಮಿಕ ಪದ್ಧತಿ, ದೇವದಾಸಿಯಂಥಹ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಮಸ್ಯೆಗಳ ವಿರುದ್ಧವಾಗಿ ಮೂಡಿಬರುವ ಜನಾಂದೋಲನಗಳಲ್ಲಿ ಸಮನ್ವಯನ್ನು ಪ್ರತಿಪಾದಿಸುವುದು ನನ್ನ ಅಧ್ಯಯನದ ಮಹತ್ವ ಅಡಗಿದೆ.

ಈ ಎಲ್ಲಾ ಜ್ವಲಂತ ಸಮಸ್ಯೆಗಳಿಗೆ ಎಲ್ಲಾ ರೀತಿಯ ಪರಿಹಾರ ನೀಡಬಲ್ಲದೆಂಬ ಹುಸಿಭ್ರಮೆಯ ಹೊರತಾಗಿಯೂ ಸಾಂಘಿಕ ಚಟುವಟಿಕೆಗಳಿಗೆ ಸೂಕ್ತ ಪ್ರೇರಕ ಶಕ್ತಿಯಾಗಲು ಪ್ರಾಮಾಣಿಕ ಪ್ರಯತ್ನ ಮಾಡುವ ದೃಢ ವಿಶ್ವಾಸ ಮಾತ್ರ ನನ್ನದು.

**೧.೪ : ಅಧ್ಯಯನದ ವಿಧಿ – ವಿಧಾನಗಳು :**

ಪ್ರಸ್ತುತ ಅಧ್ಯಯನಕ್ಕೆ ಈ ಸಾಂಘಿಕ ಪ್ರವೃತ್ತಿಗಳಲ್ಲಿ ಭಾಗಿಯಾಗಿರುವ ಮಾಹಿತಿದಾರ ರಿಂದ ಮಾಹಿತಿಗಳನ್ನು ಪಡೆಯಲಾಗಿದೆ.

ಮಾಹಿತಿಗಳ ಸಂಗ್ರಹಕ್ಕೆ ಅವಲೋಕನ, ಪ್ರಶ್ನಾವಳಿ ಹಾಗೂ ಸಂದರ್ಶನ ವಿಧಾನಗಳನ್ನು ಅಳವಡಿಸಲಾಗಿದೆ. ಮಾಹಿತಿ ಸಂಗ್ರಹಣೆಯಲ್ಲಿ ಮಾಹಿತಿದಾರರೊಂದಿಗೆ ಪ್ರಶ್ನೆಗಳನ್ನು ಕೇಳುವ ಮುಖಾಂತರ ಹಾಗೂ ಅವರೊಂದಿಗೆ ಚರ್ಚಿಸುವ ಮುಖಾಂತರ ಕ್ರೂಢೀಕರಿಸಲಾಗಿದೆ. ಕೆಲವೊಂದು ಸಾಂಘಿಕ ನೆಲೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಮುಖಾಂತರ ಮಾಹಿತಿ ಸಂಗ್ರಹಿಸಲಾಗಿದೆ. ವಿವಿಧ

ಸಂದರ್ಭದಲ್ಲಿ ಛಾಯಾಚಿತ್ರ, ಹಾಗೂ ರೆಕಾರ್ಡ್ ಮಾಡುವ ಮೂಲಕ ಮಾಹಿತಿಗಳನ್ನು ಪಡೆಯಲಾಗಿದೆ. ಒಟ್ಟಾರೆ ಕ್ಷೇತ್ರ, ಕಾರ್ಯವು ಈ ಅಧ್ಯಯನಕ್ಕೆ ಪ್ರಧಾನವಾದ ಮಾಹಿತಿಗಳನ್ನು ಒದಗಿಸಿದೆ. ಹಾಗಾಗಿ ಇದೊಂದು ಕ್ಷೇತ್ರ, ಕಾರ್ಯಾಧಾರಿತ ಅಧ್ಯಯನವೆನ್ನಬಹುದು.

ಅಧ್ಯಯನದ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ಈ ಕೆಳಗಿನ ಅಧ್ಯಯನ ವಿಧಾನ ಹಾಗೂ ಸಾಧನಗಳ ಸಹಾಯ ಪಡೆಯಲಾಗಿದೆ.

೧. ಸಂದರ್ಶನ ಮತ್ತು ಪ್ರಶ್ನಾವಳಿ ವಿಧಾನ

೨. ಅವಲೋಕನ ವಿಧಾನ

೩. ಔಪಚಾರಿಕ ಸಂದರ್ಶನಗಳು

೪. ಅನೌಪಚಾರಿಕ ಸಂದರ್ಶನಗಳು

೫. ಧ್ವನಿ ಮುದ್ರಿಕೆ ಯಂತ್ರ

೬. ಕ್ಯಾಮರಾ

ಮಾಹಿತಿಗಳನ್ನು ಸಂಗ್ರಹಿಸಲು ಈ ಕೆಳಕಂಡವರಿಂದ ಮಾಹಿತಿಗಳನ್ನು ಪಡೆಯಲಾಯಿತು.

೧. ಜನಪದ ಮಾಹಿತಿದಾರರು

೨. ಕಲಾವಿದರು

೩. ಸಾಹಿತಿಗಳು

೪. ವಿದ್ವಾಂಸರು

೫. ಅರ್ಚಕರು

೬. ಮಠಾಧೀಶರು

೭. ಅಧಿಕಾರಿಗಳು

೮. ಸ್ಥಳೀಯ ರಾಜಕಾರಣಿಗಳು

ಎರಡನೆಯದಾಗಿ ಪ್ರಸ್ತುತ ಅಧ್ಯಯನಕ್ಕೆ ಈಗಾಗಲೇ ಪ್ರಕಟಿತ ಗ್ರಂಥಗಳು ಹಾಗೂ ಇತರೆ ದಾಖಲೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಗತ್ಯಕ್ಕೆ ತಕ್ಕಂತೆ ಅಧ್ಯಯನದ ವಿಶ್ಲೇಷಣೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಇದರ ಜೊತೆಗೆ ಸಾಂಘಿಕ ನೆಲೆಗಳ ಬಗೆಗೆ ತಿಳಿದುಕೊಂಡಿರುವ ಹಿರಿಯ ಮಾಹಿತಿದಾರರು ಹಾಗೂ ವಿದ್ವಾಂಸರೊಂದಿಗೆ ಚರ್ಚಿಸಿ ಅಧ್ಯಯನ ಮಾಡಲಾಗಿದೆ. ಇದೊಂದು ಮಾಹಿತಿ ಪ್ರಧಾನವಾದ ಅಧ್ಯಯನವಾಗಿದ್ದು, ಅಲ್ಲಲ್ಲಿ ಅಗತ್ಯಕ್ಕೆ ತಕ್ಕಂತೆ ವಿಶ್ಲೇಷಣೆಯನ್ನು ಮಾಡಲಾಗಿದೆ.

## ನನ್ನ ಅಧ್ಯಯನದ ಹರವು ಈ ಕೆಳಗಿನಂತಿದೆ

## ಅಧ್ಯಾಯ-೨

# ಹೊಸಪೇಟೆ ಭೌಗೋಳಿಕ ವಿಶ್ಲೇಷಣೆ

ಹೊಸಪೇಟೆ ನಗರವು ಪೂರ್ವದಿಕ್ಕಿನಲ್ಲಿ ಶ್ರೀಮದ್ವಿಜಯನಗರದ ಮಹಾರಾಜ್ಯಾವ- ಶೇಷ-ಯುಕ್ತವಾದ ಪುರಾಣ ಪ್ರಸಿದ್ಧ ಶ್ರೀ ಪಂಪಾಕ್ಷೇತ್ರದಿಂದ ಏಳು ಮೈಲು ಅಂತರದಲ್ಲಿಯೂ, ದಕ್ಷಿಣಕ್ಕೆ ಶ್ರೀ ಜಂಬುನಾಥ ಪರ್ವದಿಂದ ನಾಲ್ಕು ಮೈಲು ಅಂತರದಲ್ಲಿಯೂ ಪಶ್ಚಿಮಕ್ಕೆ ತುಂಗಾಭದ್ರಾ ಜಲಾಶಯದಿಂದ ಮೂರು ಮೈಲು ಅಂತರದಲ್ಲಿಯೂ, ಉತ್ತರಕ್ಕೆ ತುಂಗಾಭದ್ರಾನದಿ ಮತ್ತು ಹೊಸೂರಮ್ಮ - ಹುಲಿಗೆಮ್ಮ ಎಂಬ ಪುರಾಣ ಪ್ರಸಿದ್ಧವಾದ ದುರ್ಗಾಕ್ಷೇತ್ರಗಳಿಂದ ನಾಲ್ಕು ಮೈಲು ಅಂತರದಲ್ಲಿಯೂ ಇದೆ. ಅನೇಕಾನೇಕ ಜ್ಞಾನಡ್ಯ, ಧನಾಡ್ಯ, ಬಲಾಢ್ಯ ಜನ ಸಮೂಹದಿಂದ ಜನನಿತವಾಗಿ ಕಂಗೊಳಿಸುತ್ತದೆ. ಈ ಪಟ್ಟಣದ ಪ್ರಧಾನ ರಾಜ ಮಾರ್ಗವು ಗ್ರಾಮ ಸೀಮಂತ ನಿಕೇಶ ವೀಧಿಯಿಂದ ದಕ್ಷಿಣಾಗ್ರಭಾಗದಲ್ಲಿ ಸೀಮಂತ ಮಾಣಿಕ್ಯಪದಕದಂತಿರುವ ವಡಕರಾಯನೆಂಬ ಪ್ರಾಣದೇವರ ದೇವಸ್ಥಾನದಿಂದ ಪರಿಶೋಭಿಸುತ್ತಿದೆ.

ಹೊಸಪೇಟೆ ತಾಲೂಕು ಪ್ರದೇಶವನ್ನು ಭೌಗೋಳಿಕವಾಗಿ ಎರಡು ಭಾಗಗಳಾಗಿ ಗುರುತಿಸಬಹುದು. ತಾಲೂಕಿನ ಹೆಚ್ಚು ವಿಶಾಲವಾಗಿರುವ ಪ್ರದೇಶವನ್ನು ಈಶಾನ್ಯದಲ್ಲಿ ಸಿರುಗುಪ್ಪ, ಪೂರ್ವದಲ್ಲಿ ಬಳ್ಳಾರಿ, ದಕ್ಷಿಣದಲ್ಲಿ ಸೊಂಡೂರು ಹಾಗೂ ಉತ್ತರದಲ್ಲಿ ಕೊಪ್ಪಳ ಜಿಲ್ಲೆ ಪ್ರದೇಶಗಳು ಸುತ್ತುವರೆದಿವೆ. ನೈರುತ್ಯಕ್ಕಿರುವ ತಾಲೂಕಿನ ಮತ್ತೊಂದು ಭಾಗ ಪೂರ್ವದಲ್ಲಿ ಸೊಂಡೂರು, ದಕ್ಷಿಣದಲ್ಲಿ ಕೂಡ್ಲಿಗಿ, ಪಶ್ಚಿಮದಲ್ಲಿ ಹಗರಿಬೊಮ್ಮನಹಳ್ಳಿ ಮತ್ತು ಉತ್ತರದಲ್ಲಿ ಜಲಾಶಯದ ಹಿನ್ನೀರಿನ ಪ್ರದೇಶಗಳಿಂದ ಸುತ್ತುವರೆದಿದೆ. ಹೆಚ್ಚಿನ ಪ್ರದೇಶವು ತೆಳು ಮಿಶ್ರಿತ ಮಣ್ಣಿನಿಂದ ಆವೃತವಾಗಿದೆ. ಜಿಲ್ಲೆಯ ಪಶ್ಚಿಮ ಮತ್ತು ಉತ್ತರದ ಗಡಿಯಲ್ಲಿ ತುಂಗಾಭದ್ರಾನದಿ ಹರಿಯುತ್ತಿದ್ದು, ಆ ಗಡಿಯ ನಡುವೆ ಹೊಸಪೇಟೆ ತಾಲೂಕು ಬಳಸಿ ನಿಂತಿದೆ.

ಹೊಸಪೇಟೆಯು ರೇಖಾಂಶ ೭೬°, ೨೬', ೧೩'' ಮತ್ತು ಅಕ್ಷಾಂಶ ೧೫° ೧೫' ೩೬'' ರಲ್ಲಿ ಸಂಧಿಸಿದ್ದು, ಸಮುದ್ರ ಪಾತಳಿಯಿಂದ ೪೬೭ ಮೀಟರ್ ಎತ್ತರದಲ್ಲಿದೆ. ಒಂಭತ್ತು ಚ.ಕಿ. ಮೀಟರ್ ವಿಶಾಲ ನಗರವು ದಕ್ಷಿಣದಿಂದ ಉತ್ತರಕ್ಕೆ, ಪೂರ್ವದಿಂದ ಪಶ್ಚಿಮಕ್ಕೆ ಇಳಿಜಾರಾಗಿರುವ ಪ್ರದೇಶದಿಂದ ಕೂಡಿದೆ. ನಗರದ ದಕ್ಷಿಣದಲ್ಲಿ ಜೋಳದ ರಾಶಿ ಗುಡ್ಡವು ಎತ್ತರಕ್ಕೆ ತನ್ನ ಶಿರವನ್ನೆತ್ತಿ ನಿಂತಿದೆ. ಹೊಸಪೇಟೆ ನಗರದ ದಕ್ಷಿಣದಲ್ಲಿ ಚಾಚಿರುವ ಸೊಂಡೂರು ಪರ್ವತ ಶ್ರೇಣಿಯಲ್ಲಿ ಜಂಬುನಾಥ ಗುಡ್ಡವು ೯೦೮ ಮೀಟರ್ ಎತ್ತರವಾಗಿದೆ. ಏರು ತಗ್ಗುಗಳಿಂದ ಕೂಡಿದ ಭೂಮಿ ನಗರವನ್ನು ಮೂರು ದಿಕ್ಕಿನಿಂದ ಆವರಿಸಿದೆ. ಪಶ್ಚಿಮ ಹಾಗೂ ಉತ್ತರ ದಿಕ್ಕಿನಲ್ಲಿ ಫಲವತ್ತಾದ ತರಿಭೂಮಿಯಿದ್ದು, ನಗರದಿಂದ ಮೂರು ಕಿಲೋಮೀಟರ್ ತುಂಗಾಭದ್ರಾ ನದಿವರೆಗೂ ವಿಸ್ತರಿಸಿದೆ.

ಹೊಸಪೇಟೆಗೆ ಮಹತ್ವವನ್ನು ತಂದುಕೊಟ್ಟ ಪ್ರಮುಖ ಪ್ರಾಕೃತಿಕ, ಸನ್ನಿವೇಶವೇ ತುಂಗಾಭದ್ರಾ ನದಿಯಾಗಿದೆ. ಪುರಾಣಯುಗದಲ್ಲಿ ‘ ಪಂಪಾ ’ ನಾಮದಿಂದ ಕರೆಯಲ್ಪಟ್ಟ ನದಿ ಶಿವಮೊಗ್ಗ ಜಿಲ್ಲೆಯ ವರಾಹ ಪರ್ವತದಲ್ಲಿ ಜನ್ಮ ತಾಳಿದೆ. ಶಿವಮೊಗ್ಗೆಯ ಸಮೀಪ ಕೂಡಲಿವರೆಗೆ ಬೇರೆ ಬೇರೆಯಾಗಿ ಬಂದ ತುಂಗಾ ಮತ್ತು ಭದ್ರಾ ನದಿಗಳು ಸಂಗಮಗೊಂಡು ತುಂಗಾಭದ್ರೆಯಾಗಿ ಮುಂದುವರೆಯುವಳು. ಹರಿಹರ ಕ್ಷೇತ್ರದಿಂದ ಐದಾರು ಕಿ.ಮೀ. ಬಳ್ಳಾರಿ ಜಿಲ್ಲೆಯ ಪ್ರವೇಶ ಪಡೆಯುವ ಈ ನದಿ ಪಶ್ಚಿಮ ಮತ್ತು ಉತ್ತರ ಭಾಗದ ಗಡಿಯಾಗಿಯೇ ಇದ್ದು, ಮುಂದೆ ಸಿರುಗುಪ್ಪದಿಂದ ಜಿಲ್ಲೆಯನ್ನು ಬಿಟ್ಟು ಮುಂದೆ ಸಾಗುತ್ತದೆ. ತುಂಗಾಭದ್ರೆ ನೀರು ವೈಶಿಷ್ಟ್ಯ ಪೂರ್ಣವಾದುದು. ಅಂತೆಯೇ ‘ಗಂಗಾಸ್ನಾನ ತುಂಗಾಪಾನ’ ಎನ್ನುವ ಗಾದೆ ರೂಢಿಗೆ ಬಂದಿದೆ. ಹೊಸಪೇಟೆ ತಾಲೂಕಿನ ಜನರ ಜೀವನದಲ್ಲಿ ತುಂಗಾ ಭದ್ರಾನದಿಯ ಪಾತ್ರ ಸೇರಿಕೊಂಡಿದೆ. ತುಂಗಾಭದ್ರಾ ಜಲಾಶಯದಿಂದ ಹೊಸಪೇಟೆ ತಾಲೂಕಿನ ಜನತೆ ತುಂಬಾ ಉಪಕೃತರಾಗಿದ್ದಾರೆ.

ಹೊಸಪೇಟೆ ತಾಲೂಕಿನಲ್ಲಿ ಶೇ. ೮ ರಷ್ಟು ಭೂಮಿ ಕಪ್ಪು ಮಣ್ಣಿನಿಂದ ಕೂಡಿದೆ. ಕೆಂಪು ಮಣ್ಣಿನ ಭೂಮಿಯ ಅಂಶ ಶೇ. ೨ರಷ್ಟು ಇದೆ. ಮಿಶ್ರಮಣ್ಣಿನ ಭೂಮಿ ಉಳಿದ ಶೇ. ೯೦ ರಷ್ಟಿದೆ ಹಾಗಾಗಿ ಹೊಸಪೇಟೆ ತಾಲೂಕಿನ ಭೂಮಿ ಫಲವತ್ತಾದುದೆಂದು ಹೆಸರು ಪಡೆದಿದೆ. ನೀರಾವರಿ ಸೌಲಭ್ಯದಿಂದ ಉತ್ತಮ ಮಟ್ಟದ ಕೃಷಿ ಹೊಸಪೇಟೆ ಸುತ್ತಮುತ್ತಲೂ ಇದೆ. ಮಾರ್ಚ ತಿಂಗಳಿನಿಂದ ಮೇ ತಿಂಗಳ ತನಕ ಹವಾಗುಣವು ಹೆಚ್ಚಿನ ಉಷ್ಣತೆಯಿಂದಾಗಿ ತುಂಬಾ ತಾಪದಾಯಕವಾಗಿರುತ್ತದೆ. ಆದ್ರ್ರತೆ ಕಡಿಮೆಯಿರುವುದರಿಂದ ಉಷ್ಣತಾಮಾನವನ್ನು ಸಮುದ್ರ ತೀರದ ಪ್ರದೇಶಗಳಿಗಿಂತ ಸುಲುಭವಾಗಿ ಸಹಿಸಬಹುದು. ಮೇ ತಿಂಗಳಿನಿಂದ ಅಕ್ಟೋಬರ್ ವರೆಗೆ ಸಾಕಷ್ಟು ತಂಪಾದ ಹವಾಮಾನವಿರುತ್ತದೆ. ನವ್ಹೆಂಬರ್ ತಿಂಗಳಿನಿಂದ ಫೆಬ್ರವರಿವರೆಗೆ ನಿಜವಾದ ಚಳಿಗಾಲವಿರುತ್ತದೆ. ಆಗ ಹಗಲು ಪ್ರಶಾಂತವಾಗಿದ್ದು, ರಾತ್ರಿ ತುಂಬಾ ತಣ್ಣಗಿರುತ್ತದೆ. ಉನ್ನತ ಪ್ರದೇಶದಲ್ಲಿರುವ ಹೊಸಪೇಟೆಯ ಚಳಿ ಕೆಲವು ಬಾರಿ ವಿಪರೀತಕ್ಕೇರುತ್ತದೆ. ವರ್ಷಕ್ಕೆ ಒಂಭತ್ತು ತಿಂಗಳು ಸಾಮಾನ್ಯವಾಗಿ ಯೋಗ್ಯ ವಾತಾವರಣ ಇರುತ್ತದೆ ಎಂದು ಹೇಳಬಹುದು. ಮಳೆಮಾತ್ರ ವಾಡಿಕೆಮಳೆ ಸರಾಸರಿ ವರ್ಷಕ್ಕೆ ೯೫೮.೫ ಮಿ.ಮೀ ಬೀಳುತ್ತದೆ.

ಸರಾಸರಿ ಮಳೆ ಬೀಳುವ ದಿನಗಳ ಸಂಖ್ಯೆ ವರ್ಷಕ್ಕೆ ೫೩ ದಿನಗಳಾಗಿವೆ. ವಾಸ್ತವಿಕ ಮಳೆ ವರ್ಷಕ್ಕೆ ೭೦೭.೭ ಹೊಸಪೇಟೆ ತಾಲೂಕಿನ ವಿಸ್ತೀರ್ಣ ೯೩೪ ಚ.ಕಿ.ಮೀ ಒಟ್ಟು ಜನವಸತಿಯುಳ್ಳ ೭೫ ಗ್ರಾಮಗಳು ೪೭ ಹ್ಯಾಮ್ಲೆಟ್ (ತಾಂಡಾ, ಕ್ಯಾಂಪ್ ಇತ್ಯಾದಿ) ಗಳಿವೆ. ಈ ತಾಲೂಕಿನ ಒಟ್ಟು ಜನಸಂಖ್ಯೆ ೨೦೦೧ ರ ಜನಗಣತಿ ಪ್ರಕಾರ ೩.೭೪.೯೪೯ ಇರುತ್ತದೆ. ಹೊಸಪೇಟೆ ತಾಲೂಕಿನಲ್ಲಿ ತುಂಗಾಭದ್ರಾ ನೀರಾವರಿ ಪ್ರದೇಶ ಒಟ್ಟು ೨೩೦೦೭ ಹೆಕ್ಟೇರು ಇದೆ. ವರ್ಷದ ಹನ್ನೊಂದು ತಿಂಗಳು ನೀರು ಬೀರುವ ೧೮ ಸಾವಿರ ಹೆಕ್ಟೇರು ಪ್ರದೇಶ ಇದರಲ್ಲಿ ಸೇರಿರುತ್ತದೆ. ಒಟ್ಟಾರೆ ಹೊಸಪೇಟೆ ತಾಲೂಕಿನ ಭೂಬಳಕೆ ೯೩೩೭೪ ಹೆಕ್ಟೇರಿರುತ್ತದೆ. ಇದರಲ್ಲಿ ೨೪೯೭೦ ಅರಣ್ಯ ಪ್ರದೇಶವೂ ಸೇರಿರುತ್ತದೆ.

ಕಬ್ಬಿಣದ ಅದಿರಿಗೆ ಹೊಸಪೇಟೆ ತಾಲೂಕು ಪ್ರಸಿದ್ಧಿ ಪಡೆದಿದೆ. ಬಳ್ಳಾರಿ ಜಿಲ್ಲೆಯಲ್ಲಿ ಸಂಡೂರು ಬಿಟ್ಟರೆ ಹೊಸಪೇಟೆಯೇ ಹೆಚ್ಚಿನ ನಿಕ್ಷೇಪ ಹೊಂದಿದೆ. ವಿಜಯನಗರ ಕಾಲದಲ್ಲಿಯೇ ಪಾಶ್ಚಾತ್ಯ ದೇಶಗಳಿಂದ ಇಲ್ಲಿಯ ಖನಿಜಕ್ಕೆ ಸಾಕಷ್ಟು ಬೇಡಿಕೆ ಇತ್ತೆಂದು ತಿಳಿದು ಬರುತ್ತದೆ. ಹೊಸಪೇಟೆಯ ಬೆಟ್ಟಗಳಲ್ಲಿ ದೊರೆಯುವ ಅದಿರಿನಲ್ಲಿ ಕಬ್ಬಿಣದ ಅಂಶ ಹೆಚ್ಚಿರುವುದರಿಂದ ಇದು ವಿದೇಶಗಳಲ್ಲಿ ಭಾರಿ ಬೇಡಿಕೆ ಬರಲು ಕಾರಣವಾಗಿದೆ. ಸೊಂಡೂರು ಹೊಸಪೇಟೆಯ ಮಧ್ಯ ನೈಋತ್ಯ ದಿಕ್ಕಿನಿಂದ ವಾಯುವ್ಯ ದಿಕ್ಕಿಗೆ ವಿಸ್ತರಿಸುವ ಸುಮಾರು ೪೦ ಕಿ.ಮೀ ಉದ್ದ ೨೦ ಕಿ.ಮೀ ಅಗಲದಷ್ಟು ವಿಸ್ತಾರ ಪ್ರದೇಶವನ್ನು ಹೊಂದಿರುವ ಪರ್ವತದಲ್ಲಿ "IRON FIRMATION" ಎಂಬ ಕಲ್ಲಿನಿಂದ ಕಬ್ಬಿಣದ ಅದಿರು ದೊರೆಯುತ್ತದೆ. ಸಂಡೂರು ಮತ್ತು ಹೊಸಪೇಟೆ ಮಧ್ಯದಲ್ಲಿ ಒಟ್ಟು ೬೫ ಕಬ್ಬಿಣದ ಅದಿರಿನ ನಿಕ್ಷೇಪಗಳಿವೆ.

ಅಲ್ಲಲ್ಲಿ ಕಂಡು ಬರುವ ಬೆಟ್ಟಗುಡ್ಡಗಳು ಪ್ರಾಕೃತಿಕ ಸೌಂದರ್ಯವನ್ನು ಇಮ್ಮಡಿಗೊಳಿಸುವೆ. ಕಂಪ್ಲಿ ಬೆಟ್ಟ ಸಾಲಿನ ತಿಮ್ಮಾಪುರ ಬೆಟ್ಟ ಹೆಚ್ಚು ಎತ್ತರವಾದುದು. ಅದೇ ರೀತಿ ಹೊಸಪೇಟೆ ಬಳಿ ವಾಯುವ್ಯ ಆಗ್ನೇಯವಾಗಿ ಚಾಚಿರುವ ಸೊಂಡೂರು ಬೆಟ್ಟ ಸಾಲುಗಳು ಸಹಾ ಅತಿಎತ್ತರದಲ್ಲಿವೆ. ಇವು ಕಬ್ಬಿಣದ ಅದಿರಿನಿಂದ ಕೂಡಿವೆ. ಹೊಸಪೇಟೆ ಪಟ್ಟಣಕ್ಕೆ ಹೊಂದಿಕೊಂಡಂತಿರುವ ಜೋಳದರಾಶಿಗುಡ್ಡ ಆಕರ್ಷಕವಾಗಿದ್ದು, ಅದರ ಮೇಲೆ ನಿಂತು ನೋಡಿದಾಗ ಹೊಸಪೇಟೆ ನಗರದ ವಿಹಂಗಮ ನೋಟವನ್ನು ಕಾಣಬಹುದು. ಉತ್ತರದಲ್ಲಿ ಹರಿಯುವ ತುಂಗಾಭದ್ರಾ ನದಿ ಹೊಸಪೇಟೆ ತಾಲೂಕು ಮತ್ತು ಕೊಪ್ಪಳ ಜಿಲ್ಲೆಯ ಗಡಿಯಲ್ಲಿ ಹರಿಯುತ್ತದೆ. ತುಂಗಾಭದ್ರಾ ಜಲಾಶಯದಿಂದ ಹೊರಡುವ ಇದರ ಕಾಲುವೆಗಳು ಹೊಸಪೇಟೆ ಪಟ್ಟಣದೊಳಗೆ ಹರಿದು ನಂತರ ಕೃಷಿ ಭೂಮಿಗೆ ನೀರುಣ್ಣಿಸುತ್ತದೆ. ನದಿಗೆ ಅಲ್ಲಲ್ಲಿ ಹಳೆಯ ಸಣ್ಣ ಸಣ್ಣ ಆಣೆಕಟ್ಟೆಗಳಿದ್ದು, ಅವು ಸಹ ಕಾಲುವೆಗಳ ಮೂಲಕ ಕೃಷಿಗೆ ನೀರೋದಗಿಸುತ್ತದೆ. ಜೊತೆಗೆ ಕೆರೆ, ಬಾವಿಗಳಿಂದಲೂ ನೀರನ್ನು ಕೃಷಿಗೆ ಬಳಸಿಕೊಳ್ಳುತ್ತಾರೆ. ಭತ್ತ, ಕಬ್ಬು, ಬಾಳೆ, ಜೋಳ, ಶೇಂಗಾ, ದ್ವಿದಳ ಧಾನ್ಯಗಳು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಪಶುಪಾಲನೆ, ಮತ್ಸೋದ್ಯಮ ಹೇರಳವಾಗಿದೆ. ಹೊಸಪೇಟೆ ತಾಲೂಕಿನಲ್ಲಿ ಒಟ್ಟು ೨೯೦೦೦ ಹೆಕ್ಟೇರು ಪ್ರದೇಶ ಮೀಸಲು ಅರಣ್ಯ ಪ್ರದೇಶವಿದೆ. ಅರಣ್ಯವು ಕುರುಚಲು ಸ್ವರೂಪದ್ದು, ಕರಡಿ, ಚಿರತೆ, ಜಿಂಕೆ, ನರಿ, ತೋಳ ಮುಂತಾದ ಪ್ರಾಣಿಗಳು ಜೀವಿಸಿವೆ.

**ಹೊಸಪೇಟೆ ತಾಲೂಕಿನ ಚಾರಿತ್ರಿಕ ವಿಶ್ಲೇಷಣೆ :**

ಅಪಾರ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿರುವ ಹೊಸಪೇಟೆ ತಾಲೂಕು ಪ್ರದೇಶವು ಪ್ರಾಚೀನ ಕಾಲದಿಂದಲೂ ಮಾನವನ ಚಟುವಟಿಕೆಗಳ ಕೇಂದ್ರವೂ ಆಗಿತ್ತೆಂದು ನಮಗೆ ತಿಳಿದು ಬರುತ್ತದೆ. ತುಂಗಾಭದ್ರಾನದಿಯ ಐತಿಹಾಸಿಕ ಹಂಪಿ ಪರಿಸರದಲ್ಲಿ ಸೂಕ್ಷ್ಮ ಶಿಲಾಯುಗದ ಆಯುಧೋಪಕರಣಗಳು ಕಂಡು ಬರುತ್ತವೆ. ನವ ಶಿಲಾಯುಗ ಕಾಲಕ್ಕೆ ಸೇರುವ ವರ್ಣಚಿತ್ರಗಳು ಹಾಗೂ ಮಾನವನ ಚಿತ್ರಗಳು ಮುಖ್ಯವಾಗಿವೆ. ಈ ಸಂಸ್ಕೃತಿಗೆ ಸಂಬಂಧಪಟ್ಟ ಬೂದಿ ಮಡಿಕೆ ಅವಶೇಷಗಳು ವಿಠಲ ದೇವಾಲಯದ ಬಳಿಯಿರುವ ಮೊಸಳಯ್ಯನ ಗುಡ್ಡದಲ್ಲಿ ಕಂಡು ಬರುತ್ತದೆ. ಇತ್ತೀಚೆಗೆ ನಡೆದ ಉತ್ಖನನದಿಂದ ವಸತಿ ನೆಲೆ ಮತ್ತು ಸಮಾಧಿ ಬೆಳಕಿಗೆ ಬಂದಿವೆ. ಇದೇ ಪ್ರದೇಶದಲ್ಲಿ ಕಬ್ಬಿಣ ಯುಗಕ್ಕೆ ಸೇರಿದ ಕಪ್ಪು ಕೆಂಪು ಮಡಿಕೆ ಚೂರುಗಳು ಸಹಾ ದೊರೆತಿವೆ. ಅಂದರೆ ಪ್ರಾಚೀನ ಕಾಲದಿಂದಲೂ ಹೊಸಪೇಟೆ ಪ್ರದೇಶವು ಜನರ ನಿರಂತರ ಚಟುವಟಿಕೆಗಳಿಂದ ಕೊಡಿತ್ತೆಂದು ಕಂಡು ಬರುತ್ತದೆ.

ದೀರ್ಘಕಾಲದ ಮೌನವನ್ನೊಡೆದು ರಾಮಾಯಣ ಕಾಲದ ಪರಂಪರಾನುಗತ ಕಥೆಗಳು ಈ ಪ್ರದೇಶದ ಮೇಲೆ ಬೆಳಕು ಚೆಲ್ಲುತ್ತವೆ. ಉತ್ತರ ಭಾರತದಿಂದ ಪತ್ನಿಯನ್ನರಸುತ್ತಾ ಬಂದ ರಾಮನಿಗೆ ಕಿಷ್ಕಿಂಥೆಯಲ್ಲಿ ರಾಮಾ ಸೀತೆಯನ್ನು ಕದ್ದೊಯ್ದ ವಾರ್ತೆ ಸಿಕ್ಕಿತು. ಈ ಕಿಷ್ಕಿಂದೆಯೇ ಆ ಹೊಸಪೇಟೆಯ ಪ್ರದೇಶವೆಂದು ಹೇಳಲಾಗುತ್ತಿದೆ. ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿಯೂ ಈ ಪ್ರದೇಶದ ಕುರಿತು ಪರಂಪರಾನುಗತ ಕಾವ್ಯ, ಶಾಸ್ತ್ರ ಹಾಗೂ ಪುರಾಣಗಳಲ್ಲಿ ಸೂಚನೆಗಳಿವೆ. ಐತಿಹಾಸಿಕ ಕಾಲದಲ್ಲಿ ಮಗಧ ಸಾಮ್ರಾಟನಾದ ಅಶೋಕ ಚಕ್ರವರ್ತಿ ಈ ಪ್ರದೇಶವನ್ನು ಸುತ್ತಿರಬಹುದೆಂಬ ಆಶಯವನ್ನು ಕೂಡ್ಲಿಗಿ ತಾಲೂಕಿನಲ್ಲಿ ಸಿಕ್ಕಿರುವ ಆಶಯವನ್ನು ಕ್ರಿ.ಪೂ. ೨೫೮ ರ ಶಿಲಾಸ್ಥಂಭ ವ್ಯಕ್ತ ಪಡಿಸುತ್ತದೆ. ನಾಲ್ಕೂವರೆ ಶತಮಾನಗಳ ನಂತರ ಐತಿಹಾಸಿಕ ವಿಷಯ ಗೂಢವಾಗಿಯೇ ಉಳಿದಿದೆ. ಆಂಧ್ರ ಅಥವಾ ಶಾತವಾಹನರ ವಂಶದ ಹರಿದ ಪುತ್ರ ಶತಕರ್ಣಿಯ ಕಾಲದ ಶಿಕಾರಿಪುರ ತಾಲೂಕಿನಲ್ಲಿ ದೊರೆತ ಶಿಲಾಲೇಖ ಮತ್ತು ಚಿತ್ರದುರ್ಗದ ಸಮೀಪ ದೊರೆತ ಅದೇ ವಂಶದ ಪುಲಮಾಯಿ ರಾಜನ ನಾಣ್ಯದಿಂದ ಕ್ರಿ.ಶ. ೨ನೇ ಶತಮಾನದಲ್ಲಿ ಕೃಷ್ಣನದೀ ತೀರದ ಧರಣಿ ಕೋಟೆ ಈಗಿನ ಗುಂಟೂರು ಜಿಲ್ಲೆಯ ಅಮರಾವತಿಯಲ್ಲಿರುವ ಬೌದ್ಧ ರಾಜರು ಈ ಪ್ರಾಂತವನ್ನು ಆಳುತ್ತಿದ್ದರೆಂದು ತಿಳಿದು ಬರುತ್ತದೆ. ನಾಲ್ಕನೆಯ ಶತಮಾನದಲ್ಲಿ ಉತ್ತರ ಕನ್ನಡ ಜಿಲ್ಲೆಯ ಬನವಾಸಿ ರಾಜಧಾನಿಯಾಗಿರುವ ಜೈನಧರ್ಮದ ಕದಂಬ ಆಡಳಿತಕ್ಕೆ ಜಿಲ್ಲೆ ಒಳಗಾಗಿತ್ತೆಂದು ತಿಳಿದು ಬರುತ್ತದೆ.

ಆರನೆಯ ಶತಮಾನದಲ್ಲಿ ಕದಂಬರನ್ನು ಸದೆಬಡಿದ ಬಾದಾಮಿಯ ಚಾಲುಕ್ಯರು ಅಧೀನಕ್ಕೆ ಈ ಪ್ರದೇಶ ಒಳಪಟ್ಟಿತ್ತು. ಮೊದಲನೇ ಕೀರ್ತಿವರ್ಮ (ಕ್ರಿ.ಶ.೫೬೬-೫೯೮) ಎರಡನೇ ಪುಲಕೇಶಿ (ಕ್ರಿ.ಶ. ೬೦೯-೬೪೨) ವಿಕ್ರಮಾದಿತ್ಯರ (ಕ್ರಿ.ಶ.೬೫೫-೬೮೦) ಹೆಸರುಗಳು ಅಲ್ಲಲ್ಲಿ ಉಲ್ಲೇಖಿತವಾಗಿವೆ. ಏಳನೇಯ ಶತಮಾನದಲ್ಲಿ ಚಾಲುಕ್ಯರಲ್ಲಿ ಇಬ್ಬಗವಾದ ಮೇಲೆ ಪಶ್ಚಿಮ ಚಾಲುಕ್ಯರ ವಿನಯಾದಿತ್ಯ (ಕ್ರಿ.ಶ.೬೮೦-೬೯೬) ನು ಪರಿಪಾತೀರ್ಥದಲ್ಲಿ ತಂಗಿದ ಹಾಗೂ ಪ್ರಾಯಶಃ ಪಲ್ಲವರನ್ನು ಸೋಲಿಸಿದ

ಅಭಿಪ್ರಾಯದ ದತ್ತ ಶಾಸನವೊಂದುರಿಂದ ತಿಳಿಯುತ್ತದೆ. ಕ್ರಿ.ಶ.೭೫೭ ರಲ್ಲಿ ಮಳಖೇಡ ರಾಷ್ಟ್ರಕೂಟರು ಚಾಲುಕ್ಯ ಪ್ರದೇಶದ ಒಡೆತನವನ್ನು ಕಸಿದುಕೊಂಡು, ಅಲ್ಲಿಂದ ೧೦ನೇ ಶತಮಾನದವರೆಗೆ ಚಾಲುಕ್ಯರು ಸಾಮಂತರಾಗಿದ್ದರೆಂದು ಬಾಗಳಿಯ ಶಾಸನದಿಂದ ತಿಳಿಯುತ್ತದೆ. ಮಲ್ಲಿಕಕಾಫರನ ದಾಳಿ ಸುಮಾರು ಕ್ರಿ.ಶ.೧೩೧೦ರಲ್ಲಿ ದಕ್ಷಿಣದಲ್ಲಿ ನಡೆಯಿತು. ಅಲ್ಲಾವುದ್ದೀನ್ ಖಿಲ್ಜಿಯು ದಿಲ್ಲಿಯ ಸಾರ್ವಭೌಮ ನಾಗಿದ್ದಾಗ ನಡೆದ ಈ ದಾಳಿ ದಕ್ಷಿಣದಲ್ಲಿ ಅಲ್ಲೋಲ ಕಲ್ಲೋಲವನ್ನುಂಟು ಮಾಡಿತು. ಯಾದವರು ಮತ್ತು ಹೊಯ್ಸಳರು ಹತರಾದರು. ಅರಾಜಕತೆ ಉಂಟಾಯಿತು. ಈ ಪರಿಸ್ಥಿತಿಯಲ್ಲಿ ಉತ್ತರದಿಂದ ಹಾಯುತ್ತಿರುವ ಮುಸ್ಲಿಂರ ದಾಳಿಯನ್ನು ಎದುರಿಸಲು ಶಕ್ತಿಯುಳ್ಳ ವಿಜಯನಗರ ರಾಜ್ಯ ಸ್ಥಾಪನೆಯಾಯಿತು. ವಿದ್ಯಾರಣ್ಯರ ಸಹಾಯದಿಂದ ಹಕ್ಕಬುಕ್ಕರು ತುಂಗಾಭದ್ರಾ ನದಿಯ ಹಂಪಿಯ ನಿಸರ್ಗ ಪರಿಸರದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದರು.

ಹರಿಹರನು ಒಮ್ಮೆ ತುಂಗಾಭದ್ರಾ ನದಿಯ ದಕ್ಷಿಣದ ಅಡವಿಯಲ್ಲಿ ಬೇಟೆಯಾಡುತ್ತಿದ್ದಾಗ ಮೊಲವು ನಾಯಿಯನ್ನು ಅಟ್ಟಿಸಿಕೊಂಡು ಬಂದಂತಹ ವಿಚಿತ್ರ ಸನ್ನಿವೇಶವನ್ನು ಕಂಡನು. ಬೆಚ್ಚಿಬೆರಗಾಗಿ ಹಿಂದೆ ಸರಿಯುತ್ತಿದ್ದಾಗ ತಪ್ಪಸ್ಸನ್ನು ಆಚರಿಸುತ್ತಿದ್ದ ಯತಿ ಮಾಧವಚಾರ್ಯರನ್ನು ಕಂಡನು. ವಿದ್ಯಾರಣ್ಯರೆಂದು ಪ್ರಖ್ಯಾತರಾದ ಸನ್ಯಾಸಿವರ್ಯರು ಕೃಪೆ ಮಾಡಿ ಆ ಸ್ಥಳದಲ್ಲಿ ಪಟ್ಟಣ ಕಟ್ಟಲು ಸೂಚಿಸಿದರು. ಹೀಗೆ ಕ್ರಿ.ಶ. ೧೩೩೫ ರಲ್ಲಿ ವಿಜಯನಗರ ಸಾಮ್ರಾಜ್ಯ ಪ್ರಾರಂಭವಾಯಿತು. ಹರಿಹರನು ಪಂಪಾಪತಿಯ ದೇವಾಲಯವನ್ನು ಕಟ್ಟಿಸಿದನು. ವಿದ್ಯಾರಣ್ಯರು ಭುವನೇಶ್ವರಿಯ ಎದುರು ತಪಸ್ಸು ಮಾಡಿ ಸುವರ್ಣ ದೃಷ್ಠಿಯನ್ನು ತರಿಸಿದರೆಂಬ ಐತಿಹ್ಯವೂ ಇದೆ.

ಕೃಷ್ಣದೇವರಾಯನ ವಿಜಯನಗರದ ಅರಸರಲ್ಲಿಯೇ ಅತ್ಯಂತ ಪರಾಕ್ರಮ ಚಕ್ರವರ್ತಿ ಯಾಗಿದ್ದಾನೆ. ಇವನು ಕ್ರಿ.ಸ. ೧೫೦೯ ರಿಂದ ೧೫೩೦ ರವರೆಗೆ ರಾಜ್ಯಭಾರ ಮಾಡಿದನು. ವಿಜಯನಗರ ಚಕ್ರಾಧಿಪತ್ಯವು ಕೀರ್ತಿಯ ಚರಮಸೀಮೆಯನ್ನು ಆಗ ಇವನ ಕಾಲದಲ್ಲಿ ಮುಟ್ಟಿತ್ತು. ಕ್ರಿ.ಶ. ೧೫೨೦ ರಲ್ಲಿ ವಿಜಯನಗರಕ್ಕೆ ಭೇಟಿಕೊಟ್ಟು ಪೋರ್ಚುಗೀಸ್ ಪ್ರವಾಸಿ ಡೊಮಿಂಗೋ ಪಾಯಿಸ್‌ನ ಲೇಖನಗಳು ಇವನ ಕಾಲದ ವೈವಿಧ್ಯಪೂರ್ಣವಾದ ವಿವರಗಳನ್ನು ನೀಡುತ್ತವೆ. ಕೃಷ್ಣದೇವರಾಯನೇ ಸ್ವತಃ ಕ್ರೀಡಾಪಟು, ದೈಹಿಕ ಯೋಗಾಸನಗಳಿಂದ ದೃಢಕಾಯನಾಗಿದ್ದನು, ಉಷಃಕಾಲದಲ್ಲಿದ್ದು, ಕತ್ತಿವರಸೆಯನ್ನು ಅಭ್ಯಾಸ ಮಾಡುತ್ತಿದ್ದನು. ಕುದುರೆ ಸವಾರಿ ಮಾಡುತ್ತಿದ್ದನಲ್ಲದೆ ರಾಜಠೀವಿ, ಆಕರ್ಷಿಕ ನಡತೆ ಹಾಗೂ ವೈಯಕ್ತಿಕ ವರ್ಚಸ್ಸುಳ್ಳವನಾಗಿದ್ದನು. ಸೈನ್ಯವನ್ನು ದಿಗ್ದರ್ಶಿಸುವುದರೊಂದಿಗೆ ಕವಿಯೂ, ಉತ್ತಮ ವಾಗ್ಮಿಯೂ ಆಗಿದ್ದನು. ಸಮರ್ಥ ಧೈರ್ಯವಂತ ಹಾಗೂ ರಾಜಕೀಯ ಪಟುವಾಗಿದ್ದನಲ್ಲದೆ, ಉದಾರನೂ ವಿನಯವಂತನೂ ಆಗಿದ್ದನು.

ರಾಜಧಾನಿಯನ್ನು ಸಿಂಗರಿಸುವುದಕ್ಕೆ ಕೃಷ್ಣದೇವರಾಯನು ವಿಶೇಷ ಪ್ರಾಶಸ್ತ್ಯ ನೀಡಿದ್ದನು. ಪಂಪಾಪತಿ, ದೇವಾಲಯದ ರಂಗಮಂಟಪ, ಕೃಷ್ಣಸ್ವಾಮಿ ವಿಗ್ರಹ, ವಿಠಲ ಸ್ವಾಮಿಯದೇವಸ್ಥಾನಗಳನ್ನು ನಿರ್ಮಿಸಿದನು. ವಲ್ಲಭಾಪುರದಲ್ಲಿ ತುಂಗಾಭದ್ರಾ ನದಿಗೆ ಅಡ್ಡಲಾಗಿ ಕಟ್ಟೆಯನ್ನು ಕಟ್ಟಿಸಿ ಬಸವಣ್ಣ ಕಾಲುವೆಯನ್ನು ತೋಡಿಸಿದನು. ಹೊಸಪೇಟೆ ಪಟ್ಟಣವನ್ನು ನಿರ್ಮಿಸಿದ ಮಹಾಪುರಷನೇ ಕೃಷ್ಣ ದೇವರಾಯನಾಗಿದ್ದಾನೆ. ತನ್ನ ಪ್ರೇಯಸಿಯಾದ ನಾಗಲಾಂಬಿಕೆಯ ಪ್ರೀತಿಗಾಗಿ ಹೊಸಪೇಟೆ ಪಟ್ಟಣವನ್ನು ಕಟ್ಟಿಸಿ ನಾಗಲಾಪುರ ಎಂದು ಅಭಿದಾನ ಮಾಡಿದನು. ಅದೇ ಕಾಲಕ್ರಮೇಣ ಹೊಸದಾದ ಪೇಟೆ ರೂಪದಲ್ಲಿ ಹೊಸಪೇಟೆಯಾಯಿತು. ರಾಯರಕೆರೆಯ ನಿರ್ಮಾಣವನ್ನು ಕೃಷ್ಣದೇವರಾಯನೇ ನಿರ್ಮಿಸಿದನು. ಪ್ರಾಂತೀಯ ಆಡಳಿತವನ್ನು ವಿಂಗಡಿಸಿ, ಮಾಂಡಲೀಕರ ನೇಮಕ, ಸೈನ್ಯ ಸುಧಾರಣೆಗೆ ಗಮನ ಹರಿಸಿದನು. ಸಂಸ್ಕೃತ, ತೆಲುಗು ಪಂಡಿತನಾದ ಅರಸನು ಸ್ವತಃ ಅನೇಕ ಗ್ರಂಥಗಳನ್ನು ಬರೆದನು. ತನ್ನ ಆಸ್ಥಾನದಲ್ಲಿ ಅಷ್ಟದಿಗ್ಗಜರೆಂಬ ಕವಿಗಳನ್ನು ಇಟ್ಟುಕೊಂಡಿದ್ದನು. ಕೃಷ್ಣದೇವರಾಯನ ಚೈತ್ರಯಾತ್ರೆ ಗಮನಾರ್ಹವಾದ ದಾಖಲೆಯಾಗಿದೆ. ೧೫೧೩ ರಲ್ಲಿ ಉದಯಗಿರಿಯನ್ನು ಸದೆಬಡಿದು ಕೃಷ್ಣಸ್ವಾಮಿಯ ವಿಗ್ರಹವನ್ನು ಎತ್ತಿಕೊಂಡು ಬಂದು ದೇವಸ್ಥಾನವನ್ನು ರಾಜಧಾನಿಯಲ್ಲಿ ಸ್ಥಾಪಿಸಿದನು. ೧೫೧೫ ರಲ್ಲಿ ಕೊಂಡವೀಡು ಹಾಗೂ ಕೊಂಡಪಲ್ಲಿಯನ್ನು ಜಯಿಸಿದನು. ೧೫೨೦ ರಲ್ಲಿ ಬಿಜಾಪುರದ ನವಾಬನಿಗೆ ಸೇರಿದ್ದ, ರಾಯಚೂರಿನ ಮೇಳೆ ಮಾಡಿದ ದಾಳಿಯ ವಿವರಗಳು ಪೋರ್ಚುಗೀಸ್ ಪ್ರವಾಸಿಯಾದ ಫರ್ನಾವೊದೂನಿಜ ಬರಹಗಳಿಂದ ತಿಳಿದು ಬರುತ್ತದೆ. ೭,೩೬,೦೦೦ ಕಾಲಾಳುಗಳು, ೫೫೦ ಆನೆಗಳು ಸೇರಿದ ಹನ್ನೊಂದು ವಿಭಾಗಗಳಲ್ಲಿ ರಾಮನ ಸೈನ್ಯ ಸಾಗಿತ್ತು. ಬಿಜಾಪುರದ ಇಸ್ಮಾಯಿಲ್ ಆದಿಲ್ ಷಾನು ೧,೧೪,೦೦೦ ಕುದುರೆ ಸವಾರರು ಮತ್ತು ಕಾಲಾಳುಗಳಿಂದ ಕೂಡಿದ ಸೈನ್ಯವನ್ನು ಅದಕ್ಕೆದುರಾಗಿ ಕಳಿಸಿದನು. ರಾಯಚೂರು ಮತ್ತು ಕೃಷ್ಣ ನದಿಗಳ ನಡುವೆ ಭೀಕರ ಕದನ ನಡೆಯಿತು. ಇಸ್ಮಾಯಿಲ್‌ನು ಪರಾರಿಯಾದನು. ರಾಯಚೂರು ಕೋಟೆ ಪತನವಾಯಿತು. ಕೃಷ್ಣದೇವರಾಯನು ಈ ವಿಜಯದಿಂದ ಮತ್ತನಾದನು. ಮುಸ್ಲಿಂ ಸುಲ್ತಾನರನ್ನು ಅವಹೇಳನ ಮಾಡ ತೊಡಗಿದನು. ಈ ಅವಹೇಳನವೇ ವಿಜಯನಗರದ ಪತನಕ್ಕೆ ನಾಂದಿಯಾಯಿತು. ಈತನ ನಂತರ ಬಂದ ಅರಸರೂ ಇದೇ ಪರಂಪರೆ ಮುಂದುವರೆಸಿದ್ದರಿಂದ ಸುಲ್ತಾನರೆಲ್ಲಾ ಒಂದಾಗಿ ಕ್ರಿ.ಸ. ೧೫೬೪ ರಲ್ಲಿ ನಡೆದ ತಾಳಿಕೋಟೆಯ ಯುದ್ಧದಲ್ಲಿ ವಿಜಯನಗರಸೈನ್ಯವನ್ನು ಸೋಲಿಸಿ ಸಾಮ್ರಾಜ್ಯವನ್ನು ನುಚ್ಚುನೂರು ಮಾಡಿದರು. ವಿಜಯನಗರ ಪಟ್ಟಣವನ್ನು ಉಳಿಸುವ ಯಾವ ಯೋಚನೆಯನ್ನು ಮಾಡದ ವಿಜಯನಗರದ ಅರಸರಲ್ಲಿ ಕೊನೆಯ ಅರಸ ತಿರುಮಲರಾಯನು ಕಾದಾಡದೆ, ರಾಜಧಾನಿಗೆ ತೆರಳಿ ಸದಾಶಿವನೊಂದೆ ೫೫೦ ಆನೆಗಳ ಮೇಲೆ ಸುಮಾರು ಮೂರು ಕೋಟಿ ರೂಪಾಯಿಗಳ ಬೆಲೆ ಬಾಳುವ ಸಂಪತ್ತನ್ನು ಹೇರಿಕೊಂಡು ಪೆನುಗೊಂಡಕ್ಕೆ ತೆರಳಿದನು. ರಾಜನೇ ಓಡಿಹೋದ ಮೇಲೆ ಜನರೂ ಓಡತೊಡಗಿದರು. ರಾಜಧಾನಿ ನಿರ್ಜನ ಪ್ರದೇಶವಾಯಿತು. ದರೋಡೆ ಲೂಟಿಗಳು ಒಂದೇ ಸಮನೆ ನಡೆದವು. ವಿಜಯಶಾಲಿಗಳಾದ ಮುಸ್ಲಿಂರು ನಗರವನ್ನು ಪ್ರವೇಶಿಸಿದರು. ಐದು ತಿಂಗಳವರೆಗೆ ಸಾಧ್ಯವಿದ್ದುದನ್ನೆಲ್ಲಾ ನಾಶಮಾಡಿದರು. ವಿಜಯನಗರ ಸಾಮ್ರಾಜ್ಯ ನಿರ್ನಾಮವಾಯಿತು. ಎಲ್ಲಿ ನೋಡಿದರೂ ಅರಾಜಕತೆ ತಾಂಡವವಾಡುತ್ತಿತ್ತು.

ಅನೇಕ ಸಾಮಂತರು ಸ್ವತಂತ್ರರಾದರು. ಸೈನಿಕರು, ದಳಪತಿಗಳು ಸ್ವತಂತ್ರರಾದರೂ ಅವರೂ ತಾವು ಹೋದ ಸ್ಥಳಗಳಲ್ಲಿಯೇ ಸಂಸ್ಥಾನಗಳನ್ನು ಕಟ್ಟಿಕೊಂಡು ಸ್ವತಂತ್ರ ಪಾಳೆಗಾರರಾದರು. ಇಂಗ್ಲೀಷರು ನಮ್ಮ ದೇಶಕ್ಕೆ ವ್ಯಾಪಾರಕ್ಕಾಗಿ ಬರುವ ಮುನ್ನ ಸುಮಾರು ಕರ್ನಾಟಕ ರಾಜ್ಯದಲ್ಲಿ ೭೫ ಪಾಳೇಯ ಪಟ್ಟುಗಳನ್ನು ನೋಡಬಹುದು. ಥಾಮಸ್ ಮನ್ರೋರವರ ವರದಿಯಂತೆ ಪಾಳೇಯಗಾರರು ಯಾವಾಗಲೂ ದಂಗೆಯೇಳುತ್ತಿದ್ದರು. ಅವರನ್ನು ಶಿಕ್ಷಿಸುವುದು ಸಹಾ ಅವರ ದಂಗೆಯಷ್ಟೇ ಅಹಿತಕಾರಿಯಾಗಿತ್ತು. ದಂಗೆಯೇಳುವ ಪಾಳೇಗಾರನು ತನ್ನ ಶಕ್ತಿ ಹೆಚ್ಚಿಸಿಕೊಳ್ಳಲು ಜನರಿಂದ ಯತೇಚ್ಛವಾಗಿ ಹಣವನ್ನು ಹಿಂಸೆಯ ಮೂಲಕ ಎತ್ತುತ್ತಿದ್ದನು. ಅವನ ವಿರುದ್ಧ ಬರುವ ಪಾಳೆಯಗಾರನ ಸೈನ್ಯವು ತನ್ನ ದಾರಿಯಲ್ಲಿನ ಗ್ರಾಮಗಳನ್ನು ಸಂಪೂರ್ಣವಾಗಿ ಕೊಳ್ಳೆ ಹೊಡೆಯುತ್ತಿತ್ತು. ಹೊಸಪೇಟೆಯು ಹರಪನಹಳ್ಳಿಯ ಪಾಳೇಗಾರರ ಎರಡನೇ ರಾಜಧಾನಿಯಾಗಿತ್ತು. ಹೀಗೆ ಹೊಸಪೇಟೆ ತಾಲೂಕು ಪ್ರದೇಶ ವಿಜಯನಗರ ಸಾಮ್ರಾಜ್ಯದ ಅವಸಾನದ ನಂತರ ಪಾಳೇಯಗಾರರ ನೆಲೆವೀಡಾಗಿ ಬ್ರಿಟೀಷರ ಅಧಿಪತ್ಯಕ್ಕೆ ಬರುವವರೆಗೂ ಪಾಳೆಯಗಾರರೇ ಈ ಪ್ರದೇಶವನ್ನು ಆಳಿದ್ದರು. ಬ್ರಿಟೀಷರ ಆಗಮನದಿಂದ ಸಂಪೂರ್ಣ ಸ್ವರಾಜ್ಯ ಸ್ಥಾಪನೆಗೆ ತನ್ನನ್ನು ಅರ್ಪಿಸಿಕೊಂಡಿತೆಂದು ಹೇಳಬಹುದು.

## ಚಾರಿತ್ರಿಕ ವಿಶ್ಲೇಷಣೆ

ಇತರ ಪ್ರದೇಶಗಳಂತೆ ಹೊಸಪೇಟೆ ಪ್ರದೇಶವೂ ಸಹಾ ತನ್ನದೇ ಆದ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಇತಿಹಾಸವನ್ನು ಹೊಂದಿದೆ.

ಕನ್ನಡ ನಾಡಿನಲ್ಲಿ ಆಳಿದ ವಿದ್ಯಾಧರ ವಂಶೀಕರಾದ ರಾಜರು, ಅವರ ಮೂಲ ಪುರುಷ ಜೀಮೂತವಾಹನನೂ ಹಂಪೆಯ ಹೇಮಕೂಟ ರಾಜಧಾನಿಯಲ್ಲಿ ಆಳಿದವರೆಂದು ಹೇಳಲಾಗಿದೆ. ಹರಿಹರ, ರಾಘವಾಂಕ ಮತ್ತು ವಾದಿರಾಜರು ಹೇಮಕೂಟವನ್ನು ಕುರಿತು ಹೇಳಿದ್ದಾರೆ. ಜೈನರಿಗೂ, ಹಂಪೆಯ ಹೇಮಕೂಟ ಪ್ರದೇಶ ಪುಣ್ಯಸ್ಥಳವಾಗಿದೆ ಎಂದು ವಡ್ಡಾರಾಧನೆಯಿಂದ ತಿಳಿದು ಬರುತ್ತದೆ. ಕ್ರಿ.ಪೂ. ೪ನೇ ಶತಮಾನದಲ್ಲಿ ನಂದರು ಬಳ್ಳಾರಿ ಜಿಲ್ಲೆಯ ಈ ಪ್ರದೇಶವನ್ನು ಆಳಿದರೆಂದು ತಿಳಿದುಬರುತ್ತದೆ. ಅನಂತರದ ಕಾಲದ ಕೆಲವು ಕನ್ನಡ ಶಾಸನಗಳ ಮೌರ್ಯರ ಪೂರ್ವದಲ್ಲಿ ಕನ್ನಡದ ಈ ನೆಲವನ್ನು ನಂದರು ಬಳ್ಳಾರಿ ಜಿಲ್ಲೆಯ ಈ ಪ್ರದೇಶವನ್ನು ಆಳಿದರೆಂದು ತಿಳಿದುಬರುತ್ತದೆ. ನಂದರ ನಂತರ ಮೌರ್ಯ ಅಶೋಕನು ಈ ಪ್ರದೇಶವನ್ನು ಆಳಿರುವ ಬಗ್ಗೆ ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉಡೇಗೋಲಂನಲ್ಲಿ ದೊರೆತಿರುವ ಬಂಡೆಗಲ್ಲು ಶಾಸನಗಳು ಹೇಳುತ್ತವೆ. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯಲ್ಲಿ ನಡೆದ ಉತ್ಖನನದಲ್ಲಿ ಮೌರ್ಯಕಾಲದ ಅವಶೇಷಗಳು ಬೆಳಕಿಗೆ ಬಂದಿವೆ. ಅಶೋಕನ ಕಾಲದ ಇಸಿಲ ಪಟ್ಟಣವು ಬ್ರಹ್ಮಗಿರಿಯ ಬಳಿ ಇತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅಶೋಕನ ಮರಣದ ನಂತರ ದಖನ್ನಿನಲ್ಲಿ ಮೌರ್ಯರ ಆಳ್ವಿಕೆ ಕಣ್ಮರೆಯಾಗುತ್ತದೆ.

ಇವರ ನಂತರ ಶಾತವಾಹನರು ಪ್ರಾಬಲ್ಯಕ್ಕೆ ಬಂದರು ಕ್ರಿ.ಪೂ. ೨೨೦ ರಿಂದ ರವರೆಗೆ ರಾಜ್ಯವಾಳಿದ ಇವರ ಮೂಲವನ್ನು ಕುರಿತಂತೆ ವಿವಿಧ ಅಭಿಪ್ರಾಯಗಳಿವೆ. ಡಾ॥ ಸುಕುಥಂಕರ್, ಶಾತವಾಹನರ ಕೆಲವು ಪ್ರಾಕೃತ ಶಾಸನಗಳಲ್ಲಿ ವ್ಯಕ್ತವಾಗುವ ಶಾತವಾಹನೀಹಾರ ಮತ್ತು ಶಾತಾವಾಹನೀರಟ್ಟ ಅಂದರೆ ಶಾತವಾಹನಿ ಪ್ರದೇಶ ಎಂಬ ಪದಗಳ ಆಧಾರದ ಮೇಲೆ ಅವರು ಕನ್ನಡದ ಪ್ರದೇಶದವರೆಂದು ಅದು ಈ ಪ್ರದೇಶವಾಗಿತ್ತೆಂದು ಗುರುತಿಸುತ್ತಾರೆ. ಈ ಪದಗಳು ಮ್ಯಾಕೆದೋಣಿ ಮತ್ತು ಹಿರೇಹಡಗಲಿ ಶಾಸನಗಳಲ್ಲಿ ಕಂಡು ಬರುತ್ತವೆ. ಕೆಲವು ವಿದ್ವಾಂಸರು ಮಹಾರಾಷ್ಟ್ರದ ಔರಂಗಬಾದ್ ಜಿಲ್ಲೆಯ ಪೈಠಾಣ್ ಹಿಂದೆ ಪ್ರತಿಷ್ಠಾನವೆಂಬ ಹೆಸರಿನಲ್ಲಿ ಶಾತವಾಹನರ ಕೇಂದ್ರವಾಗಿತ್ತೆಂದು, ಮತ್ತೆ ಕೆಲವರು ಕೃಷ್ಣನದಿ ಮುಖಜ ಭೂಮಿಯ ಸುತ್ತಮುತ್ತಲಿನ ಆಂಧ್ರಪಥ ಪ್ರಾಂತ್ಯವು ಶಾತವಾಹನರ ನೆಲೆಯಾಗಿತ್ತೆಂದು ತಿಳಿಸಿರುತ್ತಾರೆ. ಶಾತವಾಹನರ ಕೊನೆಯ ಅರಸರಲ್ಲಿ ಒಬ್ಬನಾದ ಪುಲುಮಾವಿಗೆ ಸೇರಿದ ಶಾಸನವೊಂದು ಬಳ್ಳಾರಿ ಜಿಲ್ಲೆಯಲ್ಲಿ ದೊರೆತಿದೆ.

ಹಂಪಿಯ ಭಾರತೀಯ ಪುರಾತತ್ವ ಸರ್ವೇಕ್ಷಣ ಕೈಗೊಂಡ ಉತ್ಖನನದ ಪರಿಣಾಮವಾಗಿ ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಭಾಷೆಯ ಶಾಸನಗಳಿರುವ ಸುಣ್ಣಕಲ್ಲಿನ ಫಲಕಗಳು ಬೆಳಕಿಗೆ ಬಂದಿವೆ. ಲಿಪಿಯು ತ್ರಿಕೋನ ತಲೆ ಹೊಂದಿದ್ದು, ಕ್ರಿ.ಶ. ೧ ಅಥವಾ ೨ ನೇ ಶತಮಾನಕ್ಕೆ ನಿರ್ದೇಶಿಸಲಾಗಿದೆ. ನಂತರ ನಡೆದ ಉತ್ಖನನದಲ್ಲಿ ಬೌದ್ಧ ಜಾತಕ ಕಥೆಗಳ ಉಬ್ಬು ಶಿಲ್ಪಗಳನ್ನೊಳಗೊಂಡ ಸುಣ್ಣಕಲ್ಲಿನ ಫಲಕಗಳು ಸಹ ಬೆಳಕಿಗೆ ಬಂದಿವೆ. ಇದರಿಂದ ಹಂಪೆಯು ಶಾತವಾಹನರ ಮತ್ತು ನಂತರದ ಕಾಲದಲ್ಲಿ ಬೌದ್ಧಧರ್ಮದ ಒಂದು ಕೇಂದ್ರವಾಗಿತ್ತೆಂದು ಊಹಿಸಬಹುದು. ಈ ಪ್ರದೇಶವು ಬೌದ್ಧ ಧರ್ಮದ ಪ್ರಮುಖ ಕೇಂದ್ರವಾಗಿದ್ದು, ಜೊತೆಗೆ ವ್ಯಾಪಾರ ವಾಣಿಜ್ಯವನ್ನು ಹೊಂದಿದ್ದು, ಆರ್ಥಿಕವಾಗಿ ಸಮೃದ್ಧಿ ಹೊಂದಿತ್ತೆಂದು ತಿಳಿಯುತ್ತದೆ. ಈ ಪ್ರದೇಶವು ಗಾಂಧಾರ ಪ್ರದೇಶದ ಜೊತೆಗೆ ಹೊಂದಿದ್ದ ವಾಣಿಜ್ಯ ಮತ್ತು ಸಾಂಸ್ಕೃತಿಕ ಸಂಬಂಧ ಗಮನಾರ್ಹವಾದುದು. ನಂತರ ಕಾಲದಲ್ಲಿ ಈ ಪ್ರದೇಶವನ್ನು ಕದಂಬರು ಆಳಿದರು. ಇವರ ರಾಜ್ಯವು ಪಶ್ಚಿಮ ತೀರದಿಂದ ಬಳ್ಳಾರಿ ಪ್ರದೇಶದವರೆಗೂ ಹಬ್ಬಿತ್ತು. ಹೊಸಪೇಟೆಯ ಆಗ್ನೇಯ ದಿಕ್ಕಿಗಿರುವ ಸಂಡೂರು ಪ್ರದೇಶ ಮತ್ತು ಅಲ್ಲಿನ ಕುಮಾರಸ್ವಾಮಿ ದೇವಾಲಯವು ಕದಂಬರ ಕಾಲದಲ್ಲೇ ಪ್ರಾಮುಖ್ಯತೆ ಪಡೆದಿದ್ದವು.

ಚಾಲುಕ್ಯರ ಬಲಿಷ್ಠ ದೊರೆ ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನವು ಈ ಪ್ರದೇಶ ಸೇರಿದಂತೆ ಇಡೀ ದಕ್ಷಿಣಾಪಥವು ಅವನ ಆಳ್ವಿಕೆಗೆ ಒಳಗಾದ ಬಗ್ಗೆ ತಿಳಿಸುತ್ತದೆ. ಪುಲಿಕೇಶಿಯು ತನ್ನ ಮಕ್ಕಳನ್ನು ಬಳ್ಳಾರಿ ಮತ್ತು ಕರ್ನೂಲು ಪ್ರದೇಶಗಳಿಗೆ ಪ್ರಾಂತಾಧಿಕಾರಿಯನ್ನಾಗಿ ನೇಮಿಸಿದ್ದನು. ಇವರ ವಂಶದ ವಿನಯಾದಿತ್ಯನು ತನ್ನ ಸೈನ್ಯದೊಂದೊಗೆ ಪಂಪಾತೀರ್ಥದಲ್ಲಿ ಬೀಡುಬಿಟ್ಟಾಗ ಭೂಮಿಯನ್ನು ದತ್ತಿ ಬಿಡುತ್ತಾನೆಂದು ಕ್ರಿ.ಶ. ೬೮೯ರ ತಾಮ್ರ ಶಾಸನವೊಂದು ತಿಳಿಸುತ್ತದೆ. ಬಾದಾಮಿ ಚಾಲುಕ್ಯರು ಕ್ರಿ.ಶ. ೭೫೩ ರವರೆಗೂ ಈ ಪ್ರದೇಶವನ್ನು ಆಳುತ್ತಾರೆ. ಇವರ ನಂತರ ರಾಷ್ಟ್ರಕೂಟರು ಎರಡು ಶತಮಾನಕ್ಕೂ ಮೀರಿ ಆಳ್ವಿಕೆ ನಡೆಸುತ್ತಾರೆಂದು ಎ. ಎಸ್. ಅತ್ತಿಕರರು ತಿಳಿಸುತ್ತಾರೆ. ರಾಷ್ಟ್ರಕೂಟರವರ ಪ್ರಖ್ಯಾತ ಅರಸರೆಂದರೆ

ಒಂದನೇ ಅಮೋಘ ವರ್ಷ, ಇಮ್ಮಡಿ ಕೃಷ್ಣ, ಮುಮ್ಮಡಿ ಇಂದ್ರ, ಮುಮ್ಮಡಿ ಅಮೋಘ ವರ್ಷ ಮತ್ತು ಮುಮ್ಮಡಿಕೃಷ್ಣ. ಕುಡುತಿನಿಶಾಸನವೊಂದು ರಾಷ್ಟ್ರಕೂಟರ ಖೊಟ್ಟಿಗನನ್ನು ಉಲ್ಲೇಖಿಸುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಹಂಪಿಪರಿಸರದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಆ ಕಾಲಕ್ಕಾಗಲೇ ಹಂಪಿಯು ಪ್ರಮುಖ ಧಾರ್ಮಿಕ ಕ್ಷೇತ್ರವಾಗಿತ್ತು. ರಾಷ್ಟ್ರಕೂಟರು ತಮ್ಮ ದಿಗ್ವಿಜಯ ಗಳಿಂದಾಗಿ ಭಾರತದಲ್ಲಿ ಉನ್ನತ ಸ್ಥಾನವನ್ನು ಪಡೆದಿರುತ್ತಾರೆ. ಇವರ ನಂತರ ನೊಳಂಬವಾಡಿಯವರ ಆಳ್ವಿಕೆ ಸುಮಾರು ಮೂರು ಶತಮಾನಗಳವರೆಗೆ ಮುಂದುವರೆಯಿತು. ಬಳ್ಳಾರಿಯ ಈ ಪ್ರದೇಶವು ನೊಳಂಬವಾಡಿಯ ಒಂದು ಭಾಗವಾಗಿತ್ತು. ಇವರ ರಾಜಧಾನಿಗಳಲ್ಲಿ ಕಂಪ್ಲಿಯೂ (ಹೊಸಪೇಟೆ ತಾಲೂಕು) ಸಹಾ ಒಂದಾಗಿತ್ತು. ನೊಳಂಬರು ತಲಕಾಡಿನ ಗಂಗರಿಗೂ ಸಾಮಂತರಾಗಿದ್ದರು. ಈ ವಂಶದ ಮಹೇಂದ್ರ, ನೊಳಂಬಾಡಿ ರಾಜನು ಸಮರ್ಥದೊರೆಯಾಗಿದ್ದು, ಸ್ವತಂತ್ರನಾಗಲು ಪ್ರಯತ್ನಿಸಿದನು. ಗಂಗರೊಡನೆ ಯುದ್ದ ಮಾಡಿ ಯುದ್ದದಲ್ಲಿ ಮಡಿದನು. ನೊಳಂಬರ ಅರಸರು ಕಲ್ಯಾಣ ಚಾಲುಕ್ಯರ ಅಧೀನರಾಗಿ ಕಂಪ್ಲಿಯಿಂದ ಈ ಪ್ರದೇಶವನ್ನಾಳಿದರು. ಕ್ರಿ.ಶ.೧೦೧೪ ರ ಶಾಸನವೊಂದು ಇರಿವ ನೊಳಂಬಾದಿರಾಜ ಮತ್ತು ಆತನ ಹೆಂಡತಿಯಾದ ಮಬ್ಬರಸಿಯು ಪಂಪಾದಲ್ಲಿನ ಮಹಾಕಾಲ ದೇವರಿಗೆ ತೆರಿಗೆಗಳನ್ನು ದತ್ತಿಬಟ್ಟ ಬಗ್ಗೆ ತಿಳಿಸುತ್ತದೆ.

ನೊಳಂಬರ ನಂತರ ಗಂಗರು ಬಳ್ಳಾರಿ ಜಿಲ್ಲೆಯ ಕೆಲಭಾಗಗಳನ್ನು ತಮ್ಮ ಹತೋಟಿಯಲ್ಲಿಟ್ಟು ಕೊಂಡಿದ್ದರು. ಇಮ್ಮಡಿ ಶಿವಮಾರನ ಕಾಲದಲ್ಲಿ ಗಂಗರು ಬಲಿಷ್ಠರಾಗುತ್ತಾರೆ. ಗಂಗರ ನಂತರ ಕಲ್ಯಾಣದ ಚಾಲುಕ್ಯರು ಈ ಪ್ರದೇಶವನ್ನು ಆಳಿರುವ ಬಗ್ಗೆ ಹಲವು ಶಾಸನಗಳಿಂದ ತಿಳಿದು ಬರುತ್ತದೆ. ಕ್ರಿ. ಶ.೧೦೭೬ ರ ಹಂಪಿಯ ಶಾಸನವು ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಚಟ್ಟೋಪಾಧ್ಯಾಯನು ಮಠವೊಂದರಲ್ಲಿ ಪುರಾಣ ಹೇಳುವ ಉಪಾಧ್ಯಾಯರಿಗೆ ಪ್ರತಿವರ್ಷ ೮೦ ಲೊಕ್ಕಿಗದ್ಯಾಣಗಳನ್ನು ದತ್ತಿ ನೀಡಿದ ಬಗ್ಗೆ ತಿಳಿಯುತ್ತದೆ. ಕಲ್ಯಾಣದ ಚಾಲುಕ್ಯರಿಗೂ, ಚೋಳರಿಗೂ ಅನೇಕ ಯುದ್ದಗಳು ನಡೆದರೂ, ಚಾಲುಕ್ಯರು ತುಂಗಾಭದ್ರಾ ಪ್ರದೇಶದ ಮೇಲೆ ತಮ್ಮ ಹಿಡಿತವನ್ನು ಹೊಂದಿದ್ದರು. ಚೋಳರು ತಮ್ಮ ಪ್ರಯತ್ನದಲ್ಲಿ ಯಶಸ್ಸನ್ನು ಗಳಿಸಲಿಲ್ಲ. ಇದರಿಂದಾಗಿ ಈ ಪ್ರದೇಶವು ಜೂಜಾಟದ ಕೇಂದ್ರವಾಗಿತ್ತು. ಇವರ ನಂತರ ಪಾಂಡ್ಯರು ಉಚ್ಚಂಗಿ ಪಾಂಡ್ಯರೆಂದೇ ಪ್ರಸಿದ್ದರು. ಈಗಿನ ಹೊಸಪೇಟೆ ಪ್ರದೇಶ ಇವರ ಆಡಳಿತದ ಭಾಗವಾಗಿತ್ತು. ಉಚ್ಚಂಗಿ ಪಾಂಡ್ಯರು ಮುಂದೆ ಕಲ್ಯಾಣದಲ್ಲಿ ಅಧಿಕಾರಕ್ಕೆ ಬಂದು ಒಳಚೂರಿ ಅರಸರ ಸಾಮಂತರಾಗಿ ನೊಳಂಬವಾಡಿಯನ್ನು ಆಳುತ್ತಾರೆ. ಕಳಚೂರಿಗಳಲ್ಲಿ ಬಿಜ್ಜಳನು ಸಿಂಹಾಸನಕ್ಕೆ ಬರುತ್ತಾನೆ. ಬಿಜ್ಜಳನ ಕಾಲದ ಶಾಸನವೊಂದು ಹೊಸಪೇಟೆಯಲ್ಲಿ ದೊರೆತಿದೆ. ಕ್ರಿ.ಶ.೧೧೯೯ ರ ಶಾಸನವು ಕುರುಗೋಡಿನ ಇಮ್ಮಡಿ ರಾಚಮಲ್ಲನ ಮಗನಾದ ವೀರಕಲಿದೇವರಸನನ್ನು ಮತ್ತು ವಿರುಪಾಕ್ಷತೀರ್ಥ ರಕ್ಷಣೆಗಾಗಿ ಮಾತಂಗ ಪರ್ವತವನ್ನು ಆಳುತ್ತಿದ್ದ. ಸಾಮಂತನಾದ ಮಾದೆಯನಾಯಕನನ್ನು ಉಲ್ಲೇಖಿ ಸುತ್ತದೆ. ಮುಂದೆ ಹೊಯ್ಸಳರು ಮತ್ತು ಸೇವುಣರು ಚಾಲುಕ್ಯ ರಾಜ್ಯಕ್ಕಾಗಿ ಅನೇಕ ಯುದ್ಧಗಳನ್ನು ಮಾಡಿದರು. ಆದರೆ ತುಂಗಾಭದ್ರಾ ಪ್ರದೇಶವನ್ನು ಇಟ್ಟುಕೊಳ್ಳುವಲ್ಲಿ ಹೊಯ್ಸಳರು ಯಶಸ್ವಿಯಾದರು.

ಹೊಯ್ಸಳರ ಪ್ರಮುಖ ದೊರೆ ವಿಷ್ಣುವರ್ಧನನು ಈ ಪ್ರದೇಶದ ಬಳ್ಳಾರಿ ನಗರವನ್ನು ಮತ್ತು ತುಂಗಭದ್ರೆಯನ್ನು ದಾಟಿ ಕುಮ್ಮಟ ದುರ್ಗವನ್ನು ಹಿಡಿದನು. ಕ್ರಿ.ಶ.೧೨೧೭ ರ ಶಾಸನವು ಈ ಪ್ರದೇಶದ ಕಂಪ್ಲಿ ಮತ್ತು ನೆರೆಯ ಕುರುಗೋಡುಗಳನ್ನು ಉಲ್ಲೇಖಿಸುತ್ತದೆ. ಕೋಗಳಿಯ ಕ್ರಿ.ಶ.೧೨೭೬ ರ ಶಾಸನವೊಂದರಿಂದ ಈ ಹೊಸಪೇಟೆ ಪ್ರದೇಶವು ಹೊಯ್ಸಳರ ವಶದಲ್ಲಿತ್ತೆಂದು ತಿಳಿದು ಬರುತ್ತದೆ. ಮುಮ್ಮಡಿ ಸಿಂಗೇನಾಯಕನು ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಇವರನು ಮೊದಲು ಹೊಯ್ಸಳರ ಪರವಾಗಿದ್ದು, ನಂತರ ಸೇವುಣರ ಪಕ್ಷವಹಿಸುತ್ತಾನೆ. ಇವನು ಕುಮ್ಮಟ ದುರ್ಗವನ್ನು ಹಿಡಿಯುವನು. ಹೊಸಪೇಟೆಯಿಂದ ಉತ್ತರಕ್ಕೆ ತುಂಗಭದ್ರೆಯ ಆಚೆಗಿರುವ ಕುಮ್ಮಟದುರ್ಗವು ಪ್ರಾಕೃತಿಕವಾಗಿ ರಕ್ಷಣೆ ಪಡೆದಿರುವ ಗಿರಿದುರ್ಗವಾಗಿದೆ. ಕುಮ್ಮಟ ದುರ್ಗವು ಮುಮ್ಮಡಿಸಿಂಗೇಯ ಮತ್ತು ಆತನ ಮಗ ಕಂಪಿಲ ದೇವನಿಗೆ ರಾಜಧಾನಿಯಾಗಿ , ಅವರ ರಾಜಕೀಯ ಸಾಧನೆಗಳಲ್ಲಿ ಮಹತ್ವದ ಪಾತ್ರವಹಿಸಿದೆ. ಹಂಪಿಯ ಹೇಮಕೂಟದಲ್ಲಿ ದೇವಾಲಯವೊಂದರ ಶಾಸನ ಮುಮ್ಮಡಿ ಸಿಂಗೇಯ ನಾಯಕನ ಮಗನಾದ ವೀರ ಕಂಪಿಲ ರಾಯನು ಸಂಗಮೇಶ್ವರ ದೇವರ ಆರಾಧಕನಾಗಿದ್ದನು ಎಂಬುದು ತಿಳಿಸುತ್ತದೆ. ಇವನ ಸ್ಮರಣೆಗಾಗಿ ಕಂಪ್ಲಿಯಲ್ಲಿ ಸೋಮೇಶ್ವರ ದೇವಾಲಯ ನಿರ್ಮಿಸಿದ್ದು, ಈತನ ಮಗ ಹುಟ್ಟಿದ ನೆನಪಿಗಾಗಿ ಆರಾಧ್ಯದೇವನ ದೇವಸ್ಥಾನ ನಿರ್ಮಿಸಿದನೆಂದು ತಿಳಿಯುತ್ತದೆ. ದೆಹಲಿ ಸುಲ್ತಾನರೊಡನೆ ಕಂಪಿಲ ರಾಯನು ಹೋರಾಡಿ ಮಡಿಯುತ್ತಾರೆ.

ಕುಮ್ಮಟದುರ್ಗದಲ್ಲಿ ಕಂಡು ಬಂದಿರುವ ವೀರಗಲ್ಲು ಶಾಸನಗಳು ಸುಲ್ತಾನನ ದಾಳಿಯಲ್ಲಿ ಕುಮಾರ ರಾಮ ಮತ್ತು ಸಿಂಗ್ ಎಂಬ ವೀರರು ಕದನಗಳಲ್ಲಿ ಹೋರಾಡಿ ಮಡಿದರೆಂದು ತಿಳಿಸುತ್ತವೆ. ಕುಮ್ಮಟದುರ್ಗವು ಪತನವಾದ ಮೇಲೆ ಮೂರನೆಯ ಬಲ್ಲಾಳನು ಈ ಪ್ರದೇಶದ ಮೇಲೆ ಗಮನ ಹರಿಸುವನು. ಈ ಪ್ರದೇಶವು ತುಂಬಾ ಆಯಕಟ್ಟಿನ ಪ್ರದೇಶವಾಗಿದ್ದರಿಂದ ಉತ್ತರದ ಮುಸ್ಲಿಂ ದಾಳಿಗಳನ್ನು ಸಮರ್ಥವಾಗಿ ಎದುರಿಸಲು ಮತ್ತು ಈ ಪ್ರದೇಶದ ಸೂಕ್ತ ರಕ್ಷಣೆಗಾಗಿ ಹೊಸ ರಾಜಧಾನಿಗಳನ್ನು ಸ್ಥಾಪಿಸುವುದು ಅನಿವಾರ್ಯವಾಯಿತು. ಅದಕ್ಕಾಗಿ ದುರ್ಗಮ ಪ್ರದೇಶವಾದ ಹಂಪಿಯನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಹೊಸ ಪಟ್ಟಣವನ್ನು ನಿರ್ಮಾಣಮಾಡಲಾಯಿತೆಂದು ತಿಳಿದು ಬರುತ್ತದೆ. ತನ್ನ ವಿಶಾಲ ಸಾಮ್ರಾಜ್ಯವನ್ನು ಸಮರ್ಥವಾಗಿ ನಿರ್ವಹಿಸಲು ‘ಹರಿಹರ’ನೆಂಬ ರಾಜ್ಯಪಾಲರನ್ನಾಗಿ ನೇಮಿಸಿದನು. ಅವನಿಗೆ ಅಗತ್ಯ ಸ್ವಾತಂತ್ರ್ಯವನ್ನು ನೀಡಿ ಪ್ರೋತ್ಸಾಹಿಸುತ್ತಾನೆ. ಸಂಗಮವಂಶದ ಹರಿಹರನ ನೇಮಕವೇ ಮುಂದೆ ವಿಜಯನಗರ ಸಾಮ್ರಾಜ್ಯದ ಉದಯಕ್ಕೆ ಕಾರಣವಾಯಿತು. ದೆಹಲಿ ಸುಲ್ತಾನನು ಇವನನ್ನು ಕುಮ್ಮಟದ ಪತನಾನಂತರ ದೆಹಲಿಗೆ ಕರೆದೊಯ್ದರೆಂದೂ, ನಂತರ ಸುಲ್ತಾನನು ಇವನನ್ನು ಬಿಡುಗಡೆಗೊಳಿಸಿ ತನ್ನ ಪರವಾಗಿ ಕರ್ನಾಟಕ ದೇಶವನ್ನು ಆಳಲು ಕಳಿಸಿದನೆಂದೂ, ಅಲ್ಲಿಂದ ಬಂದ ಇವರು ವಿದ್ಯಾರಣ್ಯರನ್ನು ಭೇಟಿ ಮಾಡಿ ಅವರ ಆಶೀರ್ವಾದದಿಂದ ಆನೆಗೊಂದಿಯಲ್ಲಿ ಹೊಸ ರಾಜ್ಯವನ್ನು ಕಟ್ಟಿದರೆಂದು ತಿಳಿದುಬರುತ್ತದೆ. ಶಾಸನ ಮತ್ತು ಸಾಹಿತ್ಯಗಳಲ್ಲಿ ಬಂದ ಪರಂಪರಾಗತ ವರದಿಗಳು ನ್ಯೂನಿಚ್ ಮುಂತಾದ ವಿದೇಶಿ ಪ್ರವಾಸಿಗಳ ಬರಹಗಳು,

ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರೆನ್ನುತ್ತವೆ. ವಿದ್ಯಾರಣ್ಯರ ಗೌರವಾರ್ಥವಾಗಿ ರಾಜಧಾನಿಗೆ ವಿದ್ಯಾನಗರವೆಂದು ಹೆಸರಿಟ್ಟಿದ್ದರೆಂದು ನ್ಯೂನಿಜ್ ತಿಳಿಸುತ್ತಾನೆ. ವಿದ್ಯಾರಣ್ಯರು ಕ್ರಿ.ಶ. ೧೩೫೬ ರಿಂದ ವಿಜಯನಗರ ಅರಸರ ಜೊತೆ ನಿಕಟ ಸಂಪರ್ಕ ಹೊಂದಿದ್ದರೆಂಬುದಂತು ಸ್ಪಷ್ಟವಾದ ಸಂಗತಿ.

ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳು ವಿಜಯನಗರ ಸಾಮ್ರಾಜ್ಯವನ್ನು ಆಳಿ ಈ ಪ್ರದೇಶದಲ್ಲಿ ಐತಿಹಾಸಿಕ ವರ್ಣರಂಜಿತ , ಸಾಂಸ್ಕೃತಿಕ ಪರಂಪರೆಯನ್ನು ಬೆಳೆಸಿದರು. ಇವರ ಕಾಲದಲ್ಲಿ ಅಭಿವೃದ್ಧಿ ಪಡಿಸಿದರು. ಹರಿಹರನಿಂದ ಹಿಡಿದು ಅರವೀಡು ವಂಶದ ಕೊನೆಯ ದೊರೆ ರಾಮರಾಯರವರೆಗೆ ವಿಜನಗರದ ಸಾಮ್ರಾಜ್ಯ ಸುವರ್ಣಯುಗವೆಂದು ಹೇಳಿದರೆ ತಪ್ಪಾಗಲಾರದು. ಅದರಲ್ಲೂ ಕೃಷ್ಣದೇವರಾಯನು ಈ ಸಾಮ್ರಜ್ಯದ ಅತ್ಯಂತ ಸಮರ್ಥ ಆಡಳಿತಗಾರರಲ್ಲೊಬ್ಬನಾಗಿದ್ದನು. ಈತನು ಕೇವಲ ೨೦ ವರ್ಷಗಳಷ್ಟೇ ಆಡಳಿತ ನಡೆಸಿದರೂ ಸಾಮ್ರಾಜ್ಯದ ಕೀರ್ತಿಯನ್ನು ಉತ್ತುಂಗ ಶಿಖರಕ್ಕೇರಿಸಿದನು. ಕೃಷ್ಣದೇವರಾಯನು ಮೊದಲು ಸೈನ್ಯವನ್ನು ಬಲಗೊಳಿಸುತ್ತಾನೆ. ಸಾಮ್ರಾಜ್ಯದಲ್ಲಿ ಕೆಲವು ತೆರಿಗೆಗಳನ್ನು ಮನ್ನಾ ಮಾಡುತ್ತಾನೆ. ವ್ಯವಸಾಯಕ್ಕೆ ಹೆಚ್ಚಿನ ಗಮನಕೊಟ್ಟು ಕೆರೆಕಟ್ಟೆಗಳನ್ನು ಕಾಲುವೆಗಳನ್ನು ನಿರ್ಮಿಸಿದನು. ತನ್ನ ತಾಯಿಯ ಹೆಸರಿನಲ್ಲಿ ನಾಗಲಾಪುರವನ್ನು, ದೇವಾಲಯವನ್ನು, ಕೆರೆಯನ್ನು ಮತ್ತು ಹೆಂಡತಿಯ ನೆನಪಿಗಾಗಿ ತಿರುಮಲಾದೇವಿಯವರ ಪಟ್ಟಣ ಇಂದಿನ ಹೊಸಪೇಟೆಯನ್ನು ನಿರ್ಮಿಸಿದನು. ವಿರುಪಾಕ್ಷದೇವಾಲಯದ ರಂಗಮಂಟಪ ಮತ್ತು ಗೋಪುರವನ್ನು ತನ್ನ ಪಟ್ಟಾಭಿಷೇಕದ ಸಮಯದಲ್ಲಿ ಕಟ್ಟಿಸಿದನು. ಕ್ರಿ.ಶ.೧೫೧೩ ರಲ್ಲಿ ಕೃಷ್ಣದೇವಾಲಯ ಕಟ್ಟಿಸಿ, ಉದಯಗಿರಿಯಿಂದ ತಂದ ಕೃಷ್ಣದೇವರನ್ನು ಅಲ್ಲಿ ಪ್ರತಿಷ್ಠಾಪಿಸಿದನು. ಆ ಕಾಲದಲ್ಲಿ ನಿರ್ಮಿತಗೊಂಡ ಮಹಾಗೋಪುರಗಳು ರಾಯಗೋಪುರಗಳೆಂದೇ ಹೆಸರು ಪಡೆದವು.

ಈತನು ಕನ್ನಡ, ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಸ್ವತಃ ವಿದ್ವಾಂಸನಾಗಿದ್ದು, 'ಅಮುಕ್ತ ಮೌಲ್ಯದ' ಎಂಬ ಕೃತಿ ರಚಿಸಿದ್ದನು. ಈತನ ಆಸ್ಥಾನದಲ್ಲಿ ಎಂಟು ಜನ ತೆಲುಗು ವಿದ್ವಾಂಸರಿದ್ದರು. ಕೃಷ್ಣದೇವರಾಯನು ಸಮರ್ಥ ದೊರೆಯಾಗಿ, ಆಡಳಿತಾಧಿಕಾರಿಯಾಗಿ, ಸೇನಾನಿಯಾಗಿ ವಿದ್ವಾಂಸನಾಗಿ ಮತ್ತು ಕಲಾರಸಿಕನಾಗಿ ಬಹುಮುಖ ಪ್ರತಿಭೆ ಹೊಂದಿದ್ದನು. ರಾಜಧಾನಿಯ ಸೌಂದರ್ಯಕ್ಕೂ ಕಾರಣನಾದನು. ಇವನ ಆಳ್ವಿಕೆಯ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಅಭಿವೃದ್ಧಿಯ ಉತ್ತುಂಗಕ್ಕೇರಿತು. ಜನರಲ್ಲಿ ನೆಮ್ಮದಿಗಳು ನೆಲೆಸಿದ್ದವು. ರಾಜ್ಯವು ಶ್ರೀಮಂತಿಕೆಯಿಂದ ಕೂಡಿದ್ದು, ಧನಧಾನ್ಯಗಳಿಂದ ಕೂಡಿದ ನಗರಗಳು ಹಾಗೂ ಪಟ್ಟಣಗಳು ಇಲ್ಲಿವೆ. ಬೇಕಾದಷ್ಟು ವ್ಯಾಪಾರ, ಹಡಗಿನಲ್ಲಿ ರವಾನೆಯು ಇಲ್ಲಿ ನಡೆಯುತ್ತಿತ್ತೆಂದು ಬಾರ್ಬೋಸನು ಹೇಳಿದ್ದಾನೆ. ಇಂಥಹ ವಿಜಯನಗರ ಸಾಮ್ರಾಜ್ಯದ ಸೈನ್ಯ ಬಿಜಾಪುರದ ಸುಲ್ತಾನರ ವಿರುದ್ಧ ರಕ್ಕಸ ತಂಗಡಿ (ತಾಳಿಕೋಟೆ ಸಮೀಪ) ಕ್ರಿ.ಸ. ೧೫೬೫ ರಲ್ಲಿ ಸೋಲನ್ನು ಕಂಡಿತು. ವಿಜಯನಗರದ ಪತನಾನಂತರ ಈ ಪ್ರದೇಶದ ಮೇಲೆ ಆಗಿರುವ ಹಾನಿ ಹೇಳತೀರದು. ಸುಲ್ತಾನರ ದಾಳಿಯಿಂದ ಐತಿಹಾಸಿಕ ಹಂಪಿ ಹಾಳುಕೊಂಪೆಯಾಯಿತು. ಹೆಸರಿಗೆ ಮಾತ್ರ ಈ ಪ್ರದೇಶವು ಬಿಜಾಪುರದ

ಆದಿಲ್ ಶಾಹಿ ಸುಲ್ತಾನರ ವಶದಲ್ಲಿತ್ತು. ವಾಸ್ತವವಾಗಿ ಸ್ಥಳೀಯ ಪಾಳೆಗಾರರು ಈ ಪ್ರದೇಶವನ್ನು ಆಳಿದರು. ಹರಪನಹಳ್ಳಿ ಪಾಳೆಗಾರ ಮನೆತನದ ಮೂಲ ಪುರುಷ ದಾದಯ್ಯನಾಯಕನೆಂಬುವನು ಕ್ರಿ.ಶ. ೧೫೬೫ ರಲ್ಲಿ ಸಾಮ್ರಾಜ್ಯ ಪತನವಾದ ಮೇಲೆ ಬಾಗಳಿ ಮತ್ತು ನೀಲಗುಂದದ ಸುತ್ತ ಮುತ್ತಲ ಪ್ರದೇಶಗಳಿಗೆ ಅಧಿಪತಿಯಾಗುತ್ತಾನೆ. ಪೆನುಗೊಂಡದಲ್ಲಿದ್ದ ವೆಂಕಟಪತಿದೇವನು ಈ ಪ್ರದೇಶದ ಪರಿಪಾಲನೆಯನ್ನು ಹರಪನಹಳ್ಳಿಯ ಪಾಳೆಯಗಾರರಿಗೆ ವಹಿಸಿದನೆಂದೂ, ನಂತರ ಹೊಸಪೇಟೆಯು ಹರಪನಹಳ್ಳಿ ಪಾಳೇಯಗಾರರ ಉಪರಾಜಧಾನಿಯಾಗಿತ್ತೆಂದು ತಿಳಿದು ಬರುತ್ತದೆ. ಹರಪನಹಳ್ಳಿಯ ಪಾಳೇಯಗಾರರಲ್ಲಿ ಸೋಮಶೇಖರ ನಾಯಕನು ಸಮರ್ಥ ಪಾಳೆಯಗಾರನಾಗಿದ್ದನು. ಒಮ್ಮೆ ಈತನು ಹೊಸಪೇಟೆಯಲ್ಲಿ ನೆಲೆಸಿರುವಾಗ ಉಚ್ಚಂಗಿ ದುರ್ಗದ ಮೇಲೆ ಚಿತ್ರದುರ್ಗದ ನಾಯಕ ದಾಳಿ ನಡೆಸಿದ ವಿಷಯ ತಿಳಿದು ಯುದ್ದಕ್ಕೆ ಹೊರಟು ಚಿತ್ರದುರ್ಗದ ನಾಯಕನನ್ನು ಮಾಯಕೊಂಡದವರಿಗೆ ಬೆನ್ನಟ್ಟಿ ಹೋಗಿ ಸಂಹರಿಸಿದನು. ಹಿಂತಿರುಗಿ ಬಂದ ನಾಯಕನು, ವಿಜಯ ಯಾತ್ರೆಯ ನೆನಪಿಗಾಗಿ ಹೊಸಪೇಟೆಯಲ್ಲಿ ಆನೆಯ ಮೇಲೆ ಮೆರವಣಿಗೆ ಮಾಡಿಸಿಕೊಂಡನೆಂದು ತಿಳಿದು ಬರುತ್ತದೆ. ಅದರ ಸ್ಮಾರಕವಾಗಿ ಸವಾರಿ ಮಾಡುತ್ತಿರುವ ಚಿತ್ರವನ್ನು ಶಿಲೆಯ ಮೇಲೆ ಕೆತ್ತಿಸಲಾಯಿತು. ಇದು ಹೊಸಪೇಟೆಯ ನೆಹರೂ ಕಾಲೋನಿಯಲ್ಲಿದೆ. ಈತನ ಆಳ್ವಿಕೆಯ ಸಮೃದ್ಧಿಯನ್ನು ತಂದಿತು. ಈ ಕಾಲದಲ್ಲಿ ಜಿಗಳಿಕಟ್ಟೆ, ವಿರುಪಾಕ್ಷಪುರ, ವಿಜಯಪುರ, ನಾಗಲಾಪುರ, ಹಂದಿಗನೂರು ಗ್ರಾಮಗಳನ್ನು ಒಂದು ಗೂಡಿಸಿ ಇಂದಿನ ನಗರವಾದ ಹೊಸಪೇಟೆ ನಗರ ಮಾಡಲಾಯಿತೆಂದು ತಿಳಿದು ಬರುತ್ತದೆ.

ಕ್ರಿ.ಶ. ೧೮೧೮ ರಲ್ಲಿ ೫೦೦ ಜನರ ಪ್ರಬಲ ಪಿಂಜಾರಿಗಳ ಗುಂಪೊಂದು ಈ ಭಾಗದಲ್ಲಿ ತುಂಗಾಭದ್ರಾ ನದಿಯನ್ನು ದಾಟಿ ಹರಪನಹಳ್ಳಿ ಖಜಾನೆಯನ್ನು ಲೂಟಿ ಮಾಡಿ ೨೪೦೦೦ ರೂಪಾಯಿಗಳನ್ನು ದೋಚಿತು. ನಂತರ ಕೊಟ್ಟೂರು, ಕೂಡ್ಲಿಗಿಗೆ ನುಗ್ಗಿ ಹಿಂತಿರುಗಿತು. ಕ್ರಿ.ಶ. ೧೮೫೭ ರ ಸ್ವಾತಂತ್ರ್ಯ ಸಂಗ್ರಾಮದ ಫಲವಾಗಿ ಕ್ರಿ. ಶ. ೧೮೫೭ ರಲ್ಲಿ ಮುಂಡರಗಿ ಭೀಮರಾಯನು ಬ್ರಿಟೀಷರ ವಿರುದ್ಧ ಹೋರಾಡಲು ಈ ಪ್ರದೇಶದಲ್ಲಿ ಜನ ಸಂಘಟನೆಯಲ್ಲಿ ತೊಡಗಿದನು. ಹೊಸಪೇಟೆ ಮತ್ತು ಕಮಲಾಪುರಗಳಲ್ಲಿ ಜನ ಸಂಘಟನೆ ಮಾಡಿದನು. ಈ ಸಂಬಂಧವಾಗಿ ಹೊಸಪೇಟೆಯ ಠಾಕೂರ್ ಎಂಬುವರಿಗೆ ಸೈನ್ಯ ಭರ್ತಿಗಾಗಿ ಧನಸಹಾಯ ಮಾಡಿದುದರ ಉಲ್ಲೇಖವಿದೆ. ಈ ಪ್ರದೇಶದಿಂದ ೧೫೦ ಜನ ದೇಶ ಪ್ರೇಮಿಗಳನ್ನು ತನ್ನ ಸಶಸ್ತ್ರ ಪಡೆಗೆ ನೇಮಿಸಿಕೊಂಡನು. ಭೀಮರಾವ್, ಕೆಂಚನಗೌಡ, ಹಮ್ಮಿಗಿಯ ದೇಸಾಯಿ ಮೂವರು ಶಸ್ತ್ರ ಹಿಡಿದು ಹೊಸಪೇಟೆಯ ಸಮೀಪದ ಕೊಪ್ಪಳದ ಕೋಟೆಯನ್ನು ಹಿಡಿದರು ಆಗ ಬ್ರಿಟಿಷರ ಸೈನ್ಯವು ಕೋಟೆಯ ತೆರವಿಗೆ ಬಳ್ಳಾರಿಯಿಂದ ಹೊಸಪೇಟೆಯ ಮಾರ್ಗವಾಗಿ ಕೊಪ್ಪಳಕ್ಕೆ ತೆರಳಿತು. ಅಲ್ಲಿ ನಡೆದ ಯುದ್ಧದಲ್ಲಿ ಭೀಮರಾಯ ಮತ್ತು ಕೆಂಚನಗೌಡ ಸಾವನ್ನಪ್ಪಿದರು. ಅವರ ಬೆಂಬಲಗರಲ್ಲಿ ಸುಮಾರು ಸಾವಿರ ಮಂದಿ ಪ್ರಾಣ ಕಳೆದುಕೊಂಡರು. ಸುಮಾರು ೧೫೦ ಮಂದಿಯನ್ನು ಸೆರೆಹಿಡಿಯಲಾಯಿತು. ಅವರಲ್ಲಿ ೭೭ ಜನರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಇವರಲ್ಲಿ ಹೊಸಪೇಟೆ ತಾಲೂಕಿನ ೭ ಜನರು ಪ್ರಾಣ ತೆತ್ತರು. ಸ್ವಾತಂತ್ರ್ಯ ಹೋರಾಟಕ್ಕೆ ಇದು ತಾಲೂಕಿನ ಪ್ರಥಮ ಕಾಣಿಕೆ ಎಂದು

ಹೇಳಬಹುದು. ಆಧುನಿಕ ಶಿಕ್ಷಣವು ಸಾರ್ವತ್ರಿಕವಾಗಿ ದೊರೆತಿದ್ದರಿಂದ ಸಮಾಜದಲ್ಲಿ ಜಾಗೃತಿಯುಂಟಾಯಿತು. ಈ ಪ್ರದೇಶದಲ್ಲಿ ಕಾಂಗ್ರೆಸ್ ಸಂಸ್ಥೆಯ ಮುಂದಾಳತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಆರಂಭವಾಯಿತು. ಈ ಪ್ರದೇಶದ ಅನೇಕ ಪತ್ರಿಕೆಗಳು, ಸಂಘ-ಸಂಸ್ಥೆಗಳು, ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸಲು ಪ್ರಯತ್ನಿಸಿದವು. ಜನಸಾಮಾನ್ಯರೂ, ವಿದ್ಯಾರ್ಥಿಗಳು, ಯುವ ಜನರು, ರೈತರು ವಕೀಲರು ಸೇರಿದಂತೆ ಸಮಾಜದ ಎಲ್ಲಾ ವಿಭಾಗಗಳ ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಸಾಮೂಹಿಕವಾಗಿ ಭಾಗವಹಿಸಿದರು.

## ಸ್ವಾತಂತ್ರ್ಯ ಚಳುವಳಿಯಲ್ಲಿ ಹೊಸಪೇಟೆ ತಾಲೂಕಿನ ಪಾತ್ರ

ಭಾರತಕ್ಕೆ ಸ್ವಾತಂತ್ರ್ಯ ಬಂದಾಗಿನಿಂದಲೂ ಸ್ವಾತಂತ್ರ್ಯ ಹೋರಾಟದಲ್ಲಿ ಭಾರತೀಯರಾಗಿ ವಸಾಹತು ಶಾಹಿಯ ವಿರುದ್ಧ ಹೋರಾಡಿದ ಇತಿಹಾಸದ ನೆನೆಪುಗಳು, ಇನ್ನೂ ಮಾಸದಿರುವ ಸಂದರ್ಭ ನಮ್ಮ ಮುಂದಿದೆ. ಜಾತಿ, ಪಂಗಡ, ವರ್ಣ, ಬುಡಕಟ್ಟು, ಜನಾಂಗ, ಭಾಷೆ, ಧರ್ಮ ಮುಂತಾದ ಹೆಸರಿನ ಹೋರಾಟಗಳು ಇಂದು ಭಾರತದ ಪ್ರಜಾಪ್ರಭುತ್ವದ ಮಾದರಿಯನ್ನು ಮತ್ತು ಜಾತ್ಯಾತೀತ - ಸಮಾಜವಾದಿ ಸಂವಿಧಾನವನ್ನು ಗೇಲಿ ಮಾಡುತ್ತೇನೆ. ಇದರಿಂದಾಗಿ ಇಂದಿಗೂ ಶೇ. ೭೩ ರಷ್ಟು ಜನರು ಇನ್ನೂ ಬಡವರಾಗಿಯೇ ಇರಲು ಸಾಧ್ಯವಾಗಿದೆ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಬಳ್ಳಾರಿ ಜಿಲ್ಲೆಯ, ಅದರಲ್ಲೂ ವಿಶೇಷವಾಗಿ ಹೊಸಪೇಟೆಯ ಕೊಡುಗೆ ಪ್ರಮುಖವಾದುದು. ಸ್ವಾತಂತ್ರ್ಯ ಚಳುವಳಿಯ ನಂತರ ಈ ಪ್ರದೇಶದಲ್ಲಿ, ಜಿಲ್ಲೆಯಲ್ಲಿ, ಕರ್ನಾಟಕ ರಾಜ್ಯದಲ್ಲಿ ನಡೆದ ಏಕೀಕರಣ ಚಳುವಳಿ, ಏಕೀಕರಣೋತ್ತರ ಕಾಲದಲ್ಲಿ ನಡೆದ ಪ್ರಮುಖ ಸಾಂಘಿಕ ಚಳುವಳಿಗಳ ಮೇಲೆ ಸ್ವಾತಂತ್ರ್ಯ ಚಳುವಳಿಯ ಈ ಅನುಭವಗಳು, ದಟ್ಟವಾಗಿ ಪ್ರಭಾವ ಬೀರಿರುವುದನ್ನು ಪ್ರಮುಖವಾಗಿ ಗಮನಿಸಿಬಹುದು.

ಈ ಎಲ್ಲಾ ಸ್ವತಂತ್ರ್ಯ ನಂತರದ ಚಳುವಳಿಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರ ನಾಯಕತ್ವ ಅವರ ಭಾಗವಹಿಸುವಿಕೆಯನ್ನು ಕಾಣಬಹುದು. ಅದು ಆರ್ಥಿಕ ನೆಲೆಗೆ ಸಂಬಂಧಿಸಿದ ಚಳುವಳಿ ಆಗಿರಬಹುದು, ಅಥವಾ ಧಾರ್ಮಿಕ ಆಚರಣೆಗಳ ವಿರುದ್ಧ ನಡೆದ ಚಳುವಳಿಯಾಗಿರಬಹುದು. ಸಾಮಾಜಿಕ ಅನಿಷ್ಠ ಪದ್ಧತಿಗಳಾದ ಅಸ್ಪೃಶ್ಯತೆ, ಜಾತೀಯತೆ, ದೇವದಾಸಿ ಪದ್ಧತಿ, ಬಾಲಕಾರ್ಮಿಕದಂತಹ ಪದ್ದತಿಗಳ ವಿರುದ್ಧವಾಗಿ ನಡೆದ ಹಲವಾರು ಸ್ಥಳೀಯ ಚಳುವಳಿಗಳಲ್ಲಿ ಬಳ್ಳಾರಿ ಜಿಲ್ಲೆಯ, ಹೊಸಪೇಟೆ ತಾಲೂಕಿನ ಸ್ವಾತಂತ್ರ್ಯ ಹೋರಾಟಗಾರರು ಭಾಗವಹಿಸಿ ಮುಂದಿನಪೀಳಿಗೆಯ ಬಂಡಾಯಗಾರರಿಗೆ ಪ್ರೇರೇಪಣೆ ಹುರಿದುಂಬಿಸಿರುವುದು ನಮಗೆ ತಿಳಿದು ಬರುತ್ತದೆ.

ಈ ದೃಷ್ಠಿಯಿಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೊಸಪೇಟೆಯ ಬಳ್ಳಾರಿ ಜಿಲ್ಲೆಯ ಹೋರಾಟಗಾರರ ಅನೇಕ ಘಟನೆಗಳನ್ನು ಸ್ಮರಿಸುವುದು ಮುಂದಿನ ಅಧ್ಯಯನದ ದೃಷ್ಠಿಯಿಂದ ಅವಶ್ಯಕವೆಂದು ಭಾವಿಸಿದ್ದೇನೆ.

ಹೊಸಪೇಟೆಯ ಅನೇಕ ಸ್ವಾತಂತ್ರ್ಯ ಹೋರಾಟಗಾರರು ನಿಸ್ವಾರ್ಥಭಾವದಿಂದ ಯಾವುದೇ ಪ್ರತಿಫಲಾಕಾಂಕ್ಷೆಗಳಿಲ್ಲದೆ ಸ್ವಯಂ ಪ್ರೇರಿತರಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ಬಗೆಯ ಹಿಂಸೆ, ನೋವು ಸಂಕಟಗಳನ್ನು ಅನುಭವಿಸಿದರು. ಸ್ವಾತಂತ್ರ್ಯ ಹೋರಾಟಗಾರರು ನಡೆಸಿದ ಸಾಹಸ, ಅವರು ಅನುಭವಿಸಿದ ಹಿಂಸೆ, ನೋವು, ಇಂದು ಚರಿತ್ರೆಯ ಭಾಗವಾಗಿ ಹೋಗಿದೆ. ಈ ಸ್ವಾತಂತ್ರ್ಯ ಚಳುವಳಿಯ ಹೋರಾಟದಿಂದ ಇಂದಿನ ಪೀಳಿಗೆಯು ಮುಖ್ಯವಾಗಿ ಯುವಕರು, ವಿದ್ಯಾರ್ಥಿಗಳು ಪ್ರೇರಣೆ ಪಡೆದಿದ್ದಾರೆ. ಬಳ್ಳಾರಿ ಹೊಸಪೇಟೆಗೆ ಸಂಬಂಧಿಸಿದಂತೆ ಹೇಳಬೇಕೆಂದರೆ ೧೯೪೨ ರ ಭಾರತ ಬಿಟ್ಟು ತೊಲಗಿರಿ ಚಳುವಳಿಯ ಸಂದರ್ಭದಲ್ಲಿ ಜಿಲ್ಲೆಯ ವಿದ್ಯಾರ್ಥಿ ಸಮುದಾಯ ಅದ್ವಿತೀಯ ಸಾಹಸವನ್ನು ಮೆರೆಯಿತು. ಶಾಲಾ ಮಕ್ಕಳೂ, ಶಾಲಾ ಅಧ್ಯಾಪಕರೂ ಸಹಾ ಚಳುವಳಿಯಲ್ಲಿ ಭಾಗವಹಿಸಿದರು.

ಸಾಮಾಜಿಕ ಸುಧಾರಣೆಗೆ ಭಾರತದ ಸ್ವಾತಂತ್ರ್ಯ ಹೋರಾಟವು ನೀಡಿದ ಪ್ರೇರಣೆ ಅದರ ಒಂದು ವಿಶಿಷ್ಟವಾದ ಸ್ವರೂಪವಾಗಿದೆ. ಸಮಾಜ ಸುಧಾರಣೆಯು ಸ್ವಾತಂತ್ರ್ಯ ಚಳುವಳಿಯ ಒಂದು ಭಾಗವಾಗಿತ್ತು. ಹರಿಜನರ ಸುಧಾರಣೆ, ಅಸ್ಪೃಶ್ಯತೆಯನಿವಾರಣೆ, ವಿಧವಾ ವಿವಾಹ ಮುಂತಾದವು ಸಮಾಜ ಸುಧಾರಣೆಯ ಅಂಗಗಳಾಗಿದ್ದವು. ಈ ದಿಶೆಯಲ್ಲಿ ಬಳ್ಳಾರಿ ಜಿಲ್ಲೆಯ ಕೊಡುಗೆ ಅವಿಸ್ಮರಣೀಯವಾಗಿದೆ. ಕೊಟ್ಟೂರಿನ ಗೊರ್ಲಿ ಶರಣಪ್ಪನವರು ಕೇವಲ ಒಬ್ಬ ನಿಷ್ಠಾವಂತ ಸ್ವಾತಂತ್ರ್ಯ ಹೋರಾಟಗಾರರಷ್ಟೇ ಆಗಿರಲಿಲ್ಲ. ಬಾಲವಿಧವೆ ಕೋಗಳಿ ರುದ್ರಮ್ಮನವರನ್ನು ವಿವಾಹವಾಗಿ ಅವರೊಬ್ಬ ಆದರ್ಶ ಸಮಾಜ ಸುಧಾರಕರೆನಿಸಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಪುರುಷರಷ್ಟೇ ಮಹಿಳೆಯರು ಸಹಾ ತಮ್ಮ ವೈಯಕ್ತಿಕ ಇತಿಮಿತಿಯಲ್ಲಿ ಭಾಗವಹಿಸಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿಸದಿದ್ದರೂ ಪರೋಕ್ಷವಾಗಿ ಬೆಂಬಲ ನೀಡಿದ್ದಾರೆ. ಗಂಡಂದಿರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಜೈಲು ಸೇರಿದಾಗ ಹೆಂಡತಿ ತನ್ನ ಕುಟುಂಬದ ಜವಾಬ್ದಾರಿ ಹೊತ್ತಿದ್ದಾಳೆ. ಮಕ್ಕಳು ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದಾಗ ತಂದೆ-ತಾಯಿಯರು ಅಂತಹ ಹೋರಾಟಗಾರರ ಹೆಂಡತಿ ಮಕ್ಕಳನ್ನು ಸಾಕುವ ಜವಾಬ್ದಾರಿ ನಿಭಾಯಿಸಿದ್ದಾರೆ.

ವಸಾಹತು ಶಾಹಿ ಆಳ್ವಿಕೆಯಲ್ಲಿ ಜಿಲ್ಲೆ ಪ್ರಾಂತಗಡಿ ರೇಖೆಗಳು ಅನೇಕ ಬಾರಿ ಪುನಾರಚಿತ ಗೊಂಡವು. ಸ್ವಾತಂತ್ರ್ಯ ಹೋರಾಟಕ್ಕೆ ಪ್ರಾಂತ ಜಿಲ್ಲೆ ಎಂಬ ಗಡಿರೇಖೆಗಳಿರಲಿಲ್ಲ. ಒಂದು ಪ್ರಾಂತ, ತಾಲೂಕಿಗೆ ಸೇರಿದವರು ಬೇರೊಂದು ಪ್ರಾಂತ, ಜಿಲ್ಲೆಯಲ್ಲಿ ಹೋರಾಟ ಮಾಡಿದ ನಿದರ್ಶನಗಳಿವೆ. ಈ ದೃಷ್ಠಿಯಿಂದ ಹೊಸಪೇಟೆ ಭಾಗದ ಅಸಂಖ್ಯಾತ ಹೋರಾಟಗಾರರು ಭಾಗವಹಿಸಿದ್ದರು. ಇಲ್ಲಿ ವ್ಯಕ್ತಿಗಳಿಂತ, ಗಡಿ - ಪ್ರಾಂತಗಳಿಗಿಂತ ಅವರ ಹೋರಾಟ ಪ್ರಮುಖವಾಗಿರುತ್ತದೆ. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಪಟ್ಟಂತೆ ಘಟನೆ, ಪ್ರಸಂಗ, ಪ್ರಕರಣಗಳ ವಿವರಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ಗುರುತಿಸಬಹುದಾಗಿದೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅನೇಕ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ಈ ಸಂಸ್ಥೆಗಳು ಜನರನ್ನು ಸಂಘಟಿಸುವ, ಸ್ವಾತಂತ್ರ್ಯ ಹೋರಾಟದ ಬಗ್ಗೆ ಜನ ಜಾಗೃತಿ ಮೂಡಿಸುವ, ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ಪ್ರಚುರ ಪಡಿಸುವ ಕೆಲಸ ಮಾಡಿದವು. ಅನೇಕ ಉನ್ನತ ಸ್ಥಾನಗಳಲ್ಲಿದ್ದ ಭಾರತೀಯ ಅಧಿಕಾರಸ್ಥರು ಜನರ ಸ್ವಾತಂತ್ರ್ಯ ಹೋರಾಟಕ್ಕೆ ಪರೋಕ್ಷ ಬೆಂಬಲ ನೀಡಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿದ್ದ ಹಲವಾರ ಜನರು ನಮ್ಮೊಂದಿಗಿದ್ದಾರೆ. ಇವರೆಲ್ಲರ ತ್ಯಾಗ ಬಲಿದಾನಗಳಿಂದ ನಮಗೆ ಸ್ವಾತಂತ್ರ್ಯ ಪ್ರಾಪ್ತವಾಯಿತು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದವರಿಗೆ ಭಾರತವನ್ನು ಸ್ವಾತಂತ್ರ್ಯ ಗೊಳಿಸುವುದರ ಜೊತೆಗೆ ಸ್ವಾತಂತ್ರ್ಯ ಭಾರತದ ಭವಿಷ್ಯತ್ತಿನ ಬಗ್ಗೆ ಅನೇಕ ಕನಸುಗಳಿದ್ದವು.

೧೮ನೇ ಶತಮಾನದ ಕೊನೆ ಭಾಗದಲ್ಲಿ ಬಳ್ಳಾರಿ ಜಿಲ್ಲೆಯ ಬಹುತೇಕ ತಾಲೂಕುಗಳು ಹೈದ್ರಾಬಾದಿನ ಸುಲ್ತಾನರ ಅಧಿಪಟ್ಟಕ್ಕೆ ಸೇರಿದ್ದವು. ಕ್ರಿ.ಶ.೧೮೦೦ ರಲ್ಲಿ ಸಹಾಯಕ ಸೈನ್ಯ ಪದ್ಧತಿಯನ್ನು ಒಪ್ಪಿಕೊಂಡ ಹೈದ್ರಾಬಾದಿನ ನಿಜಾಮನು ಬಳ್ಳಾರಿ ಜಿಲ್ಲೆಯ ಕೆಲವು ಪ್ರಾಂತಗಳೂ ಸೇರಿದಂತೆ ಅನಂತಪುರ, ಕರ್ನೂಲು, ಮತ್ತು ಕಡಪ ಜಿಲ್ಲೆಗಳನ್ನು ಬ್ರಿಟೀಷರಿಗೆ ಕಾಣಿಕೆಯಾಗಿ ನೀಡಿದನು. ಹೀಗೆ ಬ್ರಿಟೀಷರಿಗೆ ಪ್ರಾಪ್ತವಾದ ಜಿಲ್ಲೆಗಳನ್ನು "Ceded districts" (ದತ್ತ ಮಂಡಲಗಳು) ಗಳೆಂದು ಕರೆಯಲಾಯಿತು. ಹೀಗೆ ಬಳ್ಳಾರಿ ಪ್ರದೇಶವು ಬ್ರಿಟಿಷರ ನೇರ ಆಡಳಿತಕ್ಕೆ ಸೇರಿತು. ಬ್ರಿಟೀಷರು ಬಳ್ಳಾರಿಯನ್ನು ಮದ್ರಾಸ್ ಪ್ರಾಂತಕ್ಕೆ ಸೇರಿಸಿದರು. ಬಳ್ಳಾರಿ ಪ್ರದೇಶವು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟಾಗ ಥಾಮಸ್ ಮನ್ರೋರವರು, ಜಿಲ್ಲಾ ಕಲೆಕ್ಟರರಾಗಿದ್ದರು. ಈ ಪ್ರದೇಶದ ವಿವಿಧ ಭಾಗಗಳಲ್ಲಿ ನಡೆದ ದೇಸಿ ಬಂಡಾಯಗಳನ್ನೇ ಇವನು ಹತ್ತಿಕ್ಕಿದನು. ಇವನು ಈ ಪ್ರದೇಶದಲ್ಲಿ ಏಕರೂಪ ಆಡಳಿತವನ್ನು ಜಾರಿಗೆ ತಂದನು. ಪ್ರಾರಂಭದಲ್ಲಿ ಒಟ್ಟು ೧೮ ತಾಲೂಕುಗಳಿದ್ದು, ನಂತರ ೧೫ಕ್ಕೆ ಇಳಿಯಿತು. ಇದರಲ್ಲಿ ಹೊಸಪೇಟೆ ಹರಪನಹಳ್ಳಿ, ಕೂಡ್ಲಿಗಿ, ಹಡಗಲಿಗಳೂ ಸೇರಿದ್ದವು. ೧೮೮೪ ರಲ್ಲಿ ಬಳ್ಳಾರಿ ಹೊಸಪೇಟೆ ರೈಲು ಮಾರ್ಗ ನಿರ್ಮಿಸಲಾಯಿತು. ಬಳ್ಳಾರಿಯಲ್ಲಿ ಬ್ರಿಟೀಷರು ಒಂದು ದಂಡು ಪ್ರದೇಶವನ್ನು ನಿರ್ಮಿಸಿದ್ದರು.

೧೯೦೦ ನಂತರ ಹೊಸಪೇಟೆ ಉಪ ವಿಭಾಗವನ್ನು ರಚಿಸಲಾಯಿತು. ಈ ಉಪವಿಭಾಗದಲ್ಲಿ ಉಪಕಲೆಕ್ಟರ್‌ರವರನ್ನು ನೇಮಿಸಲಾಯಿತು. ಈ ಉಪವಿಭಾಗಕ್ಕೆ ಕೂಡ್ಲಿಗಿ, ಹಡಗಲಿ, ಹರಪನಹಳ್ಳಿಗಳನ್ನು ಸೇರಿಸಲಾಯಿತು. ಅಲ್ಲೀಪುರದ ಜೈಲು ಅತ್ಯಂತ ಪ್ರಸಿದ್ಧವಾದ ಜೈಲಾಗಿತ್ತು. ಈ ಜೈಲಿನಲ್ಲಿ ಸುಮಾರು ೨೫೦೦ ಖೈದಿಗಳನ್ನು ಏಕಕಾಲದಲ್ಲಿ ಇಡಬಹುದಾಗಿತ್ತು. ಭದ್ರತೆಯ ದೃಷ್ಠಿಯಿಂದ ಈ ಜೈಲಿನ ಸುತ್ತ ಹಾಕಲಾಗಿದ್ದ ಮುಳ್ಳು ತಂತಿ ಬೇಲಿಗೆ ೧೯೨೨ ರಿಂದ ವಿದ್ಯುತ್ ಹರಿಸುವ ಕ್ರಮ ಜಾರಿಗೆ ಬಂದಿತು. ಸ್ವಾತಂತ್ರ್ಯ ಹೋರಾಟದ ದೃಷ್ಟಿಯಿಂದ ಅಲ್ಲೀಪುರದ ಜೈಲಿಗೆ ಚಾರಿತ್ರಿಕ ಮಹತ್ವವಿದೆ. ಹೊಸಪೇಟೆ ತಾಲೂಕಿನ ಅನೇಕ ಸ್ವಾತಂತ್ರ್ಯ ಹೋರಾಟಗಾರರಿಗೆ ಅಲ್ಲೀಪುರದ ಜೈಲು ಎರಡನೆ ಮನೆಯಂತಿತ್ತು. ಸ್ವಾತಂತ್ರ್ಯ ನಂತರ ಅಲ್ಲೀಪುರದ ಜೈಲು ವೈದ್ಯಕೀಯ ಮಹಾವಿದ್ಯಾಲಯವಾಗಿ ರೂಪುಗೊಂಡಿತು. ಈಗ ಅದು ಅಲ್ಲೊಂದು ಜೈಲಿತ್ತು. ಅಲ್ಲಿ ಸೆರೆವಾಸ ಅನುಭವಿಸಲಾಗಿತ್ತು ಎಂಬುದನ್ನು ನೆನಪಿಸುವ ಗುರುತುಗಳು ಈಗ ಅಲ್ಲಿ ಇಲ್ಲವಾಗಿದೆ. ಚರಿತ್ರೆಯ ಗುರುತುಗಳನ್ನು ಗುರುತಿಸುವಂತಹ ಕನಿಷ್ಠ ಜವಾಬ್ದಾರಿಯನ್ನು ನಿರ್ವಹಿಸದಿರುವುದು ವಿಚಿತ್ರವೆನಿಸುತ್ತದೆ.

ಸ್ವಾತಂತ್ರ್ಯ ಹೋರಾಟ ೧೯೨೦ ರವರೆಗೆ ಕೇವಲ ನಗರ ಪ್ರದೇಶಗಳಿಗೆ ಸೀಮಿತವಾಗಿತ್ತು. ಕಾಲಾನಂತರ ಸಮಾಜದ ಎಲ್ಲಾ ಪ್ರದೇಶಗಳ ಜನರನ್ನು ತನ್ನತ್ತ ಎಳೆದುಕೊಂಡಿತು. ಮಹಾತ್ಮಗಾಂಧೀಜಿಯವರ ನಂತರವೇ ಕೆಳಸ್ತರದ ವರ್ಗ-ಜಾತಿಗಳು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರವೇಶಿಸ ತೊಡಗಿದವು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರವೇಶಿಸ ತೊಡಗಿದವು. ಭಾರತದ ಸ್ವಾತಂತ್ರ್ಯ ಹೋರಾಟದ ಸಾಮಾಜಿಕ ಸ್ವರೂಪ ತೀವ್ರ ಬದಲಾವಣೆ ಆಗತೊಡಗಿತು. ಈ ಹೊರಾಟ ನಿಧಾನವಾಗಿ ಸಮೂಹ ಸ್ವರೂಪ ಪಡೆಯತೊಡಗಿತು. ೧೯೩೦ರ ನಂತರ ಮಹಾತ್ಮಗಾಂಧೀಜಿಯವರು ದೊಡ್ಡ ಪ್ರಮಾಣದಲ್ಲಿ ಅಸ್ಪೃಶ್ಯತೆ ನಿವಾರಣೆ, ಹರಿಜನ ಸುಧಾರಣೆ ಕಾರ್ಯಕ್ರಮಗಳನ್ನು ಕೈಗೊಂಡರು. ಸಮಾಜದ ದೀನದಲಿತ ಕೆಳ ವರ್ಗಗಳ ಜೊತೆ ತಮ್ಮನ್ನು ಸಮೀಕರಿಸಿಕೊಂಡಲು.

೧೯೩೦ ರ ನಂತರ ಸ್ವಾತಂತ್ರ್ಯ ಹೋರಾಟ ತೀವ್ರವಾದ ಪರಿಣಾಮ ಬೀರತೊಡಗಿತು. ನಗರ, ಗ್ರಾಮವಾಸಿಗಳೆಲ್ಲರೂ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಲು ಆರಂಭಿಸಿದರು. ಮುಸ್ಲಿಂರು, ಮಹಿಳೆಯರೂ, ವಿದ್ಯಾವಂತರು, ಅನಕ್ಷರಸ್ಥರು, ರೈತರು ಸೇರಿದಂತೆ ಬಹುತೇಕ ಎಲ್ಲಾ ವರ್ಗದ ಜನರು ಚಳುವಳಿಯಲ್ಲಿ ಭಾಗವಹಿಸಿದರು. ಹೊಸಪೇಟೆ ತಾಲೂಕಿನಲ್ಲಿ ಸೀಮಿತ ವ್ಯಾಪ್ತಿಯಲ್ಲಿ ಮಾತ್ರ ನೆಲೆಗೊಂಡಿದ್ದ, ಸ್ವಾತಂತ್ರ್ಯ ಹೋರಾಟ ಕ್ರಮೇಣ ತಾಲೂಕಿನ ಹರಿಜನರು, ವೀರಶೈವರು, ವೈಶ್ಯರು, ವಾಲ್ಮೀಕಿ, ಗಂಗಾಮತ, ರೆಡ್ಡಿ, ಮರಾಠ, ಮುಸ್ಲಿಂರು ಸೇರಿದಂತೆ ಎಲ್ಲಾ ವರ್ಗದ ಜನ ಭಾಗವಹಿಸಿದರು.

ಉಪ್ಪಿನ ಸತ್ಯಾಗ್ರಹಕ್ಕೆ ನಿಧಿ ಸಂಗ್ರಹಿಸಲು ನೇಮಿಸಿದ ಮಂಡಳಿಗೆ ನಿಧಿ ನೀಡಿದ ಪ್ರಮುಖರಲ್ಲಿ ಹೊಸಪೇಟೆಯ ತಟ್ಟಿಕೃಷ್ಣರಾವ್ ರವರೂ ಒಬ್ಬರಾಗಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಉಪ್ಪಿನ ಸತ್ಯಾಗ್ರಹ ಆಚರಿಸಲು ಸಾಧ್ಯವಿರಲಿಲ್ಲ. ಅಂಕೋಲದಲ್ಲಿ ಉಪ್ಪಿನ ಸತ್ಯಾಗ್ರಹ ಆಚರಿಸುತ್ತಿದ್ದ ಸಂದರ್ಭದಲ್ಲಿ

ಹೊಸಪೇಟೆ ತಾಲೂಕಿನಾದ್ಯಂತ ಮಧ್ಯಪಾನ ವಿರೋಧಿ ಚಳುವಳಿಯನ್ನು ಆಚರಿಸಲಾಯಿತು. ಈಚಲ ಮರ ಕಡಿಯುವುದು, ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವುದು, ಹೆಂಡದಂಗಡಿಗಳ ಬಹಿರಂಗ ಹರಾಜು ತಡೆಯುವುದು ವಿದೇಶಿ ಬಟ್ಟೆ ಸುಡುವುದು, ಪ್ರಭಾತ್‌ಪೇರಿ ನಡೆಸುವುದು. ೧೯೩೦ ರ ಸವಿನಯ ಕಾಯ್ದೆ ಭಂಗ ಚಳುವಳಿಗಳು ಸಂದರ್ಭದಲ್ಲಿ ಹೊಸಪೇಟೆ ತಾಲೂಕಿನಾದ್ಯಂತ ನಡೆದವು. ಈ ಚಳುವಳಿಗಳ ಜೊತೆಗೆ ಮಹಾತ್ಮ ಗಾಂಧೀಜಿಯವರಿಗೆ ಬಹುಪ್ರಿಯವಾಗಿದ್ದ ಹರಿಜನ ಸುಧಾರಣೆ, ಅಸ್ಪೃಶ್ಯತೆ ನಿವಾರಣೆ, ಹರಿಜನರಿಗೆ ದೇವಾಲಯ ಪ್ರವೇಶ ಮೊದಲಾದ ಚಳುವಳಿಗಳನ್ನು ಒಟ್ಟೊಟ್ಟಿಗೆ ನಡೆಸಲಾಗುತ್ತಿತ್ತು. ಈ ರೀತಿಯ ಚಳುವಳಿಗಳ ನೇತೃತ್ವವನ್ನು ಕಂಪಲಿ ಕೊಟ್ರಪ್ಪ, ಕೆ. ಗುರುನಾಥಪ್ಪ, ಪಿ. ಕೊಂಡಯ್ಯ ವಿ. ಗಿರಿ, ಬಿ.ವಿ. ಶೇಷಗಿರಿರಾವ್ ಮೊದಲಾದವರು ವಹಿಸಿ ಬಂಧನಕ್ಕೊಳಗಾಗಿ ಜೈಲು ಶಿಕ್ಷೆ ಅನುಭವಿಸಿದ್ದಾರೆ.

೧೯೩೪ ರಲ್ಲಿ ಬಳ್ಳಾರಿ ಜಿಲ್ಲೆಗೆ ಭೇಟಿಕೊಟ್ಟ ಸಂದರ್ಭದಲ್ಲಿ ಬಳ್ಳಾರಿಯಿಂದ ಹುಬ್ಬಳ್ಳಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಹೊಸಪೇಟೆಗೆ ಸ್ವಲ್ಪಕಾಲ ಭೇಟಿನೀಡಿ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಿ ಮಾತನಾಡಿದ್ದು, ಬಹಿರಂಗಸಭೆಯ ತಮ್ಮ ಭಾಷಣದಲ್ಲಿ ಮಹಾತ್ಮ ಗಾಂಧೀಜಿಯವರು ಅಸ್ಪೃಶ್ಯತೆಯನ್ನು ಬೇರು ಸಹಿತ ಕಿತ್ತು ಹಾಕಬೇಕು ಎಂಬ ಒಂದೇ ಒಂದು ವಾಕ್ಯದ ಸಂದೇಶ ನೀಡಿ, ಬೆಲ್ಲದ ಚೆನ್ನಪ್ಪ, ಅಸುಂಡಿ ಭೀಮರಾವ್ ಮೊದಲಾದವರು ಸಂಗ್ರಹಿಸಿದ್ದ ಹೋರಾಟದ ನಿಧಿಯನ್ನು ಸ್ವೀಕರಿಸಿ ಪ್ರಯಾಣ ಮುಂದುವರಿಸಿದರು.

೧೯೩೯ ರಲ್ಲಿ ಆರಂಭಗೊಂಡ ಪ್ರಪಂಚದ ೨ನೇ ಮಹಾಯುದ್ಧಲ್ಲಿ ದೇಶದ ಜನತೆಯನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೇ ಏಕಪಕ್ಷೀವಾಗಿ ಭಾರತವನ್ನು ಯುದ್ಧಕ್ಕೆ ತಳ್ಳಿದ ಬ್ರಿಟೀಷರ ನೀತಿಯನ್ನು ವಿರೋಧಿಸಲು ೧೯೪೦-೪೧ ರಲ್ಲಿ ಮಹಾತ್ಮ ಗಾಂಧೀಜಿಯವರು 'ವ್ಯಕ್ತಿ ಸತ್ಯಾಗ್ರಹ' ನಡೆಸಲು ಕರೆ ನೀಡಿದರು. ಇವರ ಈ ಕರೆಯ ಮೇರೆಗೆ ಆಯ್ದ ನಾಯಕರು ಬಹಿರಂಗವಾಗಿ ಯುದ್ಧ ಪ್ರಯತ್ನಗಳಿಗೆ ಅಡ್ಡಿ ಪಡಿಸದೇ, ಯುದ್ಧ ವಿರೋಧಿ ಘೋಷಣೆ ಕೂಗಿ ಬಂದನಕ್ಕೊಳಗಾಗುವುದೇ ಈ ಚಳುವಳಿಯ ಉದ್ದೇಶವಾಗಿತ್ತು. ಈ ರೀತಿ 'ವ್ಯಕ್ತಿ ಸತ್ಯಾಗ್ರಹ' ನಡೆಸಿ ಬಂಧನಕ್ಕೊಳಗಾದ ಹೊಸಪೇಟೆ ತಾಲೂಕಿನ ರಾಮಸಾಗರ ಗ್ರಾಮದ ಗೆಣಕಿಹಾಳ್‌ಭೀಮಪ್ಪ, ಹೊಸಪೇಟೆಯ ಡಾ॥ ಆರ್. ನಾಗನಗೌಡ, ಅನಂತಶಯನಗುಡಿಯ ದಳವಾಯಿ ಅಂಬಣ್ಣ, ನಾರಾಯಣದೇವರಕೆರೆಯ ಪಾಟೀಲ್ ಮರಿಸ್ವಾಮಯ್ಯ ಮಠದ ಪಾಟೀಲ ಬೂದಿಹಾಳ್ ಅನಂತಾಚಾರ್, ಬೆಲ್ಲದ ಚನ್ನಪ್ಪ, ಪತ್ತಿಗೊಂಡ ಗುರುನಾಥಪ್ಪ ಶೆಟ್ಟಿ ಮೊದಲಾದವರು ಸೇರಿದ್ದಾರೆ.

ಮುಂದೆ ೧೯೪೬ ರಲ್ಲಿ ಮುದ್ರಾಸ್ ಪ್ರಾಂತ ರಚನೆಗೆ ಚುನಾವಣೆ ನಡೆದಾಗ ಹೊಸಪೇಟೆಯ ಬೂದಿಹಾಳ್ ಅನಂತಾಚಾರ್‌ರವರು ಅವಿರೋಧವಾಗಿ ಆಯ್ಕೆಯಾದುದು ಚಾರಿತ್ರಿಕ ಮಹತ್ವದ ಘಟನೆಯಾಗಿದೆ.

ಎರಡನೆಯ ಮಹಾಯುದ್ದವು ಭಾರತದ ಸ್ವಾತಂತ್ರ್ಯ ಹೋರಾಟದ ಮೇಲೆ ತೀವ್ರ ರೀತಿಯ ಪರಿಣಾಮವನ್ನು ಬೀರತೊಡಗಿತು. ಯುದ್ದದಲ್ಲಿ ಭಾರತವನ್ನು ಒತ್ತಾಯ ಪೂರ್ವಕವಾಗಿ ತಳ್ಳಿದ್ದ ಬ್ರಿಟೀಷರ ವಿರುದ್ದ ನಿರ್ಣಯಕ ಹೋರಾತಕ್ಕೆ ಸಜ್ಜಾಗುವುದು ಅನಿವಾರ್ಯವಾಯಿತು. 'ಭಾರತ ಬಿಟ್ಟು ತೊಲಗಿ' ಎನ್ನುವ ಹೋರಾಟ ನಡೆಸಲು ಕಾಂಗ್ರೆಸ್ ನಿರ್ಣಯ ಕೈಗೊಂಡಿತು. ಚಳುವಳಿಯಲ್ಲಿ ಭಾಗವಹಿಸುವ ಪ್ರತಿಯೊಬ್ಬ ಕಾರ್ಯಕರ್ತನು ಕಾಂಗ್ರೆಸ್ಸಿನ ಸಾಮಾನ್ಯ ನಿಯಮಗಳ ಚೌಕಟ್ಟಿನಲ್ಲಿ ತಂತಮ್ಮ ಸ್ವಂತ ವಿವೇಚನೆಯಿಂದ ಕಾರ್ಯನಿರ್ವಹಿಸಬೇಕೆಂದು ಸೂಚನೆನೀಡಲಾಯಿತು. ಮುಂಚೂಣಿಯಲ್ಲಿದ್ದಂತಹ ರಾಷ್ಟ್ರೀಯ, ರಾಜ್ಯಮಟ್ಟದ ಮುಖಂಡರೆಲ್ಲಾ ಬಂಧನಕ್ಕೊಳಗಾದರು. ಪೋಲಿಸ್ ಠಾಣೆಗಳು, ರೈಲ್ವೆ ನಿಲ್ದಾಣಗಳು, ಅಂಚೆ ಕಛೇರಿಗಳು, ದೂರವಾಣಿ ಸಂಪರ್ಕಗಳು, ಸೇತುವೆಗಳು ಮುಂತಾದವು ಚಳುವಳಿಗಾರರ ಆಕ್ರೋಶಕ್ಕೆ ಗುರಿಯಾದವು. ಈ ಚಳುವಳಿಯಲ್ಲಿ ವಿದ್ಯಾರ್ಥಿಗಳು ಸೇರಿದಂತೆ ದೇಶದ ಬಹುತೇಕ ಎಲ್ಲಾ ಜನ ವಿಭಾಗದವರು ಭಾಗವಹಿಸಿದರು. ವಿದ್ಯಾರ್ಥಿಗಳು ಪ್ರತಿಯೊಂದು ಹಳ್ಳಿಗಳಿಗೆ ಹೋಗಿ ಗಾಂಧೀಜಿಯವರು 'ಮಾಡು ಇಲ್ಲವೆ ಮಡಿ' ಮಂತ್ರದ ಸಂದೇಶವನ್ನು ಜನರಿಗೆ ಮನವರಿಕೆ ಮಾಡಿಕೊಟ್ಟರು.

'ಭಾರತ ಬಿಟ್ಟು ತೊಲಗಿ' ಹೋರಾಟದಲ್ಲಿ ಕರ್ನಾಟಕ ಮಾದರಿ ಹೋರಾಟ ಅತ್ಯಂತ ಮಹತ್ವದಾಗಿದೆ. ಸರ್ಕಾರಿ ಖಜಾನೆಗಳನ್ನು ಲೂಟಿ ಮಾಡುವುದು, ಟೆಲಿಫೋನ್ ತಂತಿಗಳನ್ನು ಕತ್ತರಿಸುವುದು, ಅಂಚೆ ಪೆಟ್ಟಿಗೆಗಳನ್ನು ಲಪಟಾಯಿಸುವುದು, ಸರ್ಕಾರದ ಆಸ್ತಿ-ಪಾಸ್ತಿಗಳನ್ನು ಸುಡುವುದು, ಪೋಲೀಸ್ ಠಾಣೆಗಳಿಂದ ಶಸ್ತ್ರಾಸ್ತ್ರಗಳನ್ನು ಅಪಹರಿಸುವುದು. ಇವು 'ಕರ್ನಾಟಕ ಮಾದರಿ' ಚಳುವಳಿಯ ಉದಾಹರಣೆಗಳಾಗಿವೆ. ಸರ್ಕಾರಿ ಖಜಾನೆ ಲೂಟಿ ಮಾಡುವ ಚಳುವಳಿಯ ಸಂದರ್ಭದಲ್ಲಿ ಪೋಲಿಸರ ಗುಂಡಿಗೆ ಬಲಿಯಾಗಿ ಮೈಲಾರ ಮಹದೇವಪ್ಪನವರು ಹುತಾತ್ಮರಾದರು.

ಹೊಸಪೇಟೆ, ತಾಲೂಕಿನಲ್ಲಿಯೂ ಈ ಅಂತಿಮ ಹಾಗೂ ನಿರ್ಣಾಯಕ 'ಭಾರತ ಬಿಟ್ಟು ತೊಲಗಿ' ಚಳುವಳಿ ಉಗ್ರರೂಪ ಪಡೆದುಕೊಂಡಿತು. ಶಿಕ್ಷಕರು, ವಕೀಲರು ವಿದ್ಯಾರ್ಥಿಗಳು, ಸರಕಾರಿ ಅಧಿಕಾರಿಗಳು, ಶಾನುಭೋಗಗಳು, ಪಾಟೇಲರು, ತಮ್ಮ ತಮ್ಮ ಹುದ್ದೆಗಳಿಗೆ ರಾಜೀನಾಮೆ ನೀಡಿ ಚಳುವಳಿಯಲ್ಲಿ ಧುಮುಕಿದರು. ೧೯೪೨ ಆಗಸ್ಟು ೧೦ರಂದು ಹೊಸಪೇಟೆಯ ಕೋರಿಶೆಟ್ಟಿ ಜಂಬಣ್ಣ, ರಾರಾವಿ ಹೇಮಡಿ ಸಿದ್ಧಪ್ಪ, ಸೀರೆಗಣಪತಿ ಮುಂತಾದ ವಿದ್ಯಾರ್ಥಿಗಳು ಶಾಲೆಗಳನ್ನು ಬಹಿಷ್ಕರಿಸಿ ಚಳುವಳಿಯಲ್ಲಿ ಭಾಗವಹಿಸಿದರು. ಹೊಸಪೇಟೆ ತಾಲೂಕಿನ ನಾನಾ ಸ್ಥಳಗಳಿಗೆ ಹೋಗಿ ಇವರೆಲ್ಲಾ ಭಾಷಣ ಮಾಡಿ ಜನರನ್ನು ಹುರಿದುಂಬಿಸಿದರು. ವಲ್ಲಭಾಪುರ, ನಾರಾಯಣದೇವರ ಕೆರೆ, ತಂಬ್ರಳ್ಳಿ ಮುಂತಾದ ಊರುಗಳಲ್ಲಿ ಕೋರಿಶೆಟ್ಟಿ ಜಂಬಣ್ಣ ನವರ ತಂಡ ತುಂಬಾ ಯಶಸ್ವಿಯಾಗಿ ಜನಜಾಗೃತಿ ಉಂಟು ಮಾಡಿತು.

ಬ್ರಿಟೀಷರು ತಯಾರಿಸಿದ್ದ ರಹಸ್ಯವರದಿಯಲ್ಲಿ ೧೯೪೨ ರಲ್ಲಿ ನಡೆದ ಚಲೇಜಾವ ಚಳುವಳಿಗೆ ಸಂಬಂಧಿಸಿದಂತೆ ಹೊಸಪೇಟೆಯ ಮುನ್ಸಿಪಲ್ ಹೈಸ್ಕೂಲ್ ಕಟ್ಟಡಕ್ಕೆ ಬೆಂಕಿ ಹಚ್ಚಿದ್ದ ಪ್ರಕರಣವು ದಾಖಲಾಗಿದೆ. ಈ ಪ್ರಕಣದಲ್ಲಿ ಭಾಗವಹಿಸಿದ್ದಹೊಸಪೇಟೆಯ ಸಜ್ಜೇದ ವೀರಣ್ಣರವರ ಪ್ರಕಾರ ಕೋರಿಶೆಟ್ಟಿ ಜಂಬಣ್ಣ, ಎಸ್. ಗಣಪತಿ, ಜಿ. ನಾರಾಯಣ ಸ್ವಾಮಿ, ಬಿ. ಮರ್ಧಮಾನ, ಜಿ. ವೆಂಕಣ್ಣ, ಡಿ. ಕೃಷ್ಣರಾವ್, ಎಚ್. ಕೊಟ್ರಪ್ಪ, ಆರ್. ಪಂಪಣ್ಣ, ಕೆ. ಹನುಮಂತ ಇವರೆಲ್ಲಾ ಸೇರಿಕೊಂಡು ಹೊಸಪೇಟೆಯಲ್ಲಿ ಅನೇಕ ವಿಧ್ವಾಂಸರು ಕೃತ್ಯವೆಸಗಿದರು. ಇವರಲ್ಲಿ ಹೊಸಪೇಟೆ ಹೈಸ್ಕೂಲಿಗೆ ಬೆಂಕಿಹಚ್ಚಿದ ಪ್ರಕರಣದಲ್ಲಿ ಶಿಕ್ಷೆಗೊಳಗಾದ ಸತ್ಯಾಗ್ರಹಿಗಳೆಂದರೆ ಸಜ್ಜೇದ ವೀರಣ್ಣ, ಬಿ. ವರ್ಧಮಾನ, ಆರ್. ಪಂಪಣ್ಣ, ಜಿ. ನಾರಾಯಣಸ್ವಾಮಿ, ಜಿ. ವೆಂಕಣ್ಣ, ಎಚ್. ಕೊಟ್ರಪ್ಪ ಮತ್ತು ಡಿ. ಕೃಷ್ಣರಾವ್.

೧೯೪೬ ರಲ್ಲಿ ಅಕ್ಟೋಬರ್ ೧೩, ೧೪ ಮತ್ತು ೧೫ ರಂದು ಮೂರು ದಿನಗಳ ಕಾಲ ಆಂಧ್ರಪ್ರದೇಶದ ರಾಜಮಂತ್ರಿಯ ಆಂಧ್ರ ಇತಿಹಾಸ ಸಂಶೋಧನ ಸಂಸ್ಥೆಯು ಹಂಪಿಯಲ್ಲಿ 'ವಿಜಯನಗರ ಸಾಮ್ರಾಜ್ಯ ದಿನಾಚರಣೆ' ಸಮಾವೇಶವನ್ನು ಸಂಘಟಿಸಿತ್ತು. ಕರ್ನಾಟಕದ ಭೂಮಿಯ ಮೇಲೆ ಆಂಧ್ರದವರ ಆಕ್ರಮಣವನ್ನು ಪ್ರತಿಭಟಿಸಿ ಬಳ್ಳಾರಿಯ ಬಿ. ಎಂ. ಮರುಳಸಿದ್ದಯ್ಯ ನವರು ಕಪ್ಪು ಬಾವುಟ ಪ್ರದರ್ಶನ ನಡೆಸಿದರು. ಸಮ್ಮೇಳನದ ಕಾರ್ಯದರ್ಶಿಗಳು ಈ ಬಗ್ಗೆ ಸೂಕ್ತ ಸಮಜಾಯಿಷಿ ನೀಡಿದ ನಂತರವೇ ಪ್ರತಿಭಟನೆ ನಿಲ್ಲಿಸಿದರು. ಸ್ವಾತಂತ್ರ್ಯ ಪೂರ್ವದಲ್ಲಿಯೇ ಕನ್ನಡ, ಕರ್ನಾಟಕಗಳ ಬಗ್ಗೆ ಭಾಷೆಯ ಬಗ್ಗೆ ಹೋರಾಟ ನಡೆಸಿದ್ದರು ಎಂಬುದಕ್ಕೆ ಇದೊಂದು ಉದಾಹರಣೆ ಮಾತ್ರ.

ಸ್ವಾತಂತ್ರ್ಯ ಚಳುವಳಿ ಹೊಸಪೇಟೆ ತಾಲೂಕಿನಾದ್ಯಂತ ಎಷ್ಟು ತೀವ್ರ, ವ್ಯಾಪಕವಾಗಿತ್ತೆಂದರೆ ವಿದ್ಯಾರ್ಥಿಗಳು, ಯುವಜನರು, ಮಹಿಳೆಯರು, ರೈತರು, ದಲಿತರು ಪ್ರಾಧಿಕಾರಸ್ಥರು ಎಲ್ಲಾ ವರ್ಗದ ಜನರು ಈ ಅಂತಿಮ ಹೋರಾಟದಲ್ಲಿ ಭಾಗವಹಿಸಿದ್ದರು. ಈ ಚಳುವಳಿಯ ಸಂದರ್ಭದಲ್ಲಿ ಆಳುವ ಬ್ರಿಟೀಷ್ ಸರಕಾರ ತಯಾರಿಸಿದ ರಹಸ್ಯ ವರದಿಯಲ್ಲಿ ದಾಖಲಿಸಿರುವ ಪ್ರಕಾರ ಹೇಳಬೇಕೆಂದರೆ ಹೊಸಪೇಟೆ ಸೇರಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು 30 ಘಟನೆಗಳು ನಡೆದಿದ್ದು, ಅದರಲ್ಲಿ ಹೊಸಪೇಟೆ ಯಲ್ಲಿ 8 ಘಟನೆಗಳು ನಡೆದಿವೆ. ಹೊಸಪೇಟೆಯಲ್ಲಿ ಕಾಂಗ್ರೇಸ್ ನಾಯಕರ ಬಂಧನವನ್ನು ವಿರೋಧಿಸಿ ಮುನ್ಸಿಪಲ್ ಹೈಸ್ಕೂಲ್ ವಿದ್ಯಾರ್ಥಿಗಳು ಅರ್ಧಕ್ಕಿಂತಲೂ ಹೆಚ್ಚು ವಿದ್ಯಾರ್ಥಿಗಳು ಶಾಲೆಯನ್ನೇ ಬಹಿಷ್ಕರಿಸಿದ್ದು, ಹೊಸಪೇಟೆ ಹುಬ್ಬಳ್ಳಿ ನಡುವೆ ಟೆಲಿಫೋನ್ ತಂತಿ ಸಂಪರ್ಕವನ್ನು ಕಿತ್ತುಹಾಕಿದ್ದು, ಹೊಸಪೇಟೆ-ಬಳ್ಳಾರಿ ಮಾರ್ಗದಲ್ಲಿ ಮೂರು ಸೇತುವೆಗಳನ್ನು ಮುರಿದು ಹಾಕಲಾಯಿತು. ಮತ್ತು ಸೇತುವೆ ಗೋಡೆಗಳನ್ನು ಉರುಳಿಸಲಾಯಿತು. ಸರ್ಕಾರದ ಆಜ್ಞೆಗಳನ್ನು ಸರ್ಕಾರಿ ಅಧಿಕಾರಿಗಳು ಪಾಲಿಸಬಾರ ದೆಂದು ಕರೆನೀಡಿದ್ದ 'ಹರಿಜನ' ಪತ್ರಿಕೆಯ ಪತ್ರಗಳನ್ನು ಸರ್ಕಾರಿ ಅಧಿಕಾರಿಗಳಿಗೆ ಹಂಚಲಾಯಿತು. ಕಾಂಗ್ರೇಸ್ ವಾರ್ತಾಪತ್ರವನ್ನು ಹಂಚಲಾಗಿತ್ತು. ಕರನಿರಾಕರಣೆಯ ಘೋಷಣೆ ಕರಪತ್ರಗಳನ್ನು ಹಂಚಲಾಗಿತ್ತು. ಮುಂತಾದ ಪ್ರಮುಖ ಘಟನೆಗಳು ಮರೆಯಲಾರದ ಘಟನೆಗಳಾಗಿವೆ.

ಈ ಚಳುವಳಿಗಳಲ್ಲಿ ಭಾಗವಹಿಸಿದ ಸತ್ಯಾಗ್ರಹಿಗಳಿಗೆ ಆಶ್ರಯ ನೀಡಲು ಹಲವಾರು ನಾಯಕರು ತಮ್ಮ ಮನೆಗಳನ್ನೇ ನೀಡಿರುವರು. ಅವರಲ್ಲಿ ಬೆಲ್ಲದ ಚನ್ನಪ್ಪರವರ ದಲ್ಲಾಳಿ ಅಂಗಡಿಯ ಅಂಥಹ ಒಂದು ಪ್ರಮುಖ ಆಶ್ರಮವಾಗಿತ್ತು. ಹೊಸಪೇಟೆಯ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಮಾತನಾಡುವಾಗ ಬೆಲ್ಲದ ಚೆನ್ನಪ್ಪರವರ ಬಗ್ಗೆ ತಿಳಿದುಕೊಳ್ಳುವುದು ಒಳ್ಳೆಯದು. ಗಜೇಂದ್ರಗಡದವರಾದ ಬೆಲ್ಲದ ಚೆನ್ನಪ್ಪರವರು ಒಬ್ಬ ವ್ಯಾಪಾರಿಯಾಗಿದ್ದರು. ಬೆಲ್ಲದ ವ್ಯಾಪಾರದಲ್ಲಿ ಖ್ಯಾತಿಹೊಂದಿದ್ದರು. ಇವರು ತ್ರಿಪುರಾದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ್ದರು. ಇವರೊಂದಿಗೆ ಪಿ.ಗುರುನಾಥ ಶೆಟ್ಟಿಯವರು ಭಾಗವಹಿಸಿದ್ದರು. ಇವರು ಮಹಾತ್ಮ ಗಾಂಧೀಜಿಯವರ ಕರೆಯಂತೆ ಹೊಸಪೇಟೆ ತಾಲೂಕಿನ ಇತರರೊಂದಿಗೆ ಸೇರಿ ಹಲವಾರು ಚಳುವಳಿಗಳ ಮುಖಂಡತ್ವವಹಿಸಿ ಚಳುವಳಿಗಳನ್ನು ಯಶಸ್ವಿ ಗೊಳಿಸಿದ್ದರು. ಹಲವು ಬಾರಿ ಬಂಧನಕ್ಕೊಳಗಾಗಿ ಜೈಲು ಶಿಕ್ಷೆಯನ್ನು ಅನುಭವಿಸಿದ್ದಾರೆ.

## ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರು

ಹೊಸಪೇಟೆ ತಾಲೂಕಿನಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರು ಸಹಾ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಭಾಗವಹಿಸಿದ್ದಾರೆ. ತಮ್ಮ ಗಂಡಂದಿರು ಬಂಧನಕ್ಕೊಳಗಾದಾಗ ಇಡೀ ಕುಟುಂಬದ ಎಲ್ಲಾ ಜವಾಬ್ದಾರಿಯನ್ನು ಮಹಿಳೆಯರೇ ವಹಿಸಿಕೊಂಡು ನಿಬಾಯಿಸಿದ್ದಾರೆ. ಬಳ್ಳಾರಿ ಜಿಲ್ಲೆಯ ,ಮಹಿಳಾ ಹೋರಾಟಗಾರರ ಪೈಕಿ ಶ್ರೀಮತಿ ಜಯ ಲಕ್ಷ್ಮೀ ಬಾಯಿಯವರು ಪ್ರಮುಖರು. ಇವರು ೧೯೩೧ ರಲ್ಲಿ ಹೊಸಪೇಟೆಯಲ್ಲಿ ನಡೆದ ಪ್ರಭಾತಪೇರಿಯಲ್ಲಿ ಇತರ ಮಹಿಳೆಯರೊಂದಿಗೆ ಬಂಧನಕ್ಕೊಳಗಾದರು. ಹೊಸಪೇಟೆಯಲ್ಲಿ ನಡೆದ ಪಿಕೆಟಿಂಗ್‌ನಲ್ಲಿ ಮಹಿಳೆಯರು ಭಾಗವಹಿಸಿರುವುದನ್ನು ಬಿ.ವಿ. ಶೇಷಗಿರಿರಾವ್ ರವರು ನೆನಪಿಸಿಕೊಳ್ಳುತ್ತಾರೆ. (ಸೂರ್ಯನಾಥ ಕಾಮತ್ ೧೯೭೪ ಸಂ.೧) ಹೊಸಪೇಟೆಯಲ್ಲಿ ನಡೆಯುತ್ತಿದ್ದ ಪ್ರಭಾತ್ ಪೇರಿಯಲ್ಲಿ ಮತ್ತಿಹಳ್ಳಿ ರಾಘವೇಂದ್ರರಾಯರ ಪತ್ನಿ ಸುಂದರಮ್ಮ ಹಾಗೂ ಮಗಳು ವನಜಾ ಬಾಯಿ ತಪ್ಪದೇ ದಿನವೂ ಭಾಗವಹಿಸುತ್ತಿದ್ದರು ಎಂದು ಮತ್ತಿಹಳ್ಳಿನಾಗರಾಜ್‌ರವರು ಹೇಳುತ್ತಾರೆ. ಮತ್ತಿಹಳ್ಳಿ ಸುಂದರಮ್ಮರವರು ಖಾದಿದಾರಿಗಳಾಗಿದ್ದರು ಮತ್ತು ೧೯೩೮ ರಲ್ಲಿ ಹೊಸಪೇಟೆ ನಗರ ಸಭೆಗೆ ಕಾಂಗ್ರೆಸ್ ಸದಸ್ಯರಾಗಿ ಆರಿಸಿ ಬಂದಿದ್ದರು.

ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ ತಾಲ್ಲೂಕಿನಲ್ಲಿ ಸೀಮಿತ ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಕಾಣಿಕೆ ಸಲ್ಲಿಸಿದ್ದಾರೆ. ಅನೇಕ ಮಹಿಳೆಯರು ತಮ್ಮ ಗಂಡಂದಿರು ಸ್ವಾತಂತ್ರ್ಯ ಹೋರಾಟ ದಲ್ಲಿ ಭಾಗವಹಿಸುವಂತೆ ಪ್ರೋತ್ಸಾಹ ನೀಡಿದ್ದಾರೆ. ಸಂಪ್ರದಾಯ, ಮಡಿ ಮೈಲಿಗೆಗಳ ರೂಪದಲ್ಲಿ ಸಮಾಜವು ಒದ್ದಾಡುತ್ತಿದ್ದಾಗ ಹೊಸಪೇಟೆಯ ಕೆಲವರಾದರೂ ಹೆಣ್ಣುಮಕ್ಕಳು ಧೈರ್ಯದಿಂದ ಸ್ವಾತಂತ್ರ್ಯ ಚಳುಚಳಿಯಲ್ಲಿ ಭಾಗವಹಿಸಿದ್ದಾರೆ. ಇವರ ಮೇಲೆ ಪ್ರಭಾವ ಬೀರಿದವರೆಂದರೆ ಶ್ರೀಮತಿ ರತ್ನಬಾಯಿ, ಶ್ರೀಮತಿ ಕೋಗಳಿ ರುದ್ರಮ್ಮ, ಡಾ॥ ಲಕ್ಷ್ಮಿಬಾಯಿ ಇವರೆಲ್ಲರದೂ ಆ ಕಾಲಕ್ಕೆ ವಿಧವಾ ಪುನರ್ವಿವಾಹವಾಗಿದ್ದಿತು.

ಜಾಗತಿಕ ಮಟ್ಟದಲ್ಲಿ ೧೯೪೫ ರ ಕೊನೆಯ ಹೊತ್ತಿಗೆ ಯುದ್ಧ ಕೊನೆಗೊಂಡಿತು. ಯುದ್ಧದಿಂದಾಗಿ ಬ್ರಿಟೀಷ್ ವಸಾಹತುಶಾಯಿ ಮುಖ್ಯವಾಗಿ ಭಾರತವು ಬಹಳ ಹಾನಿ ಅನುಭವಿಸಿತು. ಜಾಗತಿಕ ಮಟ್ಟದಲ್ಲಿ ತನ್ನ ಘನತೆಯನ್ನು ಉಳಿಸಿಕೊಳ್ಳಲು ಭಾರತದ ಸ್ವಾತಂತ್ರ್ಯ ಸಮಸ್ಯೆನ್ನು ಹೇಗಾದರೂ ಮಾಡಿ ಬಗೆಹರಿಸುವುದು ಅನಿವಾರ್ಯವಾಯಿತು. ಕಾಂಗ್ರೆಸ್ ಮತ್ತು ಇತರೆ ಪಕ್ಷಗಳ ಮೇಲೆ ವಿಧಿಸಿದ್ದ ನಿಷೇಧವನ್ನು ತೆಗೆದುಹಾಕಿತು. ೧೯೪೨ ರ ಬ್ರಿಟೀಷರೆ ಭಾರತ ಬಿಟ್ಟು ತೊಲಗಿರಿ ಚಳುವಳಿಯಲ್ಲಿ ಭಾಗವಹಿಸಿ ಬಂಧನಕೊಳ್ಳಗಾಗಿದ್ದ ನಾಯಕರೆಲ್ಲರನ್ನು ಬಿಡುಗಡೆ ಮಾಡಿತು. ಅನೇಕ ಸಮಾಲೋಚನೆಗಳು, ಸಂಧಾನಗಳು, ಸೂತ್ರಗಳು ನಡೆದು ಕೊನೆಗೆ ೧೯೪೭ ಆಗಸ್ಟ್ ೧೫ ರಂದು ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತವಾಯಿತು. ಕೆಂಪು ಕೋಟೆಯ ಮೇಲೆ ಹಾರಾಡುತ್ತಿದ್ದ ಯೂನಿಯನ್ ಜಾಕ್‌ಬಾವುಟ ಕೆಳಗಿಳಿಯಿತು. ಇಡೀ ಪ್ರಪಂಚ ನಿದ್ದೆಯಲ್ಲಿ ಮುಳುಗಿರುವಾಗ ಭಾರತ ಎಚ್ಚರಗೊಳ್ಳುತ್ತಿದೆ ಎಂಬ ಸಂದೇಶದೊಂದಿಗೆ ಜವಾಹರಲಾಲ್ ನೆಹರೂರವರು ಕೆಂಪು ಕೋಟೆಯ ಮೇಲೆ ತ್ರಿವರ್ಣ ಧ್ವಜವನ್ನು ಹಾರಿಸಿದರು.

## ರಜಾಕಾರರ ವಿರುದ್ಧದ ಚಳುವಳಿ

ಸುಮಾರು ೫೦೦ ರಿಂದ ೬೦೦ ರಷ್ಟಿದ್ದ ದೇಸಿಯ ರಾಜಸಂಸ್ಥಾನಗಳನ್ನು ಒಂದು ಗೂಡಿಸುವುದು. ಗಣರಾಜ್ಯದೊಳಗೆ ಸೇರಿಸುವುದು. ಸಾಮಾನ್ಯವಾದ ವಿಷಯವಾಗಿರಲಿಲ್ಲ. ಹೈದ್ರಾಬಾದಿನ ನಿಜಾಮನು ತನ್ನ ಸಂಸ್ಥಾನವನ್ನು ಭಾರತದ ಗಣರಾಜ್ಯದೊಳಗೆ ವಿಲೀನಗೊಳಿಸಲು ಸಿದ್ಧನಿರಲಿಲ್ಲ. ನಿಜಾಮನ ವಿರುದ್ಧ, ಅವನ ರಾಜಾಕಾರರ ವಿರುದ್ಧದ ಹೋರಾಟ 'ವಿಮೋಚನಾ ಚಳುವಳಿ ಎಂದೇ ಪ್ರಖ್ಯಾತಿ ಪಡೆದಿದೆ.' ಹೊಸಪೇಟೆ ಮತ್ತು ಸಿರುಗುಪ್ಪ ತಾಲೂಕುಗಳ ಗಡಿಗುಂಟ ಸುಮಾರು ೩೨೦ ಕಿ.ಮೀ ಉದ್ದ ನದಿ ಹರಿಯುತ್ತದೆ. ನದಿಯ ಬಲದಂತೆ ಬಳ್ಳಾರಿ ಜಿಲ್ಲೆಯ ಗಡಿಯಾಗಿದ್ದು, ಇದು ಹೈದ್ರಾಬಾದ್ ನಿಜಾಮನ ಅಧೀನದಲ್ಲಿತ್ತು. ಭಾರತಕ್ಕೆ ಸ್ವಾತಂತ್ರ್ಯ ಬಂದರೂ ನಿಜಾಮನು ತಾನೇ ಸ್ವತಂತ್ರ್ಯ ರಾಜ್ಯವನ್ನು ಕಟ್ಟಲು ಹುನ್ನಾರ ನಡೆಸಿದನು. ಇದಕ್ಕಾಗಿ ಧರ್ಮಾಂಧರಾದ ಮುಸ್ಲಿಂ ಅರೆ ಸೈನಿಕ ಪಡೆಯ ಅನುಯಾಯಿಗಳಾಗಿದ್ದ ರಜಾಕಾರರ ಸಂಸ್ಥಾನದಲ್ಲಿ ಪ್ರಜೆಗಳನ್ನು ಪೀಡಿಸುತ್ತಿದ್ದರು. ನಿಜಾಮರ ಕಾಲದಲ್ಲಿ ಹಿಂದೂಗಳೇ ಈ ಪ್ರದೇಶದಲ್ಲಿ ಅಧಿಕವಾಗಿದ್ದರೂ ಅಲ್ಪ ಸಂಖ್ಯಾತರಾಗಿದ್ದ ಮುಸ್ಲಿಂದಂಡು ನಿಜಾಮನ ಕೃಪೆಯಿಂದ ದಬ್ಬಾಳಿಕೆಯಲ್ಲಿ ತೊಡಗಿದ್ದರು. 'ರಜವಿ' ಎಂಬ ಕಟ್ಟ ಮುಸ್ಲಿಂನು 'ರಜಾಕಾರ' ಎಂಬ ದಂಡು ಕಟ್ಟಿದನು. ಹಿಂದೂಗಳ ಮೇಲೆ ದೌರ್ಜನ್ಯ, ದಬ್ಬಾಳಿಕೆ ಮತ್ತು ಅತ್ಯಾಚಾರ ನಡೆಸುತ್ತಿದ್ದರು. ಇವರ ಹಾವಳಿಗೆ ತುತ್ತಾದ ಹಿಂದೂಗಳು ಅನ್ಯಪ್ರಾಂತಗಳಿಗೆ ಓಡಿಬರುತ್ತಿದ್ದರು. ಈ ಸಮಯದಲ್ಲಿ ತುಂಗಾಭದ್ರಾ ಆಡಳಿತ ಕಟ್ಟಡದಲ್ಲಿ ನಿಜಾಮರು ಮದ್ದು, ಗುಂಡು ಸಂಗ್ರಹಿಸಿದ್ದಾರೆ ಎಂಬ ದೊಡ್ಡ ವದಂತಿ ಹರಡಿತ್ತು. ಭಾರತ ಸರಕಾರವು ಸಹಾ ಮೈಸೂರು ಸಂಸ್ಥಾನದಲ್ಲಿದ್ದ ಸೈನ್ಯ ಪಡೆಯನ್ನು ಹೊಸಪೇಟೆಗೆ ತಂದಿಟ್ಟಿದ್ದರು. ನಿಜಾಮರ ಸೈನ್ಯ ಮತ್ತು ರಜಾಕಾರರು ಮುನಿರಾಬಾದ್ ಮೂಲಕ ರೈಲು ಸೇತುವೆ ಮೇಲಿನಿಂದ ಬಂದು ಹೊಸಪೇಟೆಯನ್ನು ಆಕ್ರಮಿಸುತ್ತಾರೆ ಎಂಬ ವದಂತಿಯೂ ಹರಡಿತ್ತು.

ಹೀಗೇ ನಾನಾ ಬಗೆಯ ಊಹಾಪೋಹಾಗಳು, ವದಂತಿ, ಸುದ್ದಿಗಳು ಜನರಿಂದ ಜನರಿಗೆ ಹರಡುತ್ತಿದ್ದವು. ಹೊಸಪೇಟೆ ಮತ್ತು ಚಿತ್ತವಾಡ್ಗಿಯಲ್ಲಿ ಮುಸ್ಲಿಂ ಸಂಖ್ಯೆ ಹೆಚ್ಚಿದ್ದು, ಅವರಲ್ಲಿ ವಿದ್ಯಾವಂತ ಯುವಕರು, ಗುಪ್ತವಾಗಿ ನಿಜಾಮರಿಗೆ ಬೆಂಬಲ ನೀಡುತ್ತಿದ್ದಾರೆ ಎಂಬ ಸುದ್ದಿಯೂ ಇತ್ತು. ಇದನ್ನು ತಿಳಿದ ಬಳ್ಳಾರಿ ಜಿಲ್ಲಾ ಕಲೆಕ್ಟರರು ಹೊಸಪೇಟೆಯಲ್ಲಿ ಕ್ಯಾಂಪ್ ಮಾಡಿ ಆಯುಧದ ಲೈಸೆನ್ಸ್ ಪಡೆದಿದ್ದ ಮುಸ್ಲಿಂರಿಂದ ಆಯುಧಗಳನ್ನು ವಶಕ್ಕೆ ತೆಗೆದುಕೊಂಡಿದ್ದರು.

ಕೊನೆಯ ಅಸ್ತವಾಗಿ ಭಾರತ ಸರಕಾರ ಪೋಲಿಸ್ ಕಾರ್ಯಾಚರಣೆಯನ್ನು ಸೆಪ್ಟೆಂಬರ್ ೧೩, ೧೯೪೮ ರಂದು ಘೋಷಿಸಿತು. ಮದ್ರಾಸ್ ಪ್ರಾಂತಕ್ಕೆ ಸೇರಿದ್ದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಭಾಗದಿಂದ ನಿಜಾಮನ ಸಂಸ್ಥಾನದ ಮುನಿರಾಬಾದಿನ ಮೇಲೆ ಆಕ್ರಮಣ ನಡೆಯಿತು. ಪ್ರಾರಂಭದಲ್ಲಿ ನಿಜಾಮನ ಸೈನಿಕರ ಪ್ರಾಬಲ್ಯ ಹೆಚ್ಚಾದರೂ ಕ್ರಮೇಣ ನಿಜಾಮನ ಸೈನಿಕರು ಶರಣಾದರು. ಈ ಕಾರ್ಯಚರಣೆಯಲ್ಲಿ ಭಾರತದ ಹತ್ತಾರು ಸೈನಿಕರು ಸಾವನ್ನಪ್ಪಿದರು. ಗಾಯಗೊಂಡ ಸೈನಿಕರನ್ನು ಹೊಸಪೇಟೆಯ ಸಾರ್ವಜನಿಕ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ಸೇರಿಸಲಾಗಿತ್ತು. ಆಕ್ರಮಣದ ಸಂದರ್ಭದಲ್ಲಿ ಸಾವನ್ನಪ್ಪಿದ ಸೈನಿಕರ ದೇಹಗಳನ್ನು ಹೊಸಪೇಟೆಗೆ ಹೊತ್ತು ತರಲಾಗಿತ್ತು. ಅಂತಿಮವಾಗಿ ಸೆಪ್ಟೆಂಬರ್ ೧೮, ೧೯೪೮ ರಲ್ಲಿ ಹೈದ್ರಾಬಾದ್ ಸಂಸ್ಥಾನವು ಭಾರತದ ಗಣರಾಜ್ಯದಲ್ಲಿ ವಿಲೀನವಾಯಿತು. ರಜಾಕಾರರ ವಿರುದ್ಧ ನಡೆದ ಈ ಕಾರ್ಯಚರಣೆ ಯಶಸ್ವಿಯಾಗಲು ಸ್ಥಳೀಯ ಜನತೆಯ ಬೆಂಬಲವೂ ಬಹುಮಟ್ಟಿಗೆ ಕಾರಣವೆಂದರೆ ತಪ್ಪಾಗಲಾರದು. ಭಾರತದ ಒಕ್ಕೂಟಕ್ಕೆ ಈ ಪ್ರದೇಶ ವಿಲೀನವಾದ ಮೇಲೆ ಪ್ರಜಾಪೀಡಕರಾಗಿದ್ದ ರಜಾಕಾರಕ ಹಾವಳಿ ನಿಂತಿತು. ಈ ಕಾರ್ಯಾಚರಣೆ ಸಂದರ್ಭದಲ್ಲಿ ಹೊಸಪೇಟೆ, ಚಿತ್ತವಾಡ್ಗಿಯ ಮುಸ್ಲಿಂರು ಊರು ಬಿಟ್ಟು ಓಡಿ ಹೋಗಿದ್ದರು. ಆದರೆ ಹಿಂದೂಗಳಾಗಲಿ, ಪೋಲಿಸ್‌ರಾಗಲಿ, ಸೈನಿಕರಾಗಲಿ ಸ್ಥಳೀಯ ಮುಸ್ಲಿಂ ರ ಮೇಲೆ ಯಾವುದೇ ರೀತಿಯ ದಾಳಿ ಮಾಡಲಿಲ್ಲ. ಮತ್ತು ಯಾವುದೇ ರೀತಿಯ ದೌರ್ಜನ್ಯ ಎಸಗಲಿಲ್ಲವೆಂಬುದನ್ನು ನೋಡಿದರೆ ಅಂದು ಈ ಪ್ರದೇಶದಲ್ಲಿ ಕೋಮು ಸೌಹಾರ್ದತೆ ತಿಳಿಯುತ್ತದೆ.

ಭಾರತದಿಂದ ಬ್ರಿಟಿಷರನ್ನು ಹೊರಗಡೆ ಓಡಿಸುವುದಷ್ಟೇ ಸ್ವಾತಂತ್ರ್ಯ ಹೋರಾಟದ ಉದ್ದೇಶವಾಗಿರಲಿಲ್ಲ. ಮಹಾತ್ಮಗಾಂಧೀಜಿಯವರು ಇದನ್ನು ಮೊದಲೇ ಮನಗಂಡಿದ್ದರು. ವಿದೇಶಿ ಆಳ್ವಿಕೆಯ ವಿರುದ್ದ ನಡೆದ ಚಳುವಳಿಯ ಜೊತೆಗೆ ದೇಶವನ್ನು ಕಾಡುತ್ತಿದ್ದ ಅನೇಕ ಸಾಮಾಜಿಕ. ರಾಜಕೀಯ ಸಮಸ್ಯೆಗಳ ವಿರುದ್ಧವೂ ಹೋರಾಡುವುದು ಗಾಂಧೀಜಿಯವರಿಗೆ ಪ್ರಮುಖವಾಗಿತ್ತು. ಅಸ್ಪೃಶ್ಯತಾ ನಿವಾರಣೆ, ಹರಿಜನ ದೇವಾಲಯ ಪ್ರವೇಶ, ಸಾರ್ವಜನಿಕರ ಕೆರೆ - ಬಾವಿಗಳಲ್ಲಿ ನೀರು ಬಳಸಲು ಹರಿಜನರಿಗೆ ಅವಕಾಶ ಮುಂತಾದವು ಗಾಂಧೀಜಿಯವರದೆ ಸ್ವಾತಂತ್ರ್ಯ ಹೋರಾಟದಷ್ಟೇ ಪ್ರಮುಖವಾಗಿತ್ತು. ಮಧ್ಯಪಾನ ನಿಷೇಧ, ಖಾದಿ ಉತ್ಪಾದನೆ, ಖದ್ದರ್ ಧರಿಸುವುದು ಮುಂತಾದವು. ಚರಕವು ಭಾರತದಲ್ಲಿ ಸ್ವಾತಂತ್ರ್ಯ ಹೋರಾಟದ ಸಂಕೇತವಾಯಿತು. ಗಾಂಧೀಜಿಯವರಿಗೆ ಒಂದು ಕಡೆ ಸ್ವಾತಂತ್ರ್ಯ ಹೋರಾಟ ಮತ್ತೊಂದು ಕಡೆ ಸಾಮಾಜಿಕ ಸಮಸ್ಯೆಗಳು ಒಂದೇ ನಾಣ್ಯದ ಎರಡು ಮುಖಗಳಾಗಿದ್ದವು.

ಸಮಾಜದಲ್ಲಿ ದೀನದಲಿತರು ಮುಂತಾದ ಕೆಳವರ್ಗ ಕೆಳಜಾತಿ ಜನರನ್ನು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸುವುದಕ್ಕೆ ರಚನಾತ್ಮಕ ಕಾರ್ಯಕ್ರಮಗಳನ್ನು ಒಂದು ಸಾಧನವಾಗಿ ಮಾಡಿಕೊಂಡರು. ತಮ್ಮನ್ನು ದೀನದಲಿತರು, ದುರ್ಬಲರು, ಮುಸ್ಲಿಂರು, ಮಹಿಳೆಯರು ಮುಂತಾದವರ ಜೊತೆ ಸಮೀಕರಿಸಿಕೊಂಡರು. ಗಾಂಧೀಜಿಯವರು ಬಡವರ, ದುರ್ಬಲರ, ಹರಿಜನರ ಸಂಕೇತವಾಗಿದ್ದರು.

ಗಾಂಧೀಜಿಯವರು ಕನಸಿದ್ದ ರಚನಾತ್ಮಕ ಕಾರ್ಯಕ್ರಮ

೧. ಜಾತಿ ಜಾತಿಗಳ ನಡುವೆ ಸಾಮರಸ್ಯ
೨. ಅಸ್ಪೃಶ್ಯತಾ ನಿವಾರಣೆ
೩. ಮಧ್ಯಪಾನ ನಿಷೇಧ
೪. ಖಾದಿ ಪ್ರಸಾರ
೫. ಗ್ರಾಮೋದ್ಯೋಗ
೬. ಮೂಲ ಶಿಕ್ಷಣ
೭. ಗ್ರಾಮೋದ್ಧಾರ
೮. ಪ್ರೌಢ ಶಿಕ್ಷಣ
೯. ಸ್ತ್ರೀಯರ ಉನ್ನತಿ
೧೦. ಆರೋಗ್ಯ ಮತ್ತು ಸ್ವಚ್ಛತೆ
೧೧. ರಾಜ್ಯಭಾಷ ಪ್ರಸಾರ
೧೨. ಪ್ರಾಂತೀಯ ಭಾಷಾ ಪ್ರೇಮ
೧೩. ಆರ್ಥಿಕ ಸಮಾನತೆ
೧೪. ರೈತರು, ಕಾರ್ಮಿಕರು ಮತ್ತು ವಿದ್ಯಾರ್ಥಿಗಳ ಜಾಗೃತಿ
೧೫. ಆದಿವಾಸಿಗಳ ಸೇವೆ

ಮೇಲಿನ ಗಾಂಧಿ ಕಂಡ ಕನಸುಗಳು ಸ್ವಾತಂತ್ರ್ಯ ಭಾರತದ ಸರಕಾರದಿಂದ ಆಗಬೇಕಾದ ಆದ್ಯತೆಗಳಾಗಬೇಕಾಗಿತ್ತು. ಸ್ವಾತಂತ್ರ್ಯ ಪಡೆದ ಒಂದು ವರ್ಷದಲ್ಲಿಯೇ ಗಾಂಧೀಜಿಯವರನ್ನು ಕಳೆದುಕೊಂಡ ನಾವುಗಳು ಅವರನ್ನು ಕೇವಲ ಉತ್ಸವ ಮೂರ್ತಿಗಳಂತೆ ಭಾವಿಸಿದ್ದೇವೆ. ಸ್ವಾತಂತ್ರ್ಯಕ್ಕೆ ಬಂದು 60 ವರ್ಷ ಕಳೆದಿದ್ದರೂ ಇಂದಿಗೂ ದೀನದಲಿತರ ಉದ್ಧಾರವಾಗಿಲ್ಲ, ಅಸ್ಪೃಶ್ಯತೆ ನಿವಾರಣೆ ಆಗಿಲ್ಲ. ರೈತರ ಬವಣೆ ನಿಂತಿಲ್ಲ. ಮಹಿಳೆಯರ ಮೇಲಿನ ಅತ್ಯಾಚಾರ ನಿಂತಿಲ್ಲ, ಆರ್ಥಿಕ ಸಮಾನತೆ ಸಾಧ್ಯವಾಗಿಲ್ಲ. ಸಂಪೂರ್ಣ ಸಾಕ್ಷರತೆ ಸಾಧಿಸಲು ಸಾಧ್ಯವಾಗಿಲ್ಲ. ಈ ಎಲ್ಲಾ ಜ್ವಲಂತ ಸಮಸ್ಯೆಗಳು ಇಂದಿಗೂ ಉಳಿದುಕೊಂಡು ಬರಲು ಆಳುವ ಪರಕಾರಗಳ ಸ್ವಜನ ಪಕ್ಷಪಾತ, ಜಾತೀಯತೆ, ಕೋಮುವಾದ, ವ್ಯಾಪಕ ಭ್ರಷ್ಟಾಚಾರಗಳು ಬಹುಮಟ್ಟಿಗೆ ಕಾರಣವಾಗಿವೆ. ದೀನ ದಲಿತರ, ರೈತರ, ಕಾರ್ಮಿಕರ, ವಿದ್ಯಾರ್ಥಿಗಳು, ಯುವಜನರಲ್ಲಿ ಜಾಗೃತಿ ಮೂಡಬೇಕಾಗಿದೆ. ಸಮಸ್ಯೆಗಳ ವಿರುದ್ಧ ಜನಾಂದೋಲನ ರೂಪಿಸಬೇಕಾಗಿದೆ.

ಈ ಎಲ್ಲಾ ಸಮಸ್ಯೆಗಳ ನಿವಾರಣೆಗೆ ನಮ್ಮಲ್ಲಿರುವ ಸಾಂಘಿಕ ನೆಲೆಗಳನ್ನು ಗುರುತಿಸಿಕೊಳ್ಳಬೇಕಾಗಿದೆ. ಆ ನೆಲೆಗಳು ಯಾವುವು. ಸಾಂಘಿಕ ಪ್ರಯತ್ನಗಳಾಗಿವೆ. ಸಾಂಘಿಕ ಪ್ರಯತ್ನಗಳಿಗೆ ಇರುವ ಅಡ್ಡಿ ಆತಂಕಗಳೇನು ? ಅಲಕ್ಷಿತ ವಲಯಗಳಾವುವು. ನೆಲೆಗಳಿಂದ ಆಗಬಹುದಾದ ಚಳುವಳಿಗಳ ಬಗ್ಗೆ ನನ್ನ ಅಧ್ಯಯನ ಹೊಸಪೇಟೆ ತಾಲೂಕನ್ನು ಅನುಲಕ್ಷಿಸಿ ಬೆಳಕು ಚೆಲ್ಲುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಮೂರನೇ ಒಂದು ಭಾಗ ನೇರವಾಗಿ ಬ್ರಿಟೀಷರ ಆಡಳಿತಕ್ಕೂ, ಮೂರನೇ ಎರಡು ಭಾಗ ಸಂಸ್ಥಾನಿಕರ ಆಡಳಿತಕ್ಕೂ ಒಳಪಟ್ಟಿತ್ತು. ದೇಶದ ೫೫೬ ಸಂಸ್ಥಾನಗಳ ಮೇಲೆ ಬ್ರಿಟೀಷರು ರಾಜಕೀಯ ನಿಯಂತ್ರಣವನ್ನು ಸಾಧಿಸಿದ್ದರು. ಈ ಎಲ್ಲಾ ಸಂಸ್ಥಾನಗಳಲ್ಲಿ ವಿಶಾಲವಾದ ಮತ್ತು ಶ್ರೀಮಂತಿಕೆಯಿಂದ ಕೂಡಿದ ಸಂಸ್ಥಾನವೆಂದರೆ ಹೈದರಾಬಾದ್ ಬ್ರಿಟೀಷರು ಹೈದರಾಬಾದ್ ನಿಜಾಮರಿಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಅಧಿಕಾರಗಳನ್ನು ದಯಪಾಲಿಸಿದ್ದರು. ಪ್ರತ್ಯೇಕವಾದ ಸೈನ್ಯ, ನಾಣ್ಯ, ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ ಮತ್ತು ಶಿಕ್ಷಣ ಸೌಲಭ್ಯಗಳನ್ನು ಹೊಂದಿ ನಿಜಾಮನು ಸ್ವತಂತ್ರ್ಯನಾಗಿದ್ದನು. ಬ್ರಿಟೀಷರು ಭಾರತ ಬಿಟ್ಟು ಹೋಗುವಾಗ ಕೊಟ್ಟ ಆಯ್ಕೆಯ ಅವಕಾಶವನ್ನು ಅತ್ಯಾಸೆಯಿಂದ ಉಪಯೋಗಿಸಿಕೊಳ್ಳಲು ನಿರ್ಧರಿಸಿದ್ದನು. ೧೯೪೭ ರ ಸ್ವಾತಂತ್ರ್ಯ ಕಾಯ್ದೆಯನ್ವಯ, ಈ ಆಯ್ಕೆಯ ಅವಕಾಶಗಳು ಹೀಗಿದ್ದವು.

೧. ಸಂಸ್ಥಾನಿಕರು, ಸ್ವತಂತ್ರ್ಯ ಭಾರತದಲ್ಲಿ ವಿಲೀನವಾಗಬಹುದು.

೨. ತಾವೇ ಸ್ವಾತಂತ್ರ್ಯವನ್ನು ಘೋಷಿಸಿಕೊಳ್ಳಬಹುದು.

೩. ಪಾಕಿಸ್ತಾನದೊಂದಿಗೆ ವಿಲೀನವಾಗಬಹುದು.

ಜೂನ್ ೨೬, ೧೯೪೭ ರಂದು ನಿಜಾಮನಾದ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರ್ ಫರಮಾನ್ ಹೊರಡಿಸಿ, ತಾನು ಹೈದರಾಬಾದ್ ರಾಜ್ಯದ ಸ್ವತಂತ್ರ್ಯ ದೊರೆಯೆಂದು ಘೋಷಿಸಿಕೊಂಡು ಭಾರತದ ಒಕ್ಕೂಟವನ್ನು ಸೇರಲು, ನಿಜಾಮನ ಈ ಕೃತ್ಯ ರಾಷ್ಟ್ರದ ಸಮಗ್ರತೆಗೆ ಮತ್ತು ಹೈದರಾಬಾದ್ ರಾಜ್ಯದ ಬಹು ಸಂಖ್ಯಾತ ಜನರ ಇಚ್ಛಾಶಕ್ತಿಗೆ ದೊಡ್ಡ ಸವಾಲಾಯಿತು. ನಿಜಾಮನ ಸ್ವತಂತ್ರ್ಯ ಅರಸನಾಗಿಯೇ ಮುಂದುವರೆಯುವ ಮೇರೆ ಮೀರಿದ ಮಹತ್ವಕಾಂಕ್ಷೆಗೆ ಕಾಶಿಂ ರಜವಿ ಮತ್ತು ಅವನ ಅನುಯಾಯಿಗಳಾಗಿದ್ದ ರಜಾಕಾರರ (ಸ್ವಯಂ ಸೇವಕರು) ಹೊಸಪೇಟೆ ತಾಲೂಕಿನ ಹಲವು ಪ್ರದೇಶಗಳು ಸೇರಿದಂತೆ ಸಂಸ್ಥಾನದಲ್ಲಿ ಹಿಂದೆಂದೂ ಯಾರೂ ಕಂಡರಿಯದ, ಕೇಳರಿಯದ ಅನ್ಯಾಯ, ಅತ್ಯಾಚಾರ, ಹಿಂಸಾಚಾರ ಆರಂಭಗೊಂಡಿದು, ಈ ರಜಾಕಾರರಿಂದ ಎಂದು ಹೇಳಬಹುದು. ಈ ಪ್ರದೇಶವನ್ನು ಇಸ್ಲಾಂ ರಾಜ್ಯವನ್ನಾಗಿ ಪರಿವರ್ತಿಸುವ ಭ್ರಮಾಲೋಕದಲ್ಲಿದ್ದ ಈ ರಜಾಕಾರರ ವರ್ತನೆ ಅಸಹನೀಯವಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕೇಂದ್ರಸರ್ಕಾರದ ನೂತನ ಗೃಹ ಮಂತ್ರಿಗಳಾಗಿದ್ದ, ಉಕ್ಕಿನಮನುಷ್ಯರೆಂದೇ ಖ್ಯಾತಿ ಪಡೆದಿರುವ ಸರ್ದಾರ್ ವಲ್ಲಭಬಾಯಿ ಪಟೇಲರು ಹೈದರಾಬಾದ್ ವಿಮೋಚನೆಗಾಗಿ ೧೯೪೮ ಸೆಪ್ಟೆಂಬರ್ ೯ ರಂದು ಸೈನಿಕ ಬಲವನ್ನು ಉಪಯೋಗಿಸಲು ನಿರ್ಧರಿಸಿದರು. ಇದು ಆಪರೇಷನ್ ಪೋಲೋ ಅಥವಾ ಪೋಲಿಸ್ ಕಾರ್ಯಾಚರಣೆ ಎಂದೇ ಪ್ರಸಿದ್ಧವಾಗಿದೆ. ಈ ಹೋರಾಟಕ್ಕೆ ಜನ 'ರಜಾಕಾರ ಚಳುವಳಿ ರಜಾಕಾರ ಸಪಾತಿಲುಚಾರಿ ಪೋಲಿಸ್ ಆ್ಯಕ್ಷನ್' ಎಂದೆಲ್ಲಾ ಕರೆಯುತ್ತಾರೆ.

ರಜಾಕಾರರು ಈ ಪ್ರದೇಶದ ತುಂಬೆಲ್ಲಾ ಅತ್ಯಾಚಾರ ಕೊಲೆ, ಸುಲಿಗೆ, ಭೀಕರ ಹಿಂಸೆ ದಿನನಿತ್ಯದ ಮಾತಾಯಿತು. ಈ ಸಂಸ್ಥಾನದ ವಿರುದ್ಧದ ಈ ಕಾರ್ಯಾಚರಣೆಯ ಯೋಜನೆಯನ್ನು ಸಂಸ್ಥಾನದಲ್ಲಿಯೇ ಇದ್ದು, ರಚಿಸದೇ ಸಂಸ್ಥಾನದ ಹೊರಗಡೆ ಬಳ್ಳಾರಿ ಜಿಲ್ಲೆಯ ಇತರೆ ಪ್ರದೇಶದಲ್ಲಿ ಅನೇಕ ಕಡೆ ಶಿಬಿರಗಳನ್ನು ನಡೆಸಿ ರೂಪರೇಷೆಗಳನ್ನು ಸಿದ್ಧಪಡಿಸಲಾಯಿತು. ಅಂಥದೊಂದು ಶಿಬಿರ ಕಂಪಲಿಯಲ್ಲಿ ಸೆಪ್ಟೆಂಬರ್ ೩ ರಂದು ನಡೆದಿರುವುದು ತಿಳಿದು ಬರುತ್ತದೆ. ಶಿಬಿರದ ನೇತೃತ್ವವನ್ನು ಅಸುಂಡಿ ತಿರುಮಲಾಚಾರ್ ರವರು ವಹಿಸಿದ್ದರೆಂದು ತಿಳಿಯುತ್ತದೆ. ಪ್ರತಿಯೊಂದು ಶಿಬಿರದಲ್ಲಿ ಒಬ್ಬ ಶಿಬಿರಾಪತಿ, ದಳನಾಯಕ, ಕೋಶಾಧಿಕಾರಿ, ಆಹಾರಾಧಿಪತಿಗಳು ಇರುತ್ತಿದ್ದರು. ಇವರೆಲ್ಲಾ ಭೂಗತ ಸೈನಿಕರಂತೆ ಕೆಲಸ ನಿರ್ವಹಿಸುತ್ತಿದ್ದರು. ರಾಜಾಕಾರರ ಹಾವಳಿಯಿಂದ ತತ್ತರಿಸುತ್ತಿದ್ದ ಜನತೆ ಊರುಗಳನ್ನು ತೊರೆದು ಬೇರೆ ಕಡೆಗೆ ಹೋಗುತ್ತಿದ್ದರು. ಇಲ್ಲಿಯ ಜನರಿಗೆ ರಜಾಕಾರರ ಹಿಂಸಾಚಾರ ಕೆಟ್ಟಕನಸು. ಕನ್ನಡ ಮಾತಾಡುವ ಜನರಿಗೆ ಹೆಚ್ಚಿನ ಹಿಂಸೆ ಕೊಡುತ್ತಿದ್ದರು. ಶಿಕ್ಷಣ ಮಾಧ್ಯಮ ಮತ್ತು ಆಡಳಿತ ಭಾಷೆ ಉರ್ದು, ಕನ್ನಡ ಬರಹಗಾರರೇ ಅಂದಿನ ದಿನಗಳಲ್ಲಿ ಇಲ್ಲವೆಂದು ಹೇಳಿದರೆ ತಪ್ಪಾಗಲಾರದು. ಆದರೆ ಆಶುಕವಿತ್ವದ ಜನಪದ ಕವಿಗಳು ಹಾಡು ಕಟ್ಟಿ ರಜಾಕಾರರ ವಿರುದ್ದ ಜನ ಜಾಗೃತಿ ಮೂಡಿಸುತ್ತಿದ್ದರು. ಭೂಲಾಯಿ ಪದ, ಅಲಾಯಿ ಪದಗಳಲ್ಲಿ ಇದೆಲ್ಲಾ ದಾಖಲಾಗಿದೆ. ಭೂಲಾಯಿ ಪದದ ಕೆಲವು ಸಾಲುಗಳು ಇಂತಿವೆ.

ಗಾಂಧಿ ಟೋಪಿ ಇಟ್ಟದ್ದು ನೋಡಿ,
ರಜಾಕಾರ್ರು ಬಂದಾರ ಓಡಿ,
ಅವರೀಗ ಮಾಡುತಾರ ಹೊಡಿ ಬಡಿ
        ಕೋಲೆಣ್ಣ ಕೋಲೆ ಕೋಲು
ಮನಿ ಮಾಳಿಗಿ ಎಲ್ಲಾ ಕೆದರಿ
ಎಣ್ಣೆ ಹಾಕಿ ಹೆಚ್ಚಾರ ಬೆಂಕಿ
ಏಳು ಮಂದ್ಯಾಗ ಉಳಿದಿಲ್ಲ ಬಾಕಿ
        ಕೋಲೆಣ್ಣ ಕೋಲೆ ಕೋಲು

**ಕಾಸಿಂ ರಜವಿ :** ಹೈದ್ರಾಬಾದಿನ ದುರಂತ ಇತಹಾಸದಲ್ಲಿ ಕಾಸಿಂ ರಜವಿ ಒಬ್ಬ ಪ್ರಮುಖ ಖಳನಾಯಕ. ಮೋಡಿ ಹಾಕುವ ಮಾತುಗಾರನಾಗಿದ್ದ ರಜವಿ, ಅಲಿಗಡ ಮುಸ್ಲಿಂ ವಿಶ್ವ- ವಿದ್ಯಾಲಯದ ಕಾನೂನು ಪದವೀಧರ. ಲಾತೂರ್‌ನಲ್ಲಿ ವಕೀಲಿ ವೃತ್ತಿ ಕೈಗೊಂಡ ಇವನು, ಸ್ಥಳೀಯ ಇತ್ತೇಹಾದ್‌ನ ಮುಖಂಡನಾಗಿದ್ದ ಸ್ಥಳೀಯ ಸಲಹೆಗಾರನೂ ಭಯಂಕರವಾಗಿದ್ದ ಒಂದು ಗುಂಡಾ ಪಡೆಗೆ ಕಾಯ್ದೆ ಸಲಹೆಗಾರನೂ ಆಗಿದ್ದ. ಭಾರತದ ಒಕ್ಕೂಟದಿಂದ ಡೆಕ್ಕನೀ ಮುಸಲ್ಮಾನರ ವಿಮೋಚನೆಯ ಪವಿತ್ರ ಕಾರ್ಯಕ್ಕೆಂದೇ ದೇವರಿಂದ ನಿಯೋಜಿತನಾದ ವ್ಯಕ್ತಿತಾನೆಂದು ಒಂದು ವಿಚಿತ್ರ ಭ್ರಮೆಗೆ ಕಾಸಿಂ ರಜವಿ ಸ್ವತಃ ಒಳಗಾಗಿದ್ದ ಈ ವಿಮೋಚನೆ ಅವನ ಮೊದಲ ಹೆಜ್ಜೆಯಾಗಿದ್ದರೆ, ದೆಹಲಿಯ ಕೆಂಪು ಕೋಟೆಯ ಮೇಲೆ ಅಸಫಿಯಾ ರಾಜಮನೆತನದ ಬಾವುಟ ಹಾರಿಸುವುದು. ಎರಡನೆಯ ಹೆಜ್ಜೆಯಾಗಿತ್ತು. ೧೯೪೮ ಎಪ್ರಿಲ್ ೧೨ ರಂದು ಕಾಸಿಂ ರಜವಿಯು ''ಬಂಗಾಳಕೊಲ್ಲಿಯ ತೆರೆಗಳು ನಮ್ಮ ಸಾರ್ವಭೌಮರ ಪಾದಗಳನ್ನು ತೊಳೆಯುವ ದಿನಗಳು ದೂರವೇನಿಲ್ಲ'' ಎಂದು ಹೇಳಿದುದಾಗಿ ವರದಿಯಾಗಿದೆ.

ಇತ್ತೇಹಾದಿನ (ಸ್ವಯಂ ಸೇವಕರ ಮುಸ್ಲಿಂ ಮೂಲಭೂತ ಸಂಘಟನೆ) ನಾಯಕನಾಗಿ ಸಾರ್ವಜನಿಕ ಜೀವನಕ್ಕೆ ಕಾಲಿಟ್ಟ ರಜವಿ ಅಪಾರ ಪ್ರಭಾವ ಶಾಲಿಯಾದನು. ನಿಜಾಮನೂ ಕೂಡ ಇವನಿಂದ ಎಷ್ಟು ಪ್ರಭಾವಿತನಾದನೆಂದರೆ, ಅಸಫಿಯಾ ಪತ್ತೆ ಸ್ಥಾಪನೆಯಾಗುವ ದಿನ ದೂರವಿಲ್ಲೆಂದು ಭಾವಿಸಿದನು. ಮುಸಲ್ಮಾನರ ಆಪದ್ಬಾಂದವನಾದ ರಜವಿ ಇತ್ತ ಹೈದ್ರಾಬಾದ್ ಪ್ರಾಂತದ ಹಿಂದೂಗಳ ಪಾಲಿಗೆ ಧೂಂಕೇತುವಾದನು. ದಕ್ಷಿಣದಲ್ಲಿ ಮುಸ್ಲಿಂರ ಪರಮಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ಕೊನೆಯವರೆಗೂ ಹೋರಾಡುತ್ತೇನೆಂದು ಅಲ್ಲಾಹನ ಹೆಸರಿನಲ್ಲಿ ಪ್ರಮಾಣ ಮಾಡುತ್ತೇನೆ ಎಂದು ಹೇಳಿದ್ದನು. ಆಗಿನ ಹೈದ್ರಾಬಾದ್ ನಿಜಾಮನ ಆಡಳಿತದ ಶಕ್ತಿಶಾಲಿ ವ್ಯಕ್ತಿಯೆಂದರೆ ಕಾಶಿಂ ರಜವಿ ಎಂದು ಹೇಳಿದರೆ ತಪ್ಪಾಗದು. ಈ ಅಂಶವನ್ನು ಹೈದ್ರಾಬಾದ್ ನಿಜಾಮನ ಸೈನ್ಯದ ಮೇಜರ್ ಜನರಲ್‌ನಾಗಿದ್ದ, ಸೈಯದ್ ಅಹಮದ್ ಇಲ್ ಇಡ್ರೋಸ್ ಒಪ್ಪಿದ್ದಾನೆ. ತನ್ನ ಗ್ರಂಥದಲ್ಲಿ ಹೀಗೆ ದಾಖಲಿಸಿದ್ದಾನೆ.

"The Razakars had opening declared that they will dispore of the Nizam if he did not comply with their wishes and this made his exalted highness more afraid and he accepted the Razvi Government, the head of which was haiq At"

ಸಂಸ್ಥಾನದ ಆಡಳಿತದಲ್ಲಿ ಕಾಶಿಂ ರಜವಿ, ಈತನ ಆಪ್ತನಾಗಿದ್ದ ಮೀರ್ ಲಾಯಕ್ ಅಲಿ ಮತ್ತು ನವಾಬ್ ಮೋಯಿನ್ ನವಾಬ್ ಜಂಗ್ ಈ 'ತ್ರಿಮೂರ್ತಿ' ಗಳದೇ ಕಾರುಬಾರು. ಇವರು ಎಲ್ಲಾ ಪಕ್ಷಗಳ ಮುಖಂಡರನ್ನು ಬಂಧಿಸಿ, ಕಾರಾಗೃಹದಲ್ಲಿ ಇಟ್ಟಿದ್ದರು, ಸಂಸ್ಥಾನದಲ್ಲಿ ಗಾಂಧೀಟೊಪ್ಪಿಗೆ, ವಂದೇ ಮಾತರಂಗೀತೆ, ಭಾರತದ ರಾಷ್ಟ್ರಧ್ವಜ, ರಾಷ್ಟ್ರನಾಯಕರ ಭಾವಚಿತ್ರಗಳು ನಿಷೇಧಕ್ಕೊಳಗಾದವು. ಈ ಎಲ್ಲಾ ಬೆಳವಣಿಕಗೆಗಳಿಂದ ಉತ್ತೇಜಿತನಾದ ಕಾಶಿಂ ರಜವಿ ಭಾರತದ ಒಕ್ಕೂಟಕ್ಕೇನೇ ಎಚ್ಚರ ನೀಡುವ ಮಟ್ಟಕ್ಕೂ ಹೋದನು.

''ಭಾರತ ಒಕ್ಕೂಟವು ಹೈದ್ರಾಬಾದನ್ನು ಆಕ್ರಮಿಸಲೆತ್ನಿಸಿದರೆ,
ಆಕ್ರಮಣಕಾರರು ಒಂದು ಕೋಟಿ ಅರವತ್ತೈದು ಲಕ್ಷ
ಹಿಂದೂಗಳ ಶವಗಳು ಎಲ್ಲೆಲ್ಲೂ ಬೆಂಕಿಯಲ್ಲಿ,
ಉರಿಯುತ್ತಿರುವುದನ್ನು ಕಾಣಬಹುದು, ನಮಗೆ
ಜೀವಸಲಾರದ ಪರಿಸ್ಥಿತಿ ಬಂದರೆ, ಮುಸಲ್ಮಾನರಾದ
ನಾವು ಬೇರೆಯವರನ್ನು ಜೀವದಿಂದರಗೊಡಲಾರೆವು''

ಹಿಂಧೂಗಳ ಪರಿಸ್ಥಿತಿ ನೆನೆಸಿಕೊಂಡರೆ ಮೈಜುಮ್ಮೆನಿಸುತ್ತದೆ. ಮನೆಯಲ್ಲಿ ಮದುವೆ-ಮುಂಜಿ-ಯಾಗಬೇಕಾದರೆ ಜಿಲ್ಲಾ ಆಡಳಿತದಿಂದ ಪೂರ್ವಾನುಮತಿ ಪಡೆಯಬೇಕು. ಮದುವೆ ಹಾಗೂ ಧಾರ್ಮಿಕ ಮೆರವಣಿಗೆಗೂ ಅನುಮತಿಬೇಕು. ಬಾಜಾ-ಬಜಂತ್ರಿಯೊಂದಿಗೆ ಮೆರವಣಿಗೆ ಹೊರಟರೆ, ಪ್ರಾರ್ಥನಾಮಂದಿರದ ಮುಂದೆ ಸಾಗಿದ ನಂತರ ವಾದ್ಯ ಬಾರಿಸುವುದನ್ನು ನಿಲ್ಲಿಸಿ, ನೂರಡಿ ಮುಂದೆ ಸಾಗಿದ ನಂತರ ವಾದ್ಯ ಬಾರಿಸಬೇಕು. ಇದನ್ನು ಯಾರಾದರೂ ಉಲ್ಲಂಘಿಸಿದರೆ ಅಲ್ಲಿಯೇ ಪೋಲೀಸರು ಬಂಧಿಸಿ

ಜೈಲಿಗಟ್ಟುವುದು ಸಾಮಾನ್ಯವಾಗಿತ್ತು. ಸ್ವಾತಂತ್ರ್ಯ ದೊರೆತಾಗ ಸಂಭ್ರಮಿಸುತ್ತಿದ್ದ ಭಾರತೀಯ ದೇಶಭಕ್ತರ ಮೇಲೆ ಸಂಸ್ಥಾನದ ಪೋಲಿಸರು ನಡೆಸಿದ ದೌರ್ಜನ್ಯ ಹೇಳಲೇರದು. ಪೋಲಿಸರ ಈ ದೌರ್ಜನ್ಯದಿಂದ ಹಲವಾರು ಕಡೆ ಲಾಠಿ ಪ್ರಹಾರ, ಗುಂಡಿನ ದಾಳಿಗಳಿಂದ ಹಲವಾರು ಜನ ಸ್ವಾತಂತ್ರ್ಯ ಹೋರಾಟಗಾರರು ಸಾವನ್ನಪ್ಪಿದ್ದಾರೆ. ಈ ಸಂದರ್ಭದಲ್ಲಿ ಕಾಶೀಮ್ ರಜವಿ ೮೦೦ ವರ್ಷಗಳಿಂದ ನಾವು ಆಳುತ್ತಿದ್ದೇವೆ. ಮುಂದೂ ನಾನೇ ಆಳುತ್ತೇವೆ ಎಂದು ಹಿಂದೂಗಳನ್ನು ಹೀಯಾಳಿಸುತ್ತಿದ್ದನು. ಇವನ ಈ ದೇಶವಿರೋಧಿ ಭಾಷಣದ ವರದಿಯನ್ನು ಮುನ್ಷಿಯವರು ಸರ್ದಾರ್ ವಲ್ಲಭಬಾಯಿ ಪಟೇಲರಿಗೆ ತಿಳಿಸಿದ್ದರು. ರಜವಿಯ 'ಭಾಷಣವನ್ನು ಹಿಂದೂಸ್ತಾನ್ ಟೈಂಸ್' ಪತ್ರಿಕೆಯು ಪ್ರಕಟಿಸಿತು. ಇದರಿಂದ ಮೌಂಟ್‌ಬ್ಯಾಟನ್, ನೆಹರೂರವರು ದಿಗ್ಭ್ರಾಂತರಾದರು.

ಭಾರತಕ್ಕೆ ಸ್ವಾತಂತ್ರ್ಯಕ್ಕೆ ಹೋರಾಡಿದ ಮಹಾತ್ಮಗಾಂಧೀಜಿಯವರನ್ನು ಭಾರತದ ಪಿತಾಮಹನೆಂದು ಕರೆದರೆ, ಹೈದ್ರಾಬಾದ್ ಪ್ರಾಂತ ಸ್ವಾತಂತ್ರ್ಯ ಪಡೆಯಲು ಕಾರಣರಾದ ಉಕ್ಕಿನ ಮನುಷ್ಯ ಸರ್ದಾರ್ ವಲ್ಲಭಬಾಯಿ ಪಟೇಲರನ್ನು ಹೈದ್ರಾಬಾದ್ ಪಿತಾಮಹ ರೆನಿಸಿಕೊಳ್ಳುತ್ತಾರೆ. ಏಕೆಂದರೆ, ಈ ಪ್ರದೇಶದ ವಿಮೋಚನೆಗೆ ಹೋರಾಡಿದ ಪಟೇಲರು ಗಾಂಧೀಜಿಗಿಂತ ಪ್ರಮುಖರೆನಿಸುತ್ತಾರೆ. ಭಾರತದ ಸ್ವಾತಂತ್ರ್ಯ ದೊರೆಯುವಲ್ಲಿ ಕಾಂಗ್ರೆಸ್ ಸಂಸ್ಥೆಯ ಪ್ರಮುಖ ಹೋರಾಟ ಕಾರಣವಾದರೆ, ಹೈದ್ರಾಬಾದ್ ಪ್ರಾಂತ್ಯದ ಸ್ವಾತಂತ್ರ್ಯವನ್ನು ಸ್ವತಃ ಇಲ್ಲಿಯ ಜನ ಸಾಮಾನ್ಯರೆ ಹೋರಾಡಿ ಪಡೆದಿರುವುದು ಎದ್ದು ಕಾಣುತ್ತದೆ. ಇಂತಹ ದಮನಕಾರಿ ಆಡಳಿತ, ಅರಾಜಕತೆಯ ವಿರುದ್ಧ ಜನಸಾಮಾನ್ಯರು ನಡೆಸಿದ ಹೋರಾಟದ ಪರಿಣಾಮವಾಗಿ ನಿಜಾಮನ ಆಡಳಿತ ಕೊನೆಗೊಳ್ಳುವ ಹಂತ ತಲುಪಿತು. ಇದೆಲ್ಲದರ ಪರಿಣಾಮವಾಗಿ ಸರ್ದಾರ್ ವಲಭಾಬಾಯಿ ಪಟೇಲರು ಹಾಕಿಕೊಟ್ಟ ಯೋಜನಾಬದ್ಧ 'ಪೋಲಿಸ್ ಕಾರ್ಯಾಚರಣೆ' ಸೆಪ್ಟೆಂಬರ್ ೧೮, ೧೯೪೮ ರಂದು ಐತಿಹಾಸಿಕ ಘಟನೆಯಿಂದ ಪ್ರಕ್ಷುಬ್ದ ಪರಿಸ್ಥಿತಿ ಹತೋಟಿಗೆ ಬಂದಿತು. ರಜಾಕಾರರ ಹಾವಳಿಯಿಂದ ತತ್ತರಿಸಿದ ಪ್ರಜೆಗಳಲ್ಲಿ ಜೀವದಾಸೆ ಮೂಡಿತು. ಬೇರೆ ಕಡೆ ವಲಸೆ ಹೋಗುತ್ತಿದ್ದ ಜನತೆ ಒಂದೆಡೆ ನೆಲೆಸಲು ಸಾಧ್ಯವಾಯಿತು. ಇದೆಲ್ಲದರ ಪರಿಣಾಮವಾಗಿ ೧೯೫೬ ನವ್ಹೆಂಬರ್ ೧ ರಂದು ರಾಜ್ಯಪುನರ್ ಸಂಘಟನೆ ಯೋಜನೆಯಲ್ಲಿ ಹಿಂದಿನ ಮೊಗಲಾಯಿ ಆಡಳಿತ ಕಾಲದ ಹೈದ್ರಾಬಾದ್ ರಾಜ್ಯವು ಅಸ್ತಂಗತವಾಯಿತು. ತೆಲುಗು, ಕನ್ನಡ, ಮರಾಠಿ, ಹಿಂದಿ ಮಾತನಾಡುವ ಜನ ಕೋಟಿ ನಿರಾಳದ ನಿಟ್ಟುಸಿರು ಬಿಟ್ಟಿತು. ಸರ್ದಾರ್ ಪಟೇಲ್ ಹಾಗೂ ಕನ್ನಯ್ಯಲಾಲ್ ಮುನ್ಷಿಯವರ ಮೇಲೆ ವಿಷಕಾರುತ್ತಿದ್ದ ರಜಾಕಾರ ತಂಡದವರು ತಲೆತಗ್ಗಿಸುವಂತಾಯಿತು. ಕಾಸಿಂ ರಜವಿ ಹೇಳ ಹೆಸರಿಲ್ಲದಂತೆ ಬಾಲ ಮುದುರಿಕೊಂಡು ಹೋದ ಅವನ ಜನರೇ ಅವನನ್ನು ಹೊರ ಹಾಕಿಹೂಡಿದರು.

ಸೆಪ್ಟೆಂಬರ್ ಹದಿನೇಳರಂದು
ಸೂರ್ಯ ಉದಯಿಸಿದ ; ಶರಣಾಗತಿಯಾಗಿ
ಮುಕ್ತಿವೀರಗಾಥೆಗೆ ನಿಜಾಮ ಅಸ್ತಂಗತನಾದ
ಆಗ
ಬಾವುಟ ಹಾರಿತು, ಸ್ವಾತಂತ್ರ್ಯ ಹಕ್ಕಿ
ಗರಿ ಬಿಚ್ಚಿ ಕುಣಿಯಿತು,
ಬಿಡುಗಡೆಯ ಬಾಗಿಲು ತೆರೆಯಿತು

# ರಜಾಕಾರರ ಹಾವಳಿ

ಹೈದ್ರಾಬಾದ್ ನಿಜಾಮ್ ಸರ್ಕಾರಕ್ಕೆ ಮಾಲಗು ಜಾರಿ ಕೊಡಬಾರದೆಂದು, ಲೇವಿಕೊಡಬಾರ ದೆಂದು ಹಳ್ಳಿ ಹಳ್ಳಿಗೆ ಹೋಗಿ ಪ್ರಚಾರ ಮಾಡುವ ಭೂಗತ ಚಳುವಳಿ ಪ್ರಾರಂಭವಾಯಿತು. ಶೇಂದಿಗಿಡಗಳನ್ನು ನಾಶಪಡಿಸಬೇಕೆಂದು ಜನರನ್ನು ಪ್ರಚೋದಿಸಲಾಯಿತು. ಹೀಗಾಗಿ ಚಳುವಳಿ ತೀವ್ರವಾಯಿತು. ಇದರಿಂದ ಕುಪಿತಗೊಂಡ ರಜಾಕಾರರು ಕಾಗ್ರೆಸ್ಸಿಗರ ಮನೆಮನೆಗೆ ಹೋಗಿ ಹಿಂಸೆಕೊಡಹತ್ತಿದರು. ಬೆದರಿಕೆ ಹಾಕಹತ್ತಿದರು. ಊರು ಬಿಟ್ಟು ಹೋಗಲು ಬೆದರಿಕೆಹಾಕ ಹತ್ತಿದರು. ಹೀಗಾಗಿ ಅನೇಕರು ಹಿಂಸೆಗಳನ್ನು ತಾಳದೇ ತಮ್ಮ ಆಸ್ತಿಪಾಸ್ತಿಗಳನ್ನು ಬಿಟ್ಟು ತುಂಗಾಭದ್ರಾದಂತೆ ಆಚೆಗೆ ಕಂಪ್ಲಿ ಗ್ರಾಮಕ್ಕೆ ಹೋದರು. ಭೂಗತರಾದರೂ ಅಲ್ಲಿ ಕಾಂಗ್ರೆಸ್ ಶಿಬಿರವನ್ನು ಪ್ರಾರಂಭಿಸಿದರು. ಇದರ ಮುಖಂಡತ್ವವನ್ನು ಶ್ರೀ ರಾಮಭತ್ ಜೋಶಿಯವರು ವಹಿಸಿದ್ದರು.

ಆಸಿಪಾಸ್ತಿಗಳಿಗೆ ಹೆಚ್ಚಿನ ಹಾನಿಗೊಳಗಾದ ಕಾಂಗ್ರೆಸ್ಸಿಗರೆಂದರೆ ಆಯೋಧ್ಯಾ ರಾಘವೇಂದ್ರಾ ಚಾರ್ಯರು, ಅವರು ಬೆಳೆದ ಭೂಮಿಯಲ್ಲಿ ಸಂಪೂರ್ಣ ಕಬ್ಬು, ನೆಲ್ಲಿನ ಬೆಳೆಗಳನ್ನು ರಜಾಕಾರರು ಸಂಪೂರ್ಣ ಲೂಟಿ ಮಾಡಿದರು. ರಜಾಕಾರರ ದಬ್ಬಾಳಿಕೆ ದಿನದಿನಕ್ಕೆ ಹೆಚ್ಚಾಗತೊಡಗಿತು. ಚಿತ್ರ ಹಿಂಸೆಯನ್ನು ತಾಳದೇ ರಾಮಭಟ್‌ಜೋಶಿಯವರು ಮೇಲಿನ ಆದೇಶದಂತೆ ಭೂಗತರಾಗಿ ಗುಡ್ಡಗಾಡುಗಳಲ್ಲಿ ಕಾಲು ನಡುಗೆಯಿಂದ ಹುಲಗಿ ಮಾರ್ಗವಾಗಿ ಕಂಪ್ಲಿಗೆ ಬಂದು ಅಲ್ಲಿ ಶಿಬಿರದ ಮುಖಂಡತ್ವ ವಹಿಸಿದರು. ಅವರ ಪತ್ನಿ ಪದ್ಮಾವತಿಬಾಯಿ ಇವರನ್ನು ರಜಾಕಾರರು ಬಂಧಿಸಿ ಕೊಪ್ಪಳ ಜೇಲಿನಲ್ಲಿ ಇಟ್ಟಿದ್ದರು.

ಸ್ಟೇಟ್ ಕಾಂಗ್ರೆಸ್ ಆದೇಶದಂತೆ ಶ್ರೀ ರಾಮಭಟ್ ಜೋಶಿಯವರ ಮುಖಂಡತ್ವದಲ್ಲಿ ವಿದ್ಯಾರ್ಥಿಗಳು ಹಳ್ಳಿ ಹಳ್ಳಿಗೆ ಹೋಗಿ ಆಂದೋಲನ ಪ್ರಾರಂಭಿಸಿದರು. ಅಸಹಕಾರ ಚಳುವಳಿ ಪರಿಣಾಮ ಆಗದೇ ಇರಲಿಲ್ಲ. ಅನೇಕ ಹಿರಿಯ ಕಾಂಗ್ರೆಸ್ಸಿಗರು ಹಾಗೂ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಸತ್ಯಾಗ್ರಹ ಮಾಡಿದ ಹಿರಿಯರು ಮತ್ತು ವಿದ್ಯಾರ್ಥಿಗಳು ಬಿಡುಗಡೆ ನಂತರ ಶಿಬಿರ ಸೇರಿದರು. ಭೂಗತ ಚಟುವಟಿಕೆಗಳು ಪ್ರಾರಂಭವಾದವು. ರಾತ್ರೋರಾತ್ರಿ ನಿಜಾಂ ಸರಕಾರದ ಅಧಿಕಾರಿಗಳ ಚಟುವಟಿಕೆಗಳ ಬಗ್ಗೆ ಸಮಾಚಾರ ಸಂಗ್ರಹಿಸುತ್ತಿದ್ದರು. ಕೇಂದ್ರ ಸರಕಾರವು ನೈಜಾಂ ಸ್ಟೇಟಿನ ಮೇಲೆ ಹಾಕಿದ ಆರ್ಥಿಕ ದಿಗ್ಬಂಧನವನ್ನು ಯಶಸ್ವಿಮಾಡುಲು ಆಹೋ ರಾತ್ರಿ ಕಾರ್ಯಕರ್ತರು ತುಂಗಾಭದ್ರಾ ನದಿಗುಂಟ ಪಹರೆ ಮಾಡುತ್ತಿದ್ದರು. ಹಾಗೂ ಜೀವನಾವಶ್ಯಕ ಸರಕುಗಳು ನೈಜಾಂ ಇಲಾಖೆಗೆ ಹೋಗದಂತೆ ನೋಡಿಕೊಳ್ಳುತ್ತಿದ್ದರು. ಕೇಂದ್ರ ಮಿಲಿಟರಿಯವರೊಂದಿಗೆ ಸಹಕರಿಸುತ್ತಿದ್ದರು. ಶ್ರೀ ರಾಮ್‌ಭಟ್ ಜೋಶಿ ಇವರು ಶಿಬಿರದ ಮುಖ್ಯ ಅಧಿಪತಿಗಳಾಗಿದ್ದರು. ಹಾಗೂ ಜಿ. ಮಹಾದೇವಪ್ಪರವರು ಶಿಬಿರಾಧಿಪತಿಗಳಾಗಿದ್ದರು. ಶಿಬಿರದ ವಿದ್ಯಾರ್ಥಿಗಳು ಕಂಪಿಲ್ಯ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ನಡೆಯುವ ಜಾತ್ರೆಗಳಲ್ಲಿ ಹೋಗಿ ಸಾರ್ವಜನಿಕ ಸಭೆಗಳನ್ನು ನಡೆಸಿ, ನೈಜಾಂ ಸರಕಾರದ ದಬ್ಬಾಳಿಕೆ ಬಗ್ಗೆ ಮನವರಿಗೆ ಮಾಡಿಕೊಡುತ್ತಿದ್ದರು. ಹಾಗೂ ಕೇಂದ್ರ ಸರ್ಕಾರದ '' ಆರ್ಥಿಕ ದಿಗ್ಬಂಧನ''ವನ್ನು ಯಶಸ್ವಿ ಮಾಡಲು ವಿನಂತಿಸುತ್ತಿದ್ದರು.

ಹೊಸಪೇಟೆಯಲ್ಲಿಯೂ ಸಹಾ ಇಂಥಹದ್ದೊಂದು ಶಿಬಿರ ಪ್ರಾರಂಭವಾಯಿತು. ಇದರ ಮುಖಂಡತ್ವವನ್ನು ಕೋದಂಡರಾಮಪ್ಪನವರು ವಹಿಸಿದ್ದರು. ಆನೆಗೊಂದಿರು ಸದಾಶಿವರಾಜು, ರಾಮರಾಜು ಮೊದಲಾದ ಕಾರ್ಯಕರ್ತರು ಭಾಗವಹಿಸಿದ್ದರು. ಕಂಪ್ಲಿ ಮತ್ತು ಹೊಸಪೇಟೆಯ ಶಿಬಿರಕ್ಕೆ ಸಹಕಾರ ನೀಡಿದ ಕಂಪ್ಲಿಯ ಪರ್ವತಪ್ಪ ನೂಲ್ವಿ, ಹುಸೇನ್ ಸಾಬ್, ಐಲಿ ಪಂಪಣ್ಣ ರವರ ಉಪಕಾರ ಎಂದಿಗೂ ಮರೆಯಲಾಗದು. ೧೯೪೮ ಸೆಪ್ಟೆಂಬರ್ ತಿಂಗಳಲ್ಲಿ ಕೇಂದ್ರ ಸರಕಾರ ನೈಜಾಂರ ಮೇಲೆ ದಾಳಿ ಮಾಡಿತು. ಹುಲಿಗೆ ಗ್ರಾಮದಲ್ಲಿ ಕೇಂದ್ರ ಪಡೆ ಹಾಗೂ ರಜಾಕಾರರ ನಡುವೆ ಘನಘೋರ ಕಾಳಗ ನಡೆಯಿತು. ೨-೩ ದಿನಗಳಲ್ಲಿ ನೈಜಾಂ ಸಾಹೇಬರು ಶರಣಗತರಾದರು. ಹೈದ್ರಾಬಾದ್ ಸ್ಟೇಟಿನ ಇನ್ನಿತರ ಕಡೆಗಳಲ್ಲಿಯೂ ಕೇಂದ್ರದಾಳಿ ನಡೆಸಿತು. ಕೊನೆಗೂ ನೈಜಾಂ ಸಾಹೇಬರು ಸೋಲೊಪ್ಪಿದರು. ಈ ಕಾರ್ಯಾಚರಣೆಯಲ್ಲಿ ಮುಖ್ಯವಾಗಿ ಸರ್ದಾರ್ ವಲ್ಲಭಬಾಯಿ ಪಟೇಲರನ್ನು ನಾವುಗಳು ಎಂದಿಗೂ ಮರೆಯುವಂತಿಲ್ಲ. ಕಂಪ್ಲಿಯಲ್ಲಿ ವಿಜಯೋತ್ಸವ ಭಾರೀ ವಿಜೃಂಭಣೆಯಿಂದ ನಡೆಯಿತು.

ಕಾಟೋ (ಕತ್ತರಿಸಿರಿ) ಲೂಟೋ (ಕೊಳ್ಳೆಹೊಡೆಯಿರಿ) ಮತ್ತು ಬಾಟೋ (ಹಂಚಿರಿ) ಇದೇ ರಜಾಕಾರರ ಅಂದಿನ ಕಾರ್ಯನೀತಿ.

ರಜಾಕಾರರಿಗೆ ತಮ್ಮದೇ ಆದ ವೇಷಭೂಣಗಳಿದ್ದವು. ಕೆಂಪು ಬಣ್ಣದ ಕಪ್ಪು ತೂಗುಗೊಂಡೆಯ ''ಫೈಜ್'' ಟೋಪಿ, ಉದ್ದನೆಯ ಕುರ್ತಾ ಮತ್ತು ಚೂಡಿದಾರ ಪೈಜಾಮ ಇದು ರಜಾಕಾರರ ಅಂದಿನ ವೇಷಭೂಷಣ. ಇವರ ನಾಯಕ ಕಾಸಿಂ ರಜ್ವಿ ಮಾತ್ರ ಸೈನ್ಯಾಧಿಕಾರಿಯ ಅಚ್ಚ ಖಾಕಿ ಕೋಟು ಪ್ಯಾಂಟು ಇತ್ಯಾದಿ, ಎಲ್ಲಾದರೂ ಕನ್ನಡ ಪತ್ರಿಕೆ ವಿಶೇಷವಾಗಿ ' ಪ್ರಜಾ ' ಸಂಯುಕ್ತ ಕರ್ನಾಟಕ ಯಾರಾದರೂ ಓದುತ್ತಿದ್ದರೆ ಅವರನ್ನು ಬೂಟುಕಾಲಿನಲ್ಲಿ ಒಡೆಯುವುದು, ಪತ್ರಿಕೆ ಹರಿದು ಗಾಳಿಗೆ ತೂರುವುದು, ಯಾರಾದರೂ ಪ್ರತಿಭಟಿಸಿದರೆ ಅವನ್ನು ಕೊಚ್ಚಿ ಹಾಕುವುದು. ಇಂಥ ದೌರ್ಜನ್ಯಗಳ ವಿರುದ್ಧ ಪ್ರತಿಭಟಿಸಲು ಜನರೇ ಸುಸಂಘಟಿತರಾಗಿ ಮುಂದಾದರು. ಪ್ರಭಾತ್ ಫೇರಿ ಹೊರಡಿಸಿ ಗಲ್ಲಿಗಲ್ಲಿ ಸುತ್ತಾಡಿ ಹಾಡುಗಳನ್ನು ಹೇಳುತ್ತಿದ್ದರು.

ಮಂತ್ರ ವಂದೇ ಮಾತರಂ
ತಂತ್ರ ವಂದೇ ಮಾತರಂ
ಬಡವರೆಲ್ಲರ ಕೊರಳ ಹಾರವು
ನಮ್ಮ ವಂದೇ ಮಾತರಂ
ಸರಕಾರ ಕಸಿಯಲು ಸಾಧ್ಯವಾಗದು
ನಮ್ಮ ವಂದೇ ಮಾತರಂ
ಮಂತ್ರ ವಂದೇ ಮಾತರಂ
ತಂತ್ರ ವಂದೇ ಮಾತರಂ

ಉರ್ದು ಭಾಷೆಯ ಈ ರಚನೆ ಅಂದು ಎಷ್ಟು ಜನಪ್ರಿಯವಾಯಿತೆಂದರೆ, ಕೂಲಿಕಾರು, ದೀನದಲಿತರು, ವಿಶೇಷತಃ ನೇಕಾರರು ತಮ್ಮ ತಮ್ಮ ಕಾರ್ಯ ಮಾಡುವಾಗ ಕೂಡ ತಾಳ, ಲಯಗಳಿಗೆ ತಕ್ಕಂತೆ ಹಾಡುತ್ತಾ ಜನರಲ್ಲಿ ಪ್ರತಿಭಟನಾ ಶಕ್ತಿಯನ್ನು ವೃದ್ಧಿಗೊಳಿಸುತ್ತಿದ್ದರು.

## ಸಾಂಘಿಕ ಪ್ರವೃತ್ತಿ ಹುಟ್ಟು, ಬೆಳವಣಿಗೆ :

ಸಮಾಜದಲ್ಲಿ ಜನ ಸಮುದಾಯಗಳನ್ನು ಸಂಘಟಿಸಿ ಪರಿಣಾಮಕಾರಿಯಾದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಬದಲಾವಣೆಗಳಿಗೆ ಪ್ರಯತ್ನ ಸಾಗಿದೆ. ಈ ಸಾಂಘಿಕ ಅಥವಾ ಸಮುದಾಯಗಳ ಪ್ರಯತ್ನಗಳ ಆಯಾ ಕಾಲಘಟ್ಟದಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ ಜೀವನದ ಉನ್ನತಿಗೆ, ಅಯಾ ಸಮುದಾಯಗಳ ನಡುವೆ ಒಳಿತಿಗಾಗಿ ನಡೆದ ಸಂಘರ್ಷಗಳು ಚಾರಿತ್ರಿಕ ನಿದರ್ಶನಗಳಾಗಿವೆ.

ಸಾಂಘಿಕ ವರ್ತನೆ ಎಂಬುದು ಬದಲಾವಣೆಯ ಒಂದು ಮುಖವಾಗಿದೆ. ಸಾಂಘಿಕ ವರ್ತನೆ ಅಥವಾ ಸಾಂಘಿಕ ಚಳುವಳಿ ಸಾಮಾಜಿಕ ಪರಿವರ್ತನೆಯ ಅಧ್ಯಯನದಲ್ಲಿ ಸಾಮಾಜಿಕ ಚಲನೆಗಳಿಗೆ ವಿಶೇಷ ಪ್ರಾಶಸ್ತ್ಯವನ್ನೇನು ನೀಡಿರುವುದಿಲ್ಲ. ಇದಕ್ಕೆ ಕಾರಣವೇನಂದರೆ, ಸಮಾಜಶಾಸ್ತ್ರ್ಯಜ್ಞರು ಇಲ್ಲಿಯವರೆಗೆ ಸಾಂಘಿಕ ಚಳುವಳಿಗಳನ್ನು ಸಾಮಾಜಿಕ ಬದಲಾವಣೆಯ ಮೂಲಕಾರಣ ಭೂತರೆಂದು ಭಾವಿಸದೆ ಕೇವಲ ಜೀವಿಗಳೆಂದು ಮಾತ್ರ ಪರಿಗಣಿಸಿದ್ದಾರೆ. ಬಹುಮಟ್ಟಿಗೆ ಹೇಳುವುದಾದರೆ ಸಮಾಜಶಾಸ್ತ್ರಜ್ಞರು ಬದಲಾವಣೆಯ ಪ್ರೇರಕ ಶಕ್ತಿಗಳು ಯಾವುದು ಎಂದು ಅನ್ವೇಷಿಸಿದಾಗ ಮನುಷ್ಯನ ಕ್ರಿಯೆ ಮತ್ತು ಪರಸ್ಪರ ಕ್ರಿಯೆಗಳ ಕಡೆಗೆ ಅಷ್ಟೊಂದು ಗಮನ ಕೊಡಲಿಲ್ಲ. ಸಾಮಾಜಿಕ ಅಥವಾ ವಿಶೇಷತಃ ಸಾಂಸ್ಕೃತಿಕ ಶಕ್ತಿಗಳ ಕಡೆಗೆ ಹೆಚ್ಚಿನ ಗಮನವನ್ನು ನೀಡಿದ್ದಾರೆ.

ಹರ್ಬಟ್ಸ್ ಸ್ಪೆನ್ಸರ್ ಅವರ ವಿಕಾಸ ವಾದೀಯ ಸಿದ್ಧಾಂತಗಳು ವಿಕಾಸವಾದೀ ಸಿದ್ಧಾಂತ ಯುಗದ ಅಥವಾ ಸಾಮಾಜಿಕ ಡಾರ್ವಿನಿಸಂನ ಪ್ರಾರೂಪಿಲ್ ಸಿದ್ಧಾಂತಗಳೇ ಆಗಿವೆ. ಸಮುದಾಯ ಅಥವಾ ಆಯಾ ವರ್ಗಗಳ ಪರಿವರ್ತನೆ ಹಾಗೂ ಬದಲಾವಣೆಗಳಿಗಾಗಿ ನಡೆಸಿದ ಮಾನವನ ಪ್ರಜ್ಞಾಪೂರ್ವಕ ಮತ್ತು ಸಂಘರ್ಷೀಯ ಪ್ರಯತ್ನಗಳ ದಿಸೆಯಿಂದ ಗಮನವನ್ನು ಬೇರೆಡೆಗೆ ನಿರ್ದೇಶಿಸಿವೆ. ಬೆಳವಣಿಗೆಯೊಂದಿಗೆ ಪರಿವರ್ತನೆಯ ಪ್ರತಯ್ನಗಳು ಅದರಲ್ಲೂ ವಿಶೇಷವಾಗಿ ಕ್ರಾಂತಿಕಾರಿ ಚಳುವಳಿಗಳಂಥ ಪ್ರಯತ್ನಗಳನ್ನು ನಿಷ್ಪ್ರಯೋಜಕವೆಂದೂ, ಇವು ಬೆಳವಣಿಗೆಗೆ ವ್ಯತಿರಿಕ್ತವೆಂದು ಭಾವಿಸಲಾಯಿತು. ಅಮೇರಿಕಾದ ವಿಲಿಯಂ ಜಿ. ಸಮ್ನರ್ ಅವರ ಸಂಪ್ರದಾಯವಾದಿ ಒಲವು ಇಂಥಹ ಪರಿಣಾಮವನ್ನು ಬೀರಿತು. ಸಂಪ್ರದಾಯವಾದೀ ಸಿದ್ಧಾಂತದ ವಕ್ತಾರರಾದ ಇವರು ಜೈನವಾದಿಯ ಸಾದೃಶ್ಯವನ್ನು ಅಂಗೀಕರಿಸದಿದ್ದಾಗ ಸಮ್ನರ್ ಅವರು ವಾದಿಗಳ ಬದಲಾವಣೆಗಳ ಮಂದಗತಿಯನ್ನು ಒತ್ತಿ ಹೇಳಿದರು. ಬಲಪೂರ್ವಕವಾಗಿ ಪರಿವರ್ತನೆಯನ್ನಾಗಲಿ ಬದಲಾವಣೆಯನ್ನಾಗಲಿ ತರಲು ಮಾಡುವ ಪ್ರಯತ್ನವು ಕೇವಲ ನಿಷ್ಪ್ರಯೋಜಕವಷ್ಟೇ ಅಲ್ಲ, ಅಂಥ ಪ್ರಯತ್ನ ಅಪಾಯಕಾರಕ ಆಗಿರುತ್ತದೆ ಎಂದು ಹೇಳುವ ಮೂಲಕ ಸಮಾಜ ಶಾಸ್ತ್ರಜ್ಞರ ಗಮನವನ್ನು ಸಂಸ್ಕೃತಿಯ ಕಡೆಗೆ ನಿರ್ದೇಶಿಸಿದರು.

ವರ್ಗ ಅಥವಾ ಸಮುದಾಯಕ್ಕಿಂತ ಸಂಸ್ಕೃತಿಯೇ ಸಾಮಾಜಿಕ ಪರಿವರ್ತನೆಗೆ ಅಗತ್ಯವಾದ ಚಾಲಕ ಶಕ್ತಿಯಾಗಿದೆ ಎಂಬ ಭಾವನೆಯು ಡಬ್ಲ್ಯು ಎಫ್ ಆಗ್‌ಬರ್ನ್ (೧೯೨೨) ಅವರ ಲೇಖನಗಳಲ್ಲಿ ವ್ಯಕ್ತವಾದ ವಾದ ಸಾಮಾಜಿಕ ಬದಲವಾಣೆಯನ್ನು ಸಾಂಸ್ಕೃತಿಕ ಬದಲಾವಣೆಯೊಂದಿಗೆ ಸಮೀಕರಿಸಿರುವಂತೆ ಕಂಡು ಬರುತ್ತದೆ.

ವಿವಿಧ ಬಗೆಯ ಪರಿವರ್ತನೆಗಳು ಸಾಂಘಿಕ ಚಳುವಳಿಗಳ ಮೇಲೆ ಗಾಢವಾದ ಪರಿಣಾಮ ಬೀರಿದರೂ ಅವುಗಳನ್ನು ಬದಿಗೆ ಸರಿಸಿ ವಿವಿಧ ಪ್ರಕಾರಗಳ ಮಾನವೋತ್ತಮವಾದವು ಆ ಸ್ಥಳವನ್ನು ತಾನು ಪಡೆಯಿತು. ಈ ಸಂಕೀರ್ಣ ರೂಪದ, ದೀರ್ಘಕಾಲದ ಸಾಂಘಿಕ ಚಳುವಳಿಗಳ ಅಧ್ಯಯನಗಳಿಗೆ ಮತ್ತು ಐತಿಹಾಸಿಕ ವಿವರಣೆಗಳಿಗೆ ಹೆಚ್ಚು ಸೂಕ್ತವಾಗಿರುತ್ತದೆ.

ಕ್ರಿಯಾವಾದದ ತಿರುಳಾಗಿರುವ ಸಾಂಘಿಕ ಪ್ರಯತ್ನದ ವರ್ತನೆ ಸಾಮಾಜಿಕ ವ್ಯವಸ್ಥೆಯ, ಸಂಘಟನೆಯ ಕೆಲವು ಪ್ರಕಾರಳಗು ವಿಶೇಷತಃ ಉಪಯೋಗಿತಾವಾದಿಗಳಾಗಿದ್ದರೂ ಕೂಡ, ಸಮುದಾಯ ಚಳುವಳಿದೊಳಗಿನ ತಂತ್ರಗಳನ್ನು ಪ್ರತ್ಯೇಕವಾಗಿ ಕಾಣುವುದರಿಂದ ಅವುಗಳನ್ನು ನಾವು ತಡೆಯುವಂತಿಲ್ಲ. (ಮ್ಯಾಕೀಮ್ ೧೯೪೨, ಪು.೨೭೪)

ಸಾಂಘಿಕ ಚಳುವಳಿ ಅಥವಾ ನೆಲೆಗಳ ಅಧ್ಯಯನವೆಂದರೆ, ಮೂಲತಃ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯ ಹಾಗೂ ಬದಲಾಗುತ್ತಿರುವ ಮೌಲ್ಯಗಳ ಹಾಗೂ ನೀತಿಗಳ ಅಧ್ಯಯನವಾಗಿದೆ. ಶರೀಫ್‌ರವರ ಮಾತುಗಳಲ್ಲಿ ಹೇಳುವುದಾದರೆ ಒಂದು ಸಮುದಾಯದ ಚಲನಯೆಂದರೆ - ಮಾನವ ಸಂಬಂಧಗಳ ಮತ್ತು ಪರಸ್ಪರ ಸಂಬಂಧಗಳು ರೂಪಗೊಳ್ಳುವ ಒಂದು ಹಂತವಾಗಿದೆ. ಅದು ಮುಂದುವರಿಯುವಂಥಹ ಒಂದು ಪರಿವರ್ತನೆಯನ್ನು ಬಿಂಬಿಸುತ್ತದೆ. (೧೯೫೬, ಪು. ೭೨೪) ಅಲ್ಲದೆ ಯಾವಾಗಲೂ ಒಂದು ಚಳುವಳಿ ಅಥವಾ ಸಾಂಘಿಕ ನೆಲೆ ಒಂದು ಉದ್ದಿಷ್ಟಕಾರ್ಯವನ್ನು ಒಳಗೊಂಡಿ ರುತ್ತದೆ. (೧೯೫೬, ಪು.೭೨೨)

ಆದ್ದರಿಂದ, ಸಹವಾಸಿಗಳ, ತನ್ನವರೊಂದಿಗೆ ಒಟ್ಟಾಗಿ ಹೋರಾಡುತ್ತಿರುವ ಮಾನವ ಜೀವಿಗಳ ಪರಸ್ಪರ ಕಾರ್ಯಗಳ ಕಡೆಗೆ ಗಮನವನ್ನು ಕೇಂದ್ರೀಕರಿಸಲಾಗಿರುತ್ತದೆ. ಇದು ಸಾಮೂಹಿಕತೆಯ, ಸಂಘಟನಾ ನೆಲೆಯ ಒಂದು ಭಾಗವೇ ಆಗಿದೆಯಲ್ಲದೆ ಇದೇ ಸಾಮಾಜಿಕ ಚಲನೆ ಎಂದೆನಿಸುತ್ತದೆ. ಇದು ಸಮುದಾಯ ವರ್ಗದಿಂದ ಹೊರಹೊಮ್ಮುತ್ತಿರುವ ಆ ಮೂಲಕ ರೂಪಗೊಳ್ಳುತ್ತಿರುವ ಚಳುವಳಿಗಳ ಅಧ್ಯಯನವೆಂದು ಹೇಳಬಹುದು. ಸಾಂಸ್ಕೃತಿಕ ಹೊಂದಾಣಿಕೆಯಿಲ್ಲದಿರುವಿಕೆಯು ಆಸಕ್ತಿಯ ವಿಷಯವಾಗಿದೆ. ಆದರೆ ಅವು ಸ್ಥಿತಿಗಳಾಗಿದ್ದು, ಅವುಗಳಿಂದ ತಮ್ಮ ಸಂಸ್ಕೃತಿಕ ಪರಿವರ್ತನೆಗಾಗಿ ಮಾನವನು ನಡೆಸುವ ಸಾಂಘಿಕ ಚಳುವಳಿ, ಸಾಮೂಹಿಕ ಹೋರಾಟಗಳು ಕುತೂಹಲಕಾರಿಯಾಗಿದ್ದು, ಸಂಸ್ಕೃತಿಯಲ್ಲಿ ಉಂಟಾಗುವ ಪರಿವರ್ತನೆ ಸಾಮಾಜಿಕ ಚಲನೆಯ ಅಂತಿಮ ಉತ್ಪನ್ನಗಳಾಗಿರುವುದರಿಂದ ಮತ್ತು ನೂತನ ಚಳುವಳಿಯು ರೂಪಗೊಳ್ಳುವಂತಹ ಹೊಸ ಸಾಮಾಜಿಕ ಸನ್ನಿವೇಶದ ಲಕ್ಷಣಗಳಾಗಿರುವುದರಿಂದಲೂ ಕೂಡ ಈ ಸಾಂಸ್ಕೃತಿಕ ಪರಿವರ್ತನೆಗೆ ಹೆಚ್ಚಿನ ಮಹತ್ವವಿದೆ. ಸಾಮಾಜಿಕ ಪರಿವರ್ತನೆ ಎನ್ನುವುದು ಅನ್ಯಥಾ ಸ್ಥಾಯಿ ವ್ಯವಸ್ಥೆಯೊಳಗೆ ಅಸಂಗತವಾದ ಹೊಂದಾಣಿಕೆಯಿಲ್ಲದ ವಿಷಯಗಳು ಒಳನುಗ್ಗಿದರ

ಪರಿಣಾಮವಷ್ಟೇ ಅಲ್ಲ, ಅಥವಾ ಸಾಂಸ್ಕೃತಿಕವಾಗಿ ಹಿಂದುಳಿದಿರುವಿಕೆಯ ಸಾಮಾಜಿಕ ಸಮತೋಲನವಿಲ್ಲದಿರುವಿಕೆ ಅಥವಾ ಸಾಮಾಜಿಕ ವಿಸಂಘಟನೆಗಳ ಲಕ್ಷಣಗಳನ್ನು ಮಾತ್ರ ಬದಲಾಯಿಸುವ ಪ್ರಯತ್ನವೂ ಆಗಿರುವುದಿಲ್ಲ. ಆದರೆ ಪರಿವರ್ತನೆ ಅಥವಾ ಸ್ಥಿತ್ಯಂತರ ಎನ್ನುವುದು ಸಂಸ್ಕೃತಿಯ ಒಂದು ಸಾಮಾನ್ಯ ನಿಯಮ ಮತ್ತು ಸಾಮಾಜಿಕ ಚಲನೆಯಾದರೋ ಸಾಮಾಜಿಕ ಪರಿವರ್ತನೆಯು ವ್ಯಕ್ತವಾಗುವುದಕ್ಕೆ ಮತ್ತು ಸಾಂಸ್ಕೃತಿಕ ಪರಿವರ್ತನೆ ಉಂಟಾಗುವುದಕ್ಕೆ ಅಗತ್ಯವಾದ ಬಹುಮುಖ್ಯ ವಿಧಾನಗಳಲ್ಲಿ ಒಂದಾಗಿದೆ.

## ಸಾಂಘಿಕ ನೆಲೆಗೆ ಸಂಬಂಧಿಸಿದ ಪ್ರಾಚೀನ ಬರವಣಿಗೆಗಳು :

ಎಮಿಲಿ ಡರ್‌ಕೀಮ್ ಅವರನ್ನು ಹೆಚ್ಚಾಗಿ ವರ್ಗಪ್ರಜ್ಞೆ ಮತ್ತು ಸಮುದಾಯಿಕ ನಿರ್ಣಾಯಿಕತೆ ಇವುಗಳೊಡನೆ ಗುರುತಿಸಲಾಗುತ್ತದೆಯಾದರು ಕೂಡ ಎಮಿಲಿ ಅವರು ಸಾಮಾಜಿಕ ಚಲನೆಯ ಸಾಂಘಿಕ ನೆಲೆಗಳನ್ನು ಮತ್ತು ಅವುಗಳ ಅಧ್ಯಯನವನ್ನು ಸಾಮುದಾಯಿಕ ಸಾಮಾಜಿಕ ಪರಿವರ್ತನೆಯ ಒಂದು ಕಾರಣವೆಂದು ತೋರಿಸಿಕೊಟ್ಟಿದ್ದಾರೆ. ಅವರು ತಮ್ಮ ಕಲ್ಪನೆಯಲ್ಲಿನ ವಿಕಾಸ ವಾದೀಯ ಪಂಥಕ್ಕೆ ತಮ್ಮ ಶ್ರಮ ವಿಭಜನೆಯ ಕಲ್ಪನೆಯನ್ನು ಹೋಲಿಸಿದ್ದಾರೆ. ಅವರು ತಮ್ಮ ಧಾರ್ಮಿಕ ಜೀವನದ ಪ್ರಾಥಮಿಕ ಪ್ರಕಾರಗಳಲ್ಲಿ (೧೯೧೫) ಸಾಮೂಹಿಕ, ಐಕ್ಯ ಪ್ರಾತಿನಿಧ್ಯಗಳನ್ನು ಉಂಟು ಮಾಡುವಂತಹ ಸಾಮಾಜಿಕ ಸಹ ಸಂಬಂಧ ಅಥವಾ ಮನೋಸಾಮಾಜಿಕ ಸಂಶ್ಲೇಷಣೆಗಳ ಮಹತ್ವವನ್ನು ಎತ್ತಿ ಹೇಳಿದ್ದಾರೆ. ಪಾರ್ಸನ್‌ರವರು ತೋರಿಸಿಕೊಟ್ಟಿರುವಂತೆ, ಡರ್‌ಕೀಮ್‌ರವರು ಅಂತಿಮವಾಗಿ ಮಾನವೋತ್ತಮವಾದೀ ಪ್ರಾಚ್ಯವಾದಿಗಳಿಂದ ಸ್ವಯಂ ಸಹಾಯವಾದಿ ಮಾರ್ಗದತ್ತ ಹೊರಳಿದರು. ಅದು ಅವರು ಹೆಚ್ಚಾಗಿ ತಮಗೆ ಸೇರಿದುದೆಂದು ತಿಳಿಸಿದ ಸಾಂಸ್ಕೃತಿಕ ನಿರ್ಣಯಕತ್ವದ ತತ್ವದ ಬಗೆಗಿನ ಭಿನ್ನವಾಗಿದೆ. (೧೯೩೭, ಪು.೪೫೦)

ಗಸ್ಟೇವ್ ಲೆಬಾನ್ (೧೮೯೭) ಎಂಬ ಮತ್ತೊಬ್ಬ ಮಾನವಶಾಸ್ತ್ರಜ್ಞನು ಬರೆದ ಬರಹಗಳು ಸಾಂಘಿಕ ವರ್ತನೆಯಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಯನ್ನು ಉಂಟು ಮಾಡಬಲ್ಲ ಪರಸ್ಪರ ಕ್ರಿಯೆಯ ಮಹತ್ವವನ್ನು ಎತ್ತಿ ತೋರಿಸಿದರು. ಅವರು ಸಾಂಘಿಕ (ಗುಂಪು) ನೆಲೆ ಅಥವಾ ವರ್ತನೆ ಬಗ್ಗೆ ಬರೆದಿರುವುದಾದರೂ ಕೂಡ, ಗುಂಪು ಅಥವಾ ಸಮುದಾಯವನ್ನು ಕುರಿತ ಅವರ ಕಲ್ಪನೆ ಎಷ್ಟೊಂದು ವಿಸ್ತಾರವಾಗಿದೆ ಎಂದರೆ, ಅದು ಸಾಮಾಜಿಕ ಚಲನೆಯನ್ನು ಒಳಗೊಂಡಿತು. ಸಾಂಘಿಕ ಪ್ರವೃತ್ತಿ ಕಲ್ಪನೆ ಸ್ವರೂಪವು ಗಹನವಾಗಿದೆ ಮತ್ತು ಮನೋ ವೈಜ್ಞಾನಿಕವಾಗಿದೆ ಎಂದು ಹೇಳಿದ್ದಾರೆ.

ತೀರಾ ಈಚಿನವರೆಗೆ ಮ್ಯಾಕ್ಸ್ ವೇಬರ್ ಅವರ ಪ್ರಭಾವವು ಅಮೇರಿಕಾದ ಸಮಾಜಶಾಸ್ತ್ರದ ಮೇಲೆ ಬೀಳಲಿಲ್ಲವಾದರೂ ಮ್ಯಾಕ್ಸ್‌ವೇಟರ್ ಅವರ ಸಾಮಾಜಿಕ ಪರಿವರ್ತನೆಯ ಅಧ್ಯಯನವು ಕೇವಲ ಪಾರ್ಶ್ವಿಕ ಮಹತ್ವದ್ದಲ್ಲಿ. ಆದರೆ ಅತ್ಯಂತ ಮಹತ್ವದಾಗಿದೆ ಎಂದು ಸಾಮಾಜಿಕ ಚಲನೆಯನ್ನು ಮುಖ್ಯ ಚಲನೆಯನ್ನಾಗಿ ಅಧ್ಯಯನ ಮಾಡಬೇಕೆಂದು ಸೂಚಿಸಿದರು. ಸಾಮಾಜಿಕ ಕ್ರಿಯೆಯಲ್ಲಿನ ವಿಷಯನಿಷ್ಠ ವಸ್ತುವಿನ ಮೇಲೆ ಮ್ಯಾಕ್ಸ್‌ವೇಬರ್ ರವರು ನೀಡಿದ ಒತ್ತು ಸಾಮಾಜಿಕ ಕ್ರಿಯೆಯ ಆಧುನಿಕ ಸ್ವಪ್ರೇರಿತ ಸಿದ್ಧಾಂತಗಳಿಗೆ ಸವಾಲನ್ನು ಎಸೆದಿದೆ ಎಂದು ಹೇಳಿದ್ದಾರೆ. ವೇಬರ್‌ರವರು ಒಬ್ಬ ಪ್ರವಾದಿಯಂತೆ ಸಾಂಪ್ರದಾಯಿಕ ಕಟ್ಟಳೆಗಳ ಸವಾಲುಗಳಿಂದ ಜನತೆಯನ್ನು ಉದ್ಧರಿಸುತ್ತಾರೆಂದು, ಹೇಳುತ್ತಾ ಅವರು ಹಲವಾರು

ಒತ್ತಡಗಳಿಗೆ ಸಿಲುಕಿದ 'ಸಮುದಾಯ' ವನ್ನು ಅದರ ಸಂಕೋಲೆಗಳಿಂದ ವಿಮೋಚನೆಗೊಳಿಸುವ ಸಾಂಘಿಕ ಸಂಘರ್ಷವೆಂದು ಹೇಳಿದ್ದಾರೆ. ಆ ಮೂಲಕ ಒಂದು ಸಾಂಘಿಕ ಸಂಸ್ಥೆ ರೂಪುಗೊಂಡು ಹೊರಮೂಡುತ್ತದೆ. ಮತ್ತು ಅದೇ ಸಾಂಪ್ರದಾಯಿಕ ರೀತಿಯಲ್ಲಿ ಸಂಭವಿಸಬಹುದಾದ ಬೆಳವಣಿಗೆ ಯನ್ನವಲಂಬಿಸಿದೆ. ಸ್ವತಂತ್ರ್ಯವಾಗಿರುತ್ತದೆ. (೧೯೩೭ ಪು.೫೬೯. ಪಾರ್ಸನ್ಸ್)

ರಾಬರ್ಟ್ಸ್ ಇ. ಪಾರ್ಕ್ ಅವರ ಪ್ರಾಚೀನ ಕೃತಿಗಳು ಸಾಮಾಜಿಕ ವರ್ತನೆಗಳ ಅಧ್ಯಯನಕ್ಕೆ ಪ್ರೇರಣೆ, ಪ್ರೋತ್ಸಾಹಗಳನ್ನು ಒದಗಿಸಿದವು. ಪಾರ್ಕ್ ಮತ್ತು ಬರ್ಗಿಸ್ ರವರು Science of socialogy (೧೯೨೪) ಎಂಬ ಗ್ರಂಥಕ್ಕೆ ಬರೆದ ಪೀಠಿಕೆಯಲ್ಲಿ ಸಾಮೂಹಿಕ ವರ್ತನೆ (Collective Behaviour) ಎಂಬ ಭಾಗವನ್ನು ಸೇರಿಸಿದರು. ಪಾರ್ಕ್ ಮತ್ತು ಬರ್ಗಿಸ್ ಅವರು ಸಾಮೂಹಿಕ ವರ್ತನೆ ಅಥವಾ ಸಾಂಘಿಕ ಪ್ರೌವೃತ್ತಿಯ ಲಕ್ಷಣದ ಬಗ್ಗೆ ತಿಳಿಸುತ್ತಾ ಸಮಾಜಗಳು ಯಾವ ಪ್ರಾಥಮಿಕ ರಚನಾ ಭಾಗಗಳಾಗಿ ಒಡೆಯುತ್ತವೆಯೋ ಅಂಥಹ ಪ್ರಕ್ರಿಯೆಗಳು ಮೂಲಕ ಆ ಮೂಲ ವಸ್ತುಗಳು ವಿಭಜಿತವಾಗಿದ್ದವೋ ಅವೇ ಮತ್ತೆ ಹತ್ತಿರಕ್ಕೆ ತರಲ್ಪಟ್ಟು, ಹೊಸ ಸಂಬಂಧಗಳು ಕೊಡಿಕೊಂಡು ಹೊಸ ಸಂಘಟನೆಗಳಾಗಿ ಮತ್ತು ಹೊಸ ಸಮಾಜಗಳಾಗಿ ನಿರ್ಮಾಣಗೊಳ್ಳಲು ಸಹಾಯಕವಾಗುವ ಜನಾಂಗ, ಸಮುದಾಯಗಳ ವರ್ತನೆ ಅಥವಾ ಪ್ರೌವೃತ್ತಿಗಳೇ ಸಾಂಘಿಕ ಪ್ರೌವೃತ್ತಿಗಳೆಂದು ತಿಳಿಸಿರುತ್ತಾರೆ. (ಪು.೯೨೪-೯೨೫). ಈ ಪ್ರಾಚೀನ ಪರಿಶೋಧಕರು, ಸಮೂಹ ಗುಂಪು, ಸಾರ್ವಜನಿಕ ಮತ್ತು ಸಾಮಾಜಿಕ ಚಲನೆ (Mass Movement) ಗಳ ವ್ಯತ್ಯಾಸ ವೇನೆಂದು ಬಿಡಿಸಿ ತೋರಿಸಿದರು. ಅವರು ಸಾಮಾಜಿಕ ಚಲನೆಯ ಬಗ್ಗೆ ಸಾಂಘಿಕ ಪ್ರೌವೃತ್ತಿಯ ನೆಲೆಗಳ ಅಧ್ಯಯನ ವ್ಯವಸ್ಥಿತ ರೀತಿಯಲ್ಲಿ ನಡೆದಿಲ್ಲವೆಂದು ಎತ್ತಿತೋರಿಸಿದರು. (ಪು.೯೨೭) ವಿವಿಧ ಬಗೆಯ ಸಾಂಘಿಕ ಪ್ರೌವೃತ್ತಿಯ ಪ್ರಕಾರಗಳನ್ನು ತಿಳಿಸಿದು ಅವುಗಳೆಂದರೆ ಪುನರುಜ್ಜೀವನ (Revivalt) ಸುಧಾರಣೆ ಚಳುವಳಿಗಳು (Reform Movements) ಕ್ರಾಂತಿಗಳು ಮತ್ತು ವಲಸೆಗಳು.

ಹರ್ಬರ್ಟ್ ಬ್ಲೂಮರ್ ರವರು ಸಾಮಾಜಿಕ ಸ್ಥಿತ್ಯಂತಗಳನ್ನು ಒಳಗೊಂಡಂತೆ ಸಾಂಘಿಕ ಪ್ರೌವೃತ್ತಿಗಳಲ್ಲಿ ಸಮಾಜಶಾಸ್ತ್ರಜ್ಞರು ತೋರಿದ್ದ, ಆಸಕ್ತಿಯನ್ನು ಮುಂದುವರೆಸಿದ್ದಾರೆ. ಅವರು ಪಾರ್ಕ್ ಮತ್ತು ಬರ್ಗಿಸ್, ಲೆಬಾದ್, ಟ್ರೆಂಡ್, ವಿಲ್‌ಫ್ರೆಡ್ ಟ್ರಾಟರ್ ರವರ ಬರಹಗಳಿಂದ ಪ್ರಭಾವಿತರಾಗಿದ್ದಾರೆ. ಒಂದು ಪ್ರಬಲ ಭಾವಾವೇಶದ ಪ್ರಭಾವದ ಮೂಲಕ ಒಂದೇ ಒಂದು ಸಾಂಘಿಕ ಪ್ರೌವೃತ್ತಿಯು ಏಕರೂಪವಾಗಿ ಎಲ್ಲೆಡೆಗೂ ಹರಡಿದ್ದಿರಬೇಕೆಂದು ಹೇಳಿದ್ದಾರೆ. ಬ್ಲೂಮರ್ ರವರ ಸಮುದಾಯಗಳ ಸಾಂಘಿಕ ನೆಲೆ ಮತ್ತು ಸಮಾಜಶಾಸ್ತ್ರ ಶಿಕ್ಷಣದಲ್ಲಿ ಅದರ ಸ್ಥಾನದ ಬಗ್ಗೆ ವಿಸ್ತಾರವಾಗಿ ತಿಳಿಸಿದ್ದಾರೆ. ಮತ್ತು ಅನುಕರಣೆಗಿಂತಲೂ ಹೆಚ್ಚಾಗಿ ಪರಸ್ಪರ ಕ್ರಿಯೆಯ ಮೇಲೆ ಗಮನ ಹರಿಸಿದ್ದಾರೆ. ಸಾಮಾನ್ಯವಾಗಿ ಸಮಾಜಶಾಸ್ತ್ರವು ಸಮುದಾಯಗಳ ಜೀವನ ವ್ಯವಸ್ಥೆ, ಅದರ ಘಟನಕಗಳ ಅಧ್ಯಯನದ ಬಗ್ಗೆ ಆಸಕ್ತಿ ಹೊಂದಿರುತ್ತದೆ. (Customs rules, the institutions etc.,)ಸಾಮೂಹಿಕ ಸಾಂಘಿಕ ಪ್ರೌವೃತ್ತಿಯು ಹೊರಮೂಡಿದೆ ಎಂಬ ಅರ್ಥದಲ್ಲಿ ಅಸ್ತಿತ್ವಕ್ಕೆ ಬಂದಿರುವ ಸಾಮಾಜಿಕ ವ್ಯವಸ್ಥೆಯು ರೂಪಗೊಂಡ ವಿಧಾನಗಳ ಅಧ್ಯಯನಕ್ಕೆ ಸಂಬಂಧಿಸಿದೆ. ಮತ್ತು ಹೊಸ ಬಗೆಯ ಸಾಮೂಹಿಕ ಘಟನೆಗಳ ಏಕೀಕರಣಕ್ಕೆ ಸಂಬಂಧಿಸಿದೆ (ಬ್ಲೂಮರ್ ೧೯೫೧, ಪು.೧೬೯) ಅವರು ಸಾಂಘಿಕ ವರ್ತನೆಗಳನ್ನು

''ಜೀವನದ ಒಂದು ಹೊಸ ಕ್ರಮವನ್ನು ಸ್ಥಾಪಿಸಲು ಜೀವನ ಯಾತ್ರೆಯ ಒಂದು ಸಾಮಾಜಿಕ ಪ್ರಯತ್ನ'' ಎಂದು ಹೇಳಿದ್ದಾರೆ. ಪ್ರಾಚೀನ ಮಟ್ಟದಲ್ಲಿ ಸಾಂಘಿಕ ಜೀವನ, ಸಾಮಾಜಿಕ ಸಂಘಟನೆ ಒಂದು ಜೀವನದ ಯೋಜನೆಯಾಗಿ ಪರಿವರ್ತನೆಗೊಳ್ಳುತ್ತದೆ ಎಂದು ಹೇಳಿದ್ದಾರೆ. ಒಂದು ನಿರ್ದಿಷ್ಟ ಉದ್ದೇಶಕ್ಕೆ ಒಂದು ಸಮುದಾಯ, ವರ್ಗಕ್ಕೆ ಸೇರಿದ ವ್ಯಕ್ತಿಗಳು ಒಂದೇ ರೀತಿಯಾಗಿ ವರ್ತಿಸುತ್ತಾರೆ. ಆದರೆ ಅವರು ತಮ್ಮ ತಮ್ಮ ಸ್ವಂತ ನಿರ್ಣಯಕ್ಕೆ ಅನುಸಾರವಾಗಿ ವರ್ತಿಸುತ್ತಾರೆ. ಮತ್ತು ಸದಸ್ಯತ್ವದ ದೃಶ್ಯವಿಲ್ಲದೆ ಅವರು ಗುಂಪಿನಲ್ಲಿ ಒಂದಾಗಿ ದುಡಿಯುತ್ತಾರೆ ಎಂದು ಹೇಳಿದ್ದಾರೆ.

ಅಮೇರಿಕಾದ ಮತ್ತೊಬ್ಬ ಪ್ರಖ್ಯಾತ ಸಮಾಜ ವಿಜ್ಞಾನಿ ರಾಡೋಲ್ಫ್ ಹರ್ಬರೇಲ್ಸ್ ಅವರು ತಮ್ಮ Social Movements (೧೯೫೧) ಎಂಬ ಪುಸ್ತಕದಲ್ಲಿಯ ಅವರ ವಿಶ್ಲೇಷಣೆ ಸ್ವಲ್ಪಮಟ್ಟಿಗೆ ರಾಜಕೀಯ ಚಳುವಳಿಯ ಕಡೆಗೆ ಕೇಂದ್ರಿತವಾಗಿದ್ದರೂ ಅದು ಸಾಂಘಿಕ ಪ್ರೌವೃತ್ತಿಯನ್ನು ನಮ್ಮ ಕಣ್ಣಮುಂದೆ ತಂದುಕೊಂಡ ಗುರಿಯೊಂದನ್ನು ಮುಟ್ಟಲು ನಡೆಸುವ ಸಾಮೂಹಿಕ ಪ್ರಯತ್ನ ಎಂದು ಹೇಳಿದ್ದಾರೆ.

ಈ ಮೇಲಿನ ಕೆಲವು ಪ್ರಾಚೀನ ಬರಹಗಳು ವ್ಯಕ್ತಿಗಳು ಭಾಗವಹಿಸಲು ಕಾರಣವಾದ ಪ್ರೇರಣಾಶಕ್ತಿಗಳ ವಿವರಗಳನ್ನು ಪರಿಗಣಿಸುವಾಗ ಸಾಂಘಿಕ ಪ್ರವೃತ್ತಿಯ ನೆಲೆ ಪರಸ್ಪರ ಕ್ರಿಯೆಗಳ ಮತ್ತು ಪ್ರೌವೃತ್ತಿಗಳ ರೂಪಾಂತರದ ಮತ್ತು ಪರಸ್ಪರ ಕ್ರಿಯೆ ಪರಿಣಾಮವಾಗಿ ವ್ಯಕ್ತಿಗಳ ವರ್ತನೆಯ ಮತ್ತು ಮನೋಭಾವಗಳ ಕಡೆಗೆ ಗಮನವನ್ನು ಕೇಂದ್ರೀಕರಿಸುತ್ತಾರೆ. ಸಾಮಾಜಿಕ ಪರಿವರ್ತನೆಯ ವಿವರಣೆಯನ್ನು ವ್ಯಕ್ತಿಗಳ ವ್ಯಕ್ತಿತ್ವದಲ್ಲಿ ಕಾಣುವುದಿಲ್ಲ. ಆದರೆ ಅದನ್ನು ಸಾಮಾಜಿಕ ಚಲನೆಯಲ್ಲಿನ ಒಂದು ಸಾಮೂಹಿಕತೆಯಲ್ಲಿ ಕಾಣುತ್ತೇವೆ.

## ಸಾಂಘಿಕ ಪ್ರೌವೃತ್ತಿ ಬಗೆಗಿನ ಆಧುನಿಕ ಪರಿಭಾಷೆಗಳು

ಬ್ಲೂಮರ್ ರವರು ಸಾಂಘಿಕ ಪ್ರಯತ್ನವನ್ನು ''ಒಂದು ಹೊಸ ಜೀವನ ಮಾರ್ಗವೊಂದನ್ನು ಸ್ಥಾಪಿಸಲು ನಡೆಸುವ ಒಂದು ಸಾಮೂಹಿಕ ಪ್ರಯತ್ನ ಎಂದು ಹೇಳಿದ್ದಾರೆ. ಹೆಬರ್ಲೇ ಅವರು ಕೂಡ ಇದೇ ದಾಟಿಯಲ್ಲಿ ಸಾಂಘಿಕ ನೆಲೆಯ ಮುಖ್ಯಮಾನದಂತವೆಂದರೆ, ಅದು ಸಾಮಾಜಿಕ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಗಳನ್ನು ತರಲು ಸಾಂಘಿಕ ಪ್ರಯತ್ನ ಉದ್ದೇಶಿಸುತ್ತದೆ ಎಂದು ಹೇಳಿದ್ದಾರೆ. ''ಉದ್ದೇಶಿತ ಗುರಿಗಳನ್ನು ತಲುಪಲು ಅದರಲ್ಲಿಯೂ ವಿಶೇಷವಾಗಿ ಕೆಲವು ನಿರ್ದಿಷ್ಟ ಸಾಮಾಜಿಕ ಚಟುವಟಿಕೆಗಳಲ್ಲಿ ಬದಲಾವಣೆ ಮಾಡಲು ನಡೆಸುವ ಸಾಮೂಹಿಕ ಪ್ರಯತ್ನ ಎಂದು ಹೇಳಿದ್ದಾರೆ''. ಲ್ಯಾಂಗ್ ಮತ್ತು ಲ್ಯಾಂಬ್ ಅವರು ''ಒಂದು ಬಗೆಯ ಮೂಲಭೂತವಾದ ರೀತಿಯಲ್ಲಿ ಸಾಮಾಜಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರುವ ಮತ್ತು ರೂಪಿಸುವಂತಹ ಒಂದು ಉದ್ದೇಶವನ್ನು ಅರಸುವಂತಹ ಭಾರೀ ಪ್ರಮಾಣದ ವ್ಯಾಪಕ ವಿಸ್ತಾರದ ಮತ್ತು ಅವಿಚ್ಛಿನ್ನವಾಗಿ ಮುಂದುವರೆಯುವ ಸಾಮೂಹಿಕ ಯತ್ನವೇ ಸಾಂಘಿಕ ಪ್ರೌವೃತ್ತಿ ಎಂದು ಹೇಳಿದ್ದಾರೆ. ಸಿ. ವೆಂಡಲ್ ಕಿಂಗ್ ರವರು ''ಒಂದು ಸ್ಥಳೀಯ ಸಮುದಾಯದ ಆಚೆಗೂ ವಿಸ್ತರಿಸುವ, ಒಂದು ಸಾಮೂಹಿಕ ಸಾಹಸವೆಂದೂ ಅಥವಾ ಒಂದೇ ಘಟನೆಯಾಗಿದೆ ಮತ್ತು ಚಿಂತನೆ, ವರ್ತನೆ ಮತ್ತು

ಸಾಮಾಜಿಕ ಸಂದರ್ಭಗಳಲ್ಲಿ ಬದಲಾವಣೆಗಳನ್ನು ತರುವಂತಹ ಒಂದು ಸಾಮೂಹಿಕ ಪ್ರಯತ್ನ ಎಂದು ಹೇಳಿದ್ದಾರೆ. ಟರ್ನ್‌ರ್ ಮತ್ತು ಕಿಲಿಯನ್ ರವರು ಅತ್ಯಂತ ವ್ಯಾಪಕವಾದ ಪರಿಭಾಷೆಯನ್ನು ಮಂಡಿಸಿದ್ದಾರೆ. (A collectivity acting with some continuity to promote or resist a change, in the society or group of which it is a part) (ಒಂದು ಸಾಮಾಜದಲ್ಲಿ ಅಥವಾ ಅದು ಯಾವುದರ ಒಂದು ಭಾಗವಾಗಿದೆಯೋ ಆ ವರ್ಗದಲ್ಲಿ ಒಂದು ಬದಲಾವಣೆಯನ್ನು ತರಲು ಅಥವಾ ತಡೆಯಲು ಅವಿಚ್ಛಿನ್ನವಾಗಿ ಸಾಮೂಹಿಕ ನಡೆಸುವ ಕಾರ್ಯ) ಎಂದಿದ್ದಾರೆ. (೧೯೫೭, ಪು.೩೦೮)

ಈ ಎಲ್ಲಾ ಪರಿಭಾಷೆಗಳಲ್ಲಿ ಎರಡು ಸಾಮಾನ್ಯ ಸಂಗತಿಗಳಿವೆ. ಇವುಗಳೆಲ್ಲವಕ್ಕೂ ಪ್ರಮುಖ ಸಂಗತಿ ಎಂದರೆ ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರ ಕ್ರಿಯೆಯಲ್ಲಿ ಭಾಗವಹಿಸುವ ಮಾನವನ ಸಾಮೂಹಿಕ ಪ್ರಯತ್ನ. ಮಾನವನ ಸಾಮೂಹಿಕ ಪ್ರಯತ್ನದ ಕ್ರಿಯೆಗಳೆಲ್ಲವನ್ನು ಈ ಪರಿಭಾಷೆಗಳು ದೃಢೀಕರಿಸುತ್ತವೆ. ಬದಲಾವಣೆಗಳಿಗೆ ಮತ್ತು ವರ್ತನೆಗಳಿಗೆ ಪ್ರೇರಣೆ ನೀಡುವ ಅಥವಾ ತಡೆಯುವ ಕಾರ್ಯವು ಸಾಮೂಹಿಕವಾಗಿರುತ್ತದೆ.

## ಸಾಂಘಿಕ ಪ್ರವೃತ್ತಿಯ ಪ್ರಮುಖ ಲಕ್ಷಣಗಳು

೧. ಹಂಚಿಕೊಂಡ ಗುರಿಗಳ ಅಸ್ಥಿತ್ವ - ಒಂದು ಗುರಿ ಅಥವಾ ಉದ್ದೇಶ ಪರಸ್ಪರ ಸಹಕಾರದಿಂದ ಒಂದು ನಿರ್ದಿಷ್ಠ ಗುರಿ.

೨. ಸದಸ್ಯತ್ವದ ಬಂಧನ - ತಮ್ಮ ಪರವಾಗಿರುವವರ ಮತ್ತು ವಿರೋಧವಾಗಿರುವವರ ನಡುವಣ ವ್ಯತ್ಯಾಸ.

೩. ಸಾಂಘಿಕ ಚೌಕಟ್ಟಿನ ಅನುಯಾಯಿಗಳ ಪಾಲನೆ - ಒಟ್ಟಾಗಿ ಹೇಗೆ ಕಾರ್ಯನಿರ್ವಹಿಸಬೇಕೆಂಬ ತಿಳುವಳಿಕೆ, ಹೊರವರ್ಗಗಳ ಪರಿಭಾಷೆ ಮತ್ತು ಅವರೊಡನೆ ಹೇಗೆ ವರ್ತಿಸಬೇಕು ಎಂಬ ಬಗ್ಗೆ ತಿಳುವಳಿಕೆ ಹಂಚಿಕೊಳ್ಳುವಿಕೆ.

೪. ನಾಯಕರು ಮತ್ತು ಸದಸ್ಯರ ನಡುವೆ ಬಾಂಧವ್ಯ - ಪ್ರತಿಯೊಂದು ವಿಭಾಗಕ್ಕೂ ನಿರ್ದಿಷ್ಟದ ಕೆಲಸ ಕಾರ್ಯಗಳ ರಚನೆ ಮತ್ತು ವಿಭಜನೆ.



ಒಂದು ಸಾಂಘಿಕ ಪ್ರವೃತ್ತಿ ಮತ್ತು ಸಾಂಸ್ಕೃತಿಕ ಬದಲಾವಣೆಯ ನಡುವೆ ನಿಕಟ ಸಂಬಂಧವಿದೆ. ಆದರೆ ಅವು ಸಾಮಾಜಿಕ ವಾಸ್ತವತೆಯ ಮತ್ತು ಅಧ್ಯಯನದ ಬಿನ್ನವಾದ ಮುಖಗಳನ್ನು ರೂಪಿಸುತ್ತದೆ. ನಾವು ಸಾಂಸ್ಕೃತಿಕ ಬದಲಾವಣೆಯ ಸರಣಿಯನ್ನು ಕಾಣಬಹುದು. ಅವುಗಳನ್ನು ಪ್ರವೃತ್ತಿಗಳಿಂದಾಗಲೀ, ಅವಿಷ್ಕಾರಗಳೆಂದಾಗಲಿ ಅಥವಾ ಕ್ರಾಂತಿ ಎಂದು ಹೆಸರಿಸಬಹುದು. ಅಲ್ಲದೆ ಅದನ್ನೂ ನಾವು ಸಂಸ್ಕೃತಿ ತಳಹದಿ (Culture Bare) ಎಂದು ವರ್ಣಿಸಬಹುದು.

General Social Movement take the form of grouping and un-co-ordinated efforts. They have only a general directions, towards which they move in a slow, halting yet persistent fashion. As movements they are un-orgonised, with neither established leadesrhip nor recognised membership and little guidence or control. (ಸಾಮಾನ್ಯ ಉದ್ದೇಶಿತ ಸಾಂಘಿಕ ಪ್ರವೃತ್ತಿ ತಡವರಿಸಿಕೊಂಡು ಮುಂದುವರೆಯುತ್ತದೆ. ಮತ್ತು ಅವುಗಳಲ್ಲಿ ಯಾವ

ಬಗೆಯ ಸಂಘಟಿತ ಪ್ರಯತ್ನವೂ ಇರುವುದಿಲ್ಲ. ಅವುಗಳಿಗೆ ಕೇವಲ ಒಂದು ಸಾಮಾನ್ಯ ನಿರ್ದೇಶನವಿರುತ್ತದೆಯೆಷ್ಟೆ. ಆ ದಿಸೆಯತ್ತ ಅವು ನಿಧಾನವಾಗಿ ನಿಂತು ನಿಂತು ಮುಂದುವರೆಯುತ್ತವೆ. ಆದರೆ ಆ ನಡಿಗೆ ನಿರಂತರವಾಗಿ ಮುಂದುವರೆಯುತ್ತಲೇ ಇರುತ್ತದೆ. ಅದರ ನಾಯಕತ್ವಕ್ಕೆ ಯಾರ ಮನ್ನಣೆಯೂ ಬೇಕಾಗಿಲ್ಲ. ಅದರಲ್ಲಿನ ಸದಸ್ಯತ್ವಕ್ಕೆ ಯಾರ ಮಾನ್ಯತೆಯೂ ಬೇಕಾಗಿಲ್ಲ. ಮತ್ತು ಅದಕ್ಕೆ ಯಾವುದೇ ಮಾರ್ಗದರ್ಶನವಾಗಲಿ ನಿಯಂತ್ರಣವಾಗಲಿ ಅವಶ್ಯಕವಿಲ್ಲ. (ಬ್ಲೂಮರ್ ೧೯೫೧, ಪು.೨೦೦)

ಕ್ರಮಕ್ರಮವಾಗಿ ನಡೆಯುವ ಮತ್ತು ಸಂಚಿತಗೊಳ್ಳುತ್ತಲೇ ಹೋಗುವ ಸಾಂಘಿಕ ಪ್ರೌವೃತ್ತಿಯಲ್ಲಿನ ಸ್ಥಿತ್ಯಂತರಗಳು ಒಟ್ಟಾಗಿ ಸಾಂಸ್ಕೃತಿಕ ಪ್ರವಾಹಗಳನ್ನೇ ನಿರ್ಮಿಸುತ್ತವೆ. ಮತ್ತು ನವೀನ ಸ್ವಪ್ರಯತ್ನದಿಂದ ಪಡೆದ ಕಲ್ಪನೆಗಳನ್ನು ಹೊಸ ಆಸೆ ಆಕಾಂಕ್ಷೆಗಳನ್ನಾ ಮತ್ತು ಹೊಸ ಭರವಸೆಗಳನ್ನು ನೂತನ ಚಾಲನೆಯನ್ನು ಕೊಡುತ್ತವೆ. ಎಲ್ಲೆಲ್ಲೋ ಚದುರಿಕೊಂಡಿರುವ ಹಲವಾರು ವ್ಯಕ್ತಿಗಳು ವಿವಿಧ ರೀತಿಯಲ್ಲಿ ಈ ಅಭಿಪ್ರಾಯಗಳನ್ನು ವಿಚಾರಗಳನ್ನು ವ್ಯಕ್ತಿಪಡಿಸುವುದರಿಂದ ಒಂದು ಸಾಮಾನ್ಯ ಚಳುವಳಿ ಅಥವಾ ಸಂಘಟಿತ ಹೋರಾಟ ರೂಪಗೊಳ್ಳುತ್ತದೆ. ಮಹಿಳಾ ಚಳುವಳಿ ಕಾರ್ಮಿಕ ಚಳುವಳಿ ಅಥವಾ ನೆಲೆಸುನಾಡಿನ ಪದ್ದತಿ ವಿರೋಧಿ ಚಳುವಳಿ ಹೊರಹೊಮ್ಮುತ್ತದೆ. ಆದರೆ ಬ್ಲೂಮರ್ ಒತ್ತಿಹೇಳಿರುವಂತೆ ''ಸಾಮಾನ್ಯವಾದ ಸಾಮಾಜಿಕ ವರ್ತನೆ ಅಥವಾ ಪ್ರವೃತ್ತಿ ಎನ್ನುವುದು ಬಹಳ ಮಟ್ಟಿಗೆ ಸಮೂಹ ವರ್ತನೆಯಿಂದ ಬಹಳಷ್ಟು ಪ್ರಭಾವಿತವಾಗಿರುತ್ತದೆ. ವ್ಯಕ್ತಿಗತ ನಿರ್ಣಯಗಳು ಮತ್ತು ಆಯ್ಕೆಗಳ ಮೇಲೆ ಆಧಾರಿತವಾದ ಸಾಮೂಹಿಕ ವ್ಯಕ್ತಿಗಳ ಕ್ರಿಯೆ ಚಟುವಟಿಕೆಗಳ ಸಮೂಹೀಕರಣವೇ ಆಗುವ ಸಾಧ್ಯತೆ ಇದೆ. (ಬ್ಲೂಮರ್ 1951 ಪು. 20). The general social movement is dominated to a large extent by the mechims of mass behaviour.....( it is) likely to be merely an agregation of mass individual times of action based on individual decisions and selections.

## ಸಾಂಘಿಕ ಪ್ರೌವೃತ್ತಿಗಳ ಬೆಳವಣಿಗೆ :

ಸಾಂಘಿಕ ಪ್ರಯತ್ನ ಅಥವಾ ಪ್ರೌವೃತ್ತಿಗಳು ಏನೂ ಇಲ್ಲದ ನಿರ್ವಾತ ಪ್ರದೇಶದಂತೆ ರೂಪುಗೊಳ್ಳುವುದಿಲ್ಲ. ಒಂದು ಸಾಮಾಜಿಕ ಚಳುವಳಿಯ ಸದಸ್ಯರು ಒಂದು ಸಮಾಜದ ಸದಸ್ಯರೂ ಆಗಿರುತ್ತಾರೆ. ಮತ್ತು ಅವರು ಅ ಸಮಾಜದೊಳಗೆ ಒಂದು ಅಥವಾ ಹೆಚ್ಚಿನ ವರ್ಗಗಳ ಸದಸ್ಯರೂ ಆಗಿರುತ್ತಾರೆ. ಪ್ರತಿಯೊಂದಕ್ಕೂ ಅವರದ್ದೇ ಆದ ನಿರ್ದಿಷ್ಠ ಸಂಘಟನೆ ಅಥವಾ ಒಂದು ಗುಂಪು, ಸಮುದಾಯ ಇರುತ್ತದೆ. ಹಾಗೆನೇ ರೂಢಿಗಳು , ಪದ್ಧತಿಗಳು, ನಿಯಮಗಳು ಇರುತ್ತವೆ. ನಿರ್ದಿಷ್ಟ ಗುರಿಹೊಂದಿರುವ ಸಂಘದ ಸದಸ್ಯರು ಸಂಘಟನೆಯನ್ನು ಪರಿಷ್ಕರಿಸಲು, ಸಂರಕ್ಷಿಸಲು ಅಥವಾ ಪೂರ್ವಸ್ಥಿತಿಗೆ ತರಲು ಸಾಮೂಹಿಕವಾಗಿ ಪ್ರಯತ್ನಿಸುವುದರಿಂದ ಮತ್ತು ಈ ಸ್ಥಾಯಿವಾದ, ಪೂರ್ವಭಾವಿ ಅಸ್ಥಿತ್ವದಲ್ಲಿರುವ ವರ್ಗಗಳ ರೂಢಿಗತ ವ್ಯವಸ್ಥೆಯಿಂದಾಗಿ ಅವರು ಈ ಸಾಮಾಜಿಕ ಚಳುವಳಿಯಲ್ಲಿ ಪಾಲುದಾರರಂತೆ ಭಾಗವಹಿಸುತ್ತಾರೆ. ಒಂದು ಸಾಂಘಿಕ ನೆಲೆಯ ಚೌಕಟ್ಟಿನ ಒಳಗಡೆ ಸದಸ್ಯರು ಭಿನ್ನವಾಗಿ ಸಂಬಂಧ ಪಡದ ಸದಸ್ಯರಾಗಿ ಭಾಗವಹಿಸದೆ ಅವರು ಆಯಾ ವರ್ಗದ ಚಳುವಳಿಯ ಅಂತಿಮ ಉತ್ಪಾದನೆಗಳಲ್ಲಿ ಹೊಸ ಸಂಸ್ಥೆಗಳ ಹಾಗೂ ಹೊಸ ಬಗೆಯ ಸಾಂಘಿಕ ಪ್ರವೃತ್ತಿಯನ್ನು ತರುವ ಮೂಲಕ ಅದರ ಸ್ಥಾಯೀಕರಣಗಳೇ ಅದರ ಅಂತಿಮ ಸಾಧನೆಗಳಾಗಿವೆ.

ಜನಸಂದಣಿ ಅದು ಎಷ್ಟೇ ಅರಾಜಕವಾಗಿರಲಿ, ಜಾಳು ಜಾಳಾಗಿರಲಿ ಅದು ಮುಖ್ಯವಾಗಿ ಅದರ ತಾತ್ಕಾಲಿಕ ಅವಧಿಯಿಂದಾಗಿ ಮತ್ತು ಅದರ ಉದ್ದೇಶಗಳ ವ್ಯಾಪಕತೆಯಿಂದಾಗಿ ಸಾಂಘಿಕ ನೆಲೆಗಿಂತಲೂ ಭಿನ್ನವಾಗಿರುತ್ತದೆ. ಜನಜಂಗುಳಿಯು ಕೇವಲ ಅಲ್ಪಕಾಲಿಕವಾದುದು. ಅದರ ಒಟ್ಟಾರೆ ಉದ್ದೇಶ ಏನೆಂಬುದನ್ನು ತಕ್ಷಣವೇ ಅಳೆಯುವಂಥಹದು ಮತ್ತು ಅದರ ಧ್ಯೇಯೋದ್ದೇಶಗಳು ಕೂಡ ಸೀಮಿತವಾಗಿರುತ್ತವೆ. ಇದಕ್ಕೆ ನಿರ್ದಿಷ್ಟ ಸ್ಥಾಯೀ ರೂಪದ ಸ್ವರೂಪ ಇರುವುದಿಲ್ಲ. ಅಲ್ಲದೆ ಸಾಂಘಿಕ ಪ್ರವೃತ್ತಿಯ ವಿಶಿಷ್ಟ ಗುಣ ಧರ್ಮವಾದ ಸ್ಥಿತ್ಯಂತರದ ಕಾರ್ಯಕ್ರಮ ಮತ್ತು ವ್ಯಾಪಕ ಟೆಡಿಯಾಲೋಜಿಯನ್ನು ರೂಪಿಸಲಾರದು.

ಜನಜಂಗುಳಿಗೂ ಸಾಂಘಿಕ ಸ್ಥಾಯೀರೂಪದ ರಚನೆಗೂ ಅನೇಕ ರೀತಿಯಲ್ಲಿ ಸಂಬಂಧಗಳಿವೆ. ಚಳುವಳಿ ರೂಪುಗೊಳ್ಳಲು ಕಾರಣ ಉದ್ರೇಕವಾಗಿರಬಹುದು. ಮತ್ತು ಏಕತೆಯ ಭಾವನೆ ಇರಬಹುದು. ಈ ಅರ್ಥದಲ್ಲಿ ಜನ ಜಂಗುಳಿ ಅಥವಾ ಜನ ಸಂದಣಿ ಎನ್ನುವದು ಸಾಂಘಿಕ ಪ್ರವೃತ್ತಿಯಲ್ಲಿನ ಒಂದು ಹಂತವಾಗಿರಬಹುದು. ಸಾಂಘಿಕ ನೆಲೆ ನಿರ್ಮಾಣವಾಗಬಲ್ಲ ಕಲ್ಪನೆಯಾಗಿರಬಹುದು. ಇದೇ ಬಗೆಯ ಉದ್ದೇಶದಿಂದ ಬೆಳೆಯಬಹುದು. ಹೋರಾಟದ ತಂತ್ರಗಳ ಉತ್ತೇಜನಕ್ಕೆ ನಾಂದಿಯಾಗಬಹುದು. ಆದ್ದರಿಂದ ಜನಸಂದಣಿಗಳು ಸಾಂಘಿಕ ಪ್ರವೃತ್ತಿಯ ಬೆಳವಣಿಗೆಯ ಪ್ರಾಥಮಿಕ ಹಂತದಲ್ಲಿ ಬಹುಮುಖ್ಯವಾದ ಭಾಗಗಳಾಗಿರುತ್ತವೆ.

ಸಾಂಘಿಕ ಪ್ರವೃತ್ತಿ ಮತ್ತು ಸಾರ್ವಜನಿಕರಿಗೆ ಅಂತರಂಗದಲ್ಲಿ ಮೂಲ ಬೀಜಗಳಿರುತ್ತವೆ. ಸಾಮಾನ್ಯವಾಗಿ ಸಮಾನ ಸ್ಥಾನ ಹೊಂದಿರುವವರು ಅವರ ನಿರ್ಣೀತ ಅಭಿಪ್ರಾಯ ಪರಿಣಾಮಕಾರಕ ರೀತಿಯಲ್ಲಿ ಒತ್ತಾಸೆ ನೀಡಲು ಕೆಲವು ಸಂಘಟನೆಗಳೊಂದಿಗೆ ಅನೌಪಚಾರಿಕವಾಗಿ ಖುದ್ದಾಗಿ ಸಂದಿಸಿ ಚರ್ಚಿಸಿ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಹೆಚ್ಚು ಹೆಚ್ಚಾಗಿ ತಿಳಿಗೊಳಿಸಬಹುದು. ಹೆಚ್ಚು ಸಮರ್ಥವಾಗಿ ಕ್ರಿಯಾ ಚಟುವಟಿಕೆಗಳು ನೆರವೇರುವಂತೆ ಮಾಡಲು ಭರವಸೆ ನೀಡಬಹುದು. ಆಗ ಒಂದು ಸಾಮಾಜಿಕ ಚಳುವಳಿಯು ರೂಪಗೊಳ್ಳಬಹುದು. (ಟರ್ನರ್ ಮತ್ತು ಕಿಲಿಯದ್ ೧೯೭೭, ಪು.೩೦೭) ಕೆಲವೊಮ್ಮೆ ಸಾರ್ವಜನಿಕರಲ್ಲಿನ ಒಂದು ಭಾಗದಲ್ಲಿನ ಜನರು ತಮ್ಮ ಅಭಿಪ್ರಾಯಗಳನ್ನು ಮಾತ್ರ ನ್ಯಾಯೋಜಿತವಾದವುಗಳೆಂಬ ನಿರ್ಣಯಕ್ಕೆ ತಲುಪಬಹುದು. ಮತ್ತು ಅದಕ್ಕೆ ಭಿನ್ನಾಭಿಪ್ರಾಯ ಮೂಡಿದರೆ ಅವರು ಸಹಿಸಲಾರರು. ಇದರ ಫಲವಾಗಿ ಅದು ಕಾರ್ಯನಿರ್ವಹಿಸಲು ಒಂದು ನಿರ್ದಿಷ್ಟ ಕಾರ್ಯ ಸೂಚಿಯನ್ನು ರೂಪಿಸಿಕೊಳ್ಳಲು ಅನಿವಾರ್ಯವಾಗಬಹುದು. ಸಮಸ್ಯೆಗೆ ಸಂಬಂಧಿಸಿದಂತೆ ಸಾರ್ವಜನಿಕರಲ್ಲಿ ಅಭಿಪ್ರಾಯಗಳು ಮತ್ತೆ ಮತ್ತೆ ಬೆಳೆಯುತ್ತಲೇ ಹೋಗಬಹುದು. ಹೀಗಾಗಿ ಸಾರ್ವಜನಿಕರ ಈ ವಲಯ ಸಾಂಘಿಕ ಪ್ರವೃತ್ತಿಯ ಒಂದು ಬಹುಮುಖ್ಯ ನೆಲೆಯಾಗಿ ಪರಿಣಮಿಸುತ್ತದೆ.

ಸಾಂಘಿಕ ಪ್ರವೃತ್ತಿಗೆ ಮತ್ತೊಂದು ಬಹುಮುಖ್ಯ ಕಾರಣ ಸಮಸ್ಯೆ. ಈ ಸಮಸ್ಯೆ ವೈಯಕ್ತಿಕವಾಗಿರಬಹುದು ಇಲ್ಲವೆ ಸಾರ್ವಜನಿಕವಾಗಿರಬಹುದು. ಈ ಸಮಸ್ಯೆಯ ಭೀಕರತೆಯಿಂದಾಗಿ ಸಾರ್ವಜನಿಕ ಗುಂಪಾಗಿ ಒಂದೆಡೆ ಸೇರುವುದು ಒಟ್ಟಾಗಿ ಸಮಸ್ಯೆಯ ಬಗ್ಗೆ ಚರ್ಚಿಸುವುದು. ಸಮಸ್ಯೆ ಬಗೆಹರಿಸಲು ಕಾರ್ಯತಂತ್ರ ರೂಪಿಸುವುದು ಅನಿವಾರ್ಯ ಆಗುತ್ತದೆ. ಅದರ ಮೌಲ್ಯಗಳಿಗಾಗಿ ಮತ್ತು ಅದೇ ಈ ಮೌಲ್ಯಗಳ

ನ್ಯಾಯೋಜಿತ ಪ್ರವರ್ತಕರು ಎಂಬುದಕ್ಕೆ ವ್ಯಾಪಕವಾಗಿ ಜನರ ಒಪ್ಪಿಗೆ ದೊರೆತಾಗ ಅದರ ಹೆಚ್ಚಿನ ಕಾರ್ಯ ಚಟುವಟಿಕೆಗಳು ಅನುಕೂಲಕರವಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದರತ್ತ ನಿರ್ದೇಶಿತವಾಗಿರುತ್ತವೆ.

ಆದ್ದರಿಂದ ಸಾಂಘಿಕ ಚಳುವಳಿಯ ನಾಯಕರು ತಾವು ಪರಿವರ್ತಿಸ ಬಯಸುವ ಮೌಲ್ಯಗಳಿಗೆ ಸಂಬಂಧಿಸಿದ ಸಾರ್ವಜನಿಕರನ್ನು ತಯಾರಿಸುವ ಪ್ರಯತ್ನವನ್ನು ಉದ್ದೇಶ ಪೂರ್ವಕವಾಗಿಯೇ ಮಾಡಬಹುದು. ಸಮಾನ ಸಂಪರ್ಕ ಸಾಧ್ಯವಿರುವ ಪ್ರಸಕ್ತ ಸಂದರ್ಭದಲ್ಲಿ ನಾಯಕರು ದೂರದರ್ಶನ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅವಕಾಶ ದೊರೆತ ಸಂತೋಷದತ್ತ ಹಾರುತ್ತಾರೆ. ಅಥವಾ ನಿಯತ ಕಾಲಿಕಗಳಲ್ಲಿ ಲೇಖನಗಳನ್ನು ಬರೆದು ಪ್ರಚಾರ ಪಡೆಯುತ್ತಾರೆ. ಇಲ್ಲಿ ಪ್ರೇಕ್ಷಕರಲ್ಲಿ ಪರ, ವಿರೋಧ ವ್ಯಕ್ತವಾಗುವುದು. ಇವರಿಗೆ ಅಷ್ಟು ಮಹತ್ವವಿಲ್ಲ. ಪ್ರಚಾರವಿಲ್ಲದೇ ಏನಾದರೂ ಆಗಲೀ ಅವರಿಗೆ ಪ್ರಚಾರ ಮಾತ್ರ ಮುಖ್ಯವಾಗಿರುತ್ತದೆ.

ಒಟ್ಟಿನಲ್ಲಿ ಇಲ್ಲಿ ನನ್ನ ಅಧ್ಯಯನವು ಸಾಂಘಿಕ ನೆಲೆ ಅಥವಾ ಪ್ರೌವೃತ್ತಿಯನ್ನೇ ಆಧಾರವಾಗಿಟ್ಟು ಕೊಂಡಿದೆಯಾದರೂ ಈ ಚಳುವಳಿಯು ಪ್ರತ್ಯೇಕವಾಗಿರಲಾರದು. ಯಾವುದೇ ಸಾಂಘಿಕ ಚಳುವಳಿಯೇ ಆದರೂ ಅದು ಪ್ರಸಕ್ತ ಸಂದರ್ಭದ ಸಾಮಾಜಿಕ ಒಟ್ಟಾರೆ ಆದರೂ ಅದು ಪ್ರಸಕ್ತ ಸಂದರ್ಭದ ಸಾಮಾಜಿಕ ಒಟ್ಟಾರೆ ಚೌಕಟ್ಟಿನೊಳಗೇನೇ ರೂಪುಗೊಳ್ಳುತ್ತದೆ. ಆಗ ಅದರ ಸಂಸ್ಥೆಗಳು ಮತ್ತು ಅಸೋಷಿಯೇಷನ್‌ಗಳು ಬದಲಾವಣೆಗೊಳ್ಳುತ್ತವೆಯಾದರೂ ಅವು ಇಲ್ಲಿ ಇರುತ್ತವೆ ಎಂಬುದು ಮಾತ್ರ ಸತ್ಯವಾದುದು. ಸಾಮಾಜಿಕ ಚಳುವಳಿ ಜನಜಂಗುಳಿ, ಸಾರ್ವಜನಿಕರು ಮತ್ತು ಅತ್ಯಂತ ಪ್ರಮುಖವೆಂದರೆ ಇಂತ ಸಾಂಘಿಕ ಪ್ರೌವೃತ್ತಿಗಳ ಜೊತೆ ಜೊತೆಯಲ್ಲಿಯೇ ಇರುತ್ತದೆ. ಅನ್ಯವರ್ಗಗಳೊಡನೆ ಈ ಎಲ್ಲಾ ಸಹ ಸಂಬಂಧಗಳನ್ನು ಗಮನಿಸುವ ಅವಶ್ಯಕತೆ ಇದೆ.

**ಸಾಂಘಿಕ ಚಳುವಳಿಯ ಅನುಸಾಂಘಿಕತೆ :**

ಸಾಮಾಜಿಕ ವ್ಯವಸ್ಥೆ ಮತ್ತು ಸಾಮಾಜಿಕ ಸ್ಥಿತ್ಯಂತರ ಮತ್ತು ಇವುಗಳ ನಡುವೆ ಇರುವ ಸಂಬಂಧಗಳ ಕುರಿತು ವಿವರಿಸುವುದು ಪ್ರಮುಖವಾಗಿರುತ್ತದೆ. ಇದು ಸಮಾಜಶಾಸ್ತ್ರದ ಅತ್ಯಂತ ಪ್ರಮುಖ ಕಾರ್ಯಗಳಲ್ಲಿ ಒಂದಾಗಿದೆ. ಇಲ್ಲಿಂದಲೇ ಸಾಮಾಜಿಕ ಜೀವನ ಬೆಳೆದು ಜನತೆಯ ಬೇಕು, ಬೇಡಗಳನ್ನು ಪೂರೈಸುತ್ತದೆ. ಅವುಗಳಲ್ಲಿ ಇಲ್ಲದೆ ಅಗತ್ಯಗಳಿಲ್ಲದಿದ್ದರೆ ಪ್ರವೃತ್ತಿ ಕ್ರಿಯೆಗಳನ್ನು ಅದು ಎದುರಿಸಬೇಕಾಗುತ್ತದೆ. ಅದೇ ಸಂದರ್ಭದಲ್ಲಿ ಸಮಾಜೀಕರಣ ಪ್ರಕ್ರಿಯೆಯು ಬೇರೆ ಅಗತ್ಯಗಳನ್ನು ನಿರ್ಮಿಸುತ್ತದೆ. ಈ ಅಗತ್ಯಗಳನ್ನು ಸಾಮಾಜಿಕ ವ್ಯವಸ್ಥೆಯು ಪೂರೈಸಿ ಮನುಷ್ಯನ ಜೀವಜನ್ಮ, ಸಮಾಜ ಜನ್ಮಗಳನ್ನು ಪೂರೈಸುವಂತೆ ಸಾಮಾಜಿಕ ವ್ಯವಸ್ಥೆಯ ತೃಪ್ತಿಕರವಾಗಿ ಕಾರ್ಯನಿರ್ವಹಿಸಿದ ಪಕ್ಷದಲ್ಲಿ ಆಗ ಸಾಂಘಿಕ ಚಳುವಳಿಯೇ ಸಂಭವಿಸುವುದು ಮತ್ತು ಹೀಗಾದಾಗ ಸಾಮಾಜಿಕ ಬದಲಾವಣೆಯೂ ಆಗಿರುವುದಿಲ್ಲ.

ಇನ್ನೊಂದೆಡೆ ಜೈವಿಕ ಸ್ವರೂಪವು ಕಾಲಕಾಲಕ್ಕೆ ಗಮನಾರ್ಹ ರೀತಿಯಲ್ಲಿ ಬದಲಾಗುತ್ತಿರುವುದು ಕಂಡು ಬಂದರೆ, ಆಗ ಸಾಮಾಜಿಕ ಚಳುವಳಿಯ ರಚನಾ ಕ್ರಮವು ಕೇವಲ ಮನುಷ್ಯನ ಬದಲಾಗುತ್ತಿರುವ ಆಂತರಿಕ ಅಗತ್ಯಗಳಿಗೆ ಅನುಗುಣವಾಗಿ ರೂಪಗೊಳ್ಳುತ್ತದೆ. ಜನತೆ ತಮ್ಮ ಅಗತ್ಯಗಳನ್ನು ಪೂರೈಸಿಕೊಂಡು ತೃಪ್ತರಾಗುವಂತೆ ಸಾಮಾಜಿಕ ವ್ಯವಸ್ಥೆಯು ಅವರ ಸ್ವಯಂ ಸ್ಫೂರ್ತಿ ಸ್ವಾಭಾವಿಕ ಜೈವ ನಿರ್ಧಾರಿತ ಮತ್ತು ಈ ಅಗತ್ಯಗಳ ಪ್ರತಿಬಿಂಬವಾಗಿರುವುದಿಲ್ಲ. ಅಥವಾ ಅದೇ ರಾಷ್ಟ್ರೀಯ ರೀತಿಯಲ್ಲಿ ಯೋಚಿತವಾಗಿರುವುದಿಲ್ಲ. ಕೇವಲ ಮನುಷ್ಯನ ಬದಲಾಗುತ್ತಿರುವ ಆಂತರಿಕ ಅಗತ್ಯಗಳಿಗೆ ಅನುಗುಣವಾಗಿ ರೂಪಗೊಳ್ಳುತ್ತದೆ. ಜನತೆ ತಮ್ಮ ಅಗತ್ಯಗಳನ್ನು ಪೂರೈಸಿಕೊಂಡು ತೃಪ್ತರಾಗುವಂತೆ ಸಾಮಾಜಿಕ ವ್ಯವಸ್ಥೆಯು ಅವರ ಸ್ವಯಂ ಸ್ಫೂರ್ತಿ ಸ್ವಾಭಾವಿಕ ಜೈವ ನಿರ್ಧಾರಿತ ಮತ್ತು ಈ ಅಗತ್ಯಗಳ ಪ್ರತಿಬಿಂಬವಾಗಿರುವುದಿಲ್ಲ. ಅಥವಾ ಅದೇ ರಾಷ್ಟ್ರೀಯ ರೀತಿಯಲ್ಲಿ ಯೋಚಿತವಾಗಿರುವುದಿಲ್ಲ. ಕೇವಲ ಸಾಮಾಜಿಕ ಮೌಲ್ಯಗಳಷ್ಟೇ ಸೀಮಿತವಾಗದೇ ಮೌಲ್ಯ ಸಂಘರ್ಷಗಳು, ವರ್ಗ ಸಂಬಂಧಗಳು ಉಂಟಾಗುವುದರ ಜೊತೆಗೆ ಆ ವರ್ಗದೊಳಗಡೆ ವೈರತ್ವವೂ ಮೂಡುತ್ತದೆ. ಅಹ ಅಂತಸ್ಥು ಪಾತ್ರಗಳಷ್ಟೇ ಅಲ್ಲ. ಅದರ ಸ್ಥಾನ ಮಾನಗಳು ಪರಸ್ಪರ ವಿರೋಧ ಭಾವನೆಗಳು ಮತ್ತು ಉಭಯ ಸಂಕಟಗಳು ಸಾಮಾಜಿಕ ಜೀವನದ ಸಾಮಾನ್ಯ ಲಕ್ಷಣಗಳಾಗಿರುತ್ತವೆ. ಮನುಷ್ಯನಲ್ಲಿ ಸಹಾ ಬೇರೆ ಜೀವಿಗಳಂತೆ ಸಮಾನತೆಗಳಿದ್ದರೂ ಕೂಡ ವ್ಯಕ್ತಿಯ ಪ್ರಕ್ರಿಯೆ ಅಪೂರ್ವ ಏಕಮಾತ್ರತೆಯು ಸಂಸ್ಕೃತಿಯ ಸ್ಥಿರತ್ವ ಮತ್ತು ವ್ಯವಸ್ಥೆಗಳಿಗೆ ನಿರಂತರವಾದ ಒಂದು ಸವಾಲಾಗಿಯೇ ಉಳಿದಿದೆ.

ಆದ್ದರಿಂದ ಸಾಂಘಿಕ ಪ್ರವೃತ್ತಿಯ ಅನುಸಂಘಿಕತೆಯ ಸಮಸ್ತ ಸಾಮಾಜಿಕ ವರ್ತನೆಯ ಮಾನವ ಹತಾಶೆಯಲ್ಲಿಯೇ ಬೇರೂರಿದೆ ಎಂದ ಮಾತ್ರಕ್ಕೆ ಸಂಸ್ಕೃತಿ ಮತ್ತು ಸಮಾಜಗಳು ಅನಿವಾರ್ಯವಾಗಿ ಪ್ರತಿಕೂಲ ಭಾವವನ್ನು ತಳೆದಿವೆ ಎಂದು ಹೇಳುವಂತಿಲ್ಲ. ಸಾಮಾಜಿಕ ಜನಜೀವನವು ಅವರ ಸ್ವರೂಪದಿಂದಾಗಿಯೇ ತೃಪ್ತಿಕರವಾಗಿದೆ. ಮತ್ತು ಅದರ ಸ್ವರೂಪದಿಂದಾಗಿಯೇ ಅದು ಹತಾಶಾ ಜನಕವೂ ಆಗಿದೆ. ಪೇರ್ಸ್ ಆವರು ಅದನ್ನು ಈ ಹೇಳಿಕೆಯಲ್ಲಿ ಸ್ಪಷ್ಟವಾಗಿ ಸೂಚಿಸಿದ್ದಾರೆ. '' ಎಲ್ಲ ಸುಸಂಸ್ಕೃತ ಸಮಾಜಗಳು ಮತ್ತು ಭವಿಷ್ಯ ಯಾವುದೇ ಬಗೆಯ ಹೆಚ್ಚಿನ ಸಮಾಜಗಳು ನಿರಂತರವಾಗಿ ಬದಲಾಗುತ್ತಿರುವ ಸ್ಥಿತಿಯಲ್ಲಿ ಇದ್ದವು. ಮತ್ತು ಭಾಗಶಃ ವಿಘಟಿತವಾಗುವ ಹಂತದಲ್ಲಿದ್ದವು. ಇದರಿಂದಾಗಿ ಅವರು ತಮ್ಮ ಒಳ್ಳೆಯ ಹತಜೀವನದ ಜೊತೆ ಜೊತೆಗೆ ಜನರ ಹೋರಾಟ ಮತ್ತು ಹತಾಶೆಗಳನ್ನು ವಿಭಾಜಿತ ದೇಶ ನಿಷ್ಠೆ ಮತ್ತು ವಿವಿಧ ಪ್ರಕಾರಗಳ ಅಸಫಲತೆಯನ್ನು ಅನುಭವಿಸಬೇಕಾಯಿತು. (ಪ್ಯಾರಿಸೆ ೧೯೫೨, ಪು.೭೫)

## ಸಾಂಘಿಕ ಪ್ರವೃತ್ತಿಯ ಸಾಫಲ್ಯತೆ

ಪ್ರತಿಯೊಂದು ಸಾಂಘಿಕ ಚಳುವಳಿಗೆ ತನ್ನದೇ ಆದ ಸಾಫಲ್ಯತೆಯನ್ನು ವೈಫಲ್ಯತೆಯನ್ನು ಕಾಣಬಹುದು. ಪ್ರತಿಯೊಂದು ಚಳುವಳಿಗು ತನ್ನದೇ ಆದ ಒಂದು ಸ್ಟ್ಯಾಂಡರ್ಡ್ ಇರುತ್ತದೆ. ಮೇಲು ನೋಟಕ್ಕೆ ಪ್ರತಿಯೊಂದು ಚಳುವಳಿಗೂ ಕೆಲವು ಆದರ್ಶಗಳಿರುತ್ತವೆ. ಸೂರೆಲ್ ರವರು ಮಿಥ್ಯೆಗಳ ಬಗ್ಗೆ ಹೇಳುತ್ತಾ The myth must be judged as a means of acting or the present, any attempt to discuss how for it can be taken literally as future history is devoid of sense (೧೯೫೦ ಪು.೧೪೪) ಎಂದು ಮಿಥ್ಯೆಯನ್ನು

ಆರ್ಥೈಸಿದ್ದಾರೆ. ಆದಾಗ್ಯೂ ಇದು ಚಳುವಳಿಯ ಮೌಲ್ಯಗಳು ಸಾಮಾರ್ಥ್ಯವನ್ನು ಕಡಿಮೆ ಮಾಡುದು. ಏಕೆಂದರೆ, ಅದು ಅವರಲ್ಲಿ ಹುಟ್ಟಿನಿಂದ ಅಂಟಿಸಿಕೊಂಡು ಬಂದ ನಂಬಿಕೆಯೇ ಅವುಗಳನ್ನು ಮುಖ್ಯ ವಿಷಯಗಳನ್ನಾಗಿ ಮಾಡುತ್ತದೆಯೇ ಹೊರತು ನೈಜತೆಯಲ್ಲ.

ಸಂಪ್ರದಾಯಿಕ ಮೌಲ್ಯಗಳೊಡೆನೆ ಆಗುವ ಒಂದು ಚಳುವಳಿಯು ಬಲವಾಗಿ ಅಧಿಕಾರ, ಅನುಸ್ಥಾಪಿತವಾಗಿದ್ದಲ್ಲಿ ಆಗ ಅದು ಸಮಗ್ರ ವರ್ಗದ ಅಥವಾ ಸಮಾಜದ ಮೇಲೆ ನಿಯಂತ್ರಣವನ್ನಿಟ್ಟು ಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ. ಒಂದು ಕ್ರಾಂತಿಯ ಹಿಡಿತಕ್ಕೆ ಬರುತ್ತದೆ. ಸಮಗ್ರ ಸಮುದಾಯದ ಮೇಲೆ ಅಥವಾ ಸಂಘಟನೆಯ ಮೇಲೆ ನಿಯಂತ್ರಣ ಕೈಗೂಡುತ್ತದೆ. ಆಗ ಆ ಚಳುವಳಿಯು ಬಹು ಬೇಗನೆ ಒಂದು ನಿರ್ದಿಷ್ಟ ಬಗ್ಗೆ ಅಸೋಸಿಯೇಷನ್ ಆಗಿ ಒಂದು ಸ್ಥಾಯಿ ರೂಪಾಂತರಗೊಳ್ಳುತ್ತದೆ. ಯಶಸಿವಯಾಗಿರುವ ಕ್ರಾಂತಿಕಾರಿ ಚಳುವಳಿಗಳ ಅಧ್ಯಯನದಿಂದ ಪಡೆದುಕೊಂಡಿರುವ ಸುಸ್ಪಷ್ಟ ನಿರ್ಣಯಗಳಲ್ಲಿನ ಒಂದು ನಿರ್ಣಯವೆಂದರೆ ಮೌಲ್ಯಗಳ ಮತ್ತು ರೂಡಿಗಳ ರೂಪಾಂತರ ಕ್ರಿಯೆ ಸತತವಾಗಿ ಮುಂದುವರೆಯುತ್ತದೆ. ಮತ್ತು ಅವಸ್ಥಾಂತರ ಕಾಲದಲ್ಲಿ ಈ ರೂಪಾಂತರದ ಕ್ರಿಯೆಯ ವೇಗವೂ ಹೆಚ್ಚುತ್ತದೆ ಎಂದು ಸ್ಪಷ್ಟವಾಗಿ ನಿರ್ಣಯಿತವಾಗಿದೆ.

ಬೃಹತ್ ಸಮಾಜದಲ್ಲಿ ತನ್ನ ಮೌಲ್ಯಗಳನ್ನು ಪ್ರವರ್ತಿಸುವ ಬಲವಾದ ಮತ್ತು ಸತತವಾದ ಪರಿಶ್ರಮವಾದ ಒಂದು ಸಾಂಘಿಕ ಚಳುವಳಿಯು ಹತಾಶಯವಾದಾಗ ಅದು ಒಂದು ತ್ಯಜನವಾದೀಯ ಅಥವಾ ಬಿಟ್ಟು ಹೋಗಬೇಕೆಂದು ವಾದಿಸುವ ಗುರಿಗೆ ದಾರಿ ನೀಡಬಹುದು.

## ಅಧ್ಯಾಯ-೩

# ಹೊಸಪೇಟೆ ತಾಲ್ಲೂಕಿನ ಜನಜೀವನ

ಬಳ್ಳಾರಿ ಜಿಲ್ಲೆಯಲ್ಲಿಯೇ ಕಡಿಮೆ ಭೌಗೋಳಿಕ ವಿಸ್ತೀರ್ಣ ಮತ್ತು ಅತಿಯಾದ ಹೆಚ್ಚಿನ ಜನಸಾಂದ್ರತೆ ಹೊಂದಿರುವ ತಾಲೂಕೆಂಬ ಖ್ಯಾತಿಗೆ ಒಳಗಾಗಿರುವ ಹೊಸಪೇಟೆ ತಾಲ್ಲೂಕಿನಲ್ಲಿ ವರ್ಷದಿಂದ ವರ್ಷಕ್ಕೆ ಜನಸಂಖ್ಯೆಯಲ್ಲಿ ಭಾರೀ ಹೆಚ್ಚಳವನ್ನು ಗಮನಿಸಬಹುದು. ಹೊಸಪೇಟೆ ತಾಲ್ಲೂಕಿನಲ್ಲಿರುವ ಪ್ರಾಕೃತಿಕ ಸಂಪತ್ತು ಬಹುಮಟ್ಟಿಗೆ ಕಾರಣವಾಗಿದೆ. ಒಂದು ಕಡೆ ತುಂಗಾಭದ್ರಾ ಜಲಾಶಯದಿಂದಾಗಿ ನೀರಾವರಿ ಅನುಕೂಲ, ಇನ್ನೊಂದು ಕಡೆ ವಿಶ್ವಗುಣ ದರ್ಜೆಯ ಗಣಿ ಸಂಪತ್ತು, ಮತ್ತೊಂದು ಕಡೆ ವಿಶ್ವ ಪರಂಪರೆಯ ಪಟ್ಟಿಯಲ್ಲಿ ಸ್ಥಾನ ಪಡೆದಿರುವ ವಿಶ್ವವಿಖ್ಯಾತ ಐತಿಹಾಸಿಕ ಹಂಪಿಯ ಪ್ರವಾಸಿ ಕೇಂದ್ರಸ್ಥಾನ ಪಡೆದಿರುವುದರಿಂದ ಹೊಸಪೇಟೆ ತಾಲ್ಲೂಕಿನಲ್ಲಿ ಜನಸಂಖ್ಯೆ ಬೆಳೆಯಲು ಈ ಎಲ್ಲಾ ಪ್ರಮುಖ ಅಂಶಗಳು ಕಾರಣವಾಗಿವೆ. ೨೦೦೧ ರ ಜನಗಣತಿ ಪ್ರಕಾರ ಹೊಸಪೇಟೆ ತಾಲ್ಲೂಕಿನ ಒಟ್ಟು ಜನಸಂಖ್ಯೆ ೩೭೪೯೪೯ ಇದ್ದು, ಜನಸಾಂದ್ರತೆ ಪ್ರತಿ ಚದುರ ಕಿ.ಮಿ.ಗೆ ೪೧೫ ಜನರನ್ನು ಒಳಗೊಂಡಿರುತ್ತದೆ. ೯೩೪ ಚ.ಕಿ.ಮೀ ಒಟ್ಟು ಭೌಗೋಳಿಕ ವಿಸ್ತೀರ್ಣ ಹೊಂದಿರುವ ಈ ತಾಲ್ಲೂಕು ಒಟ್ಟು ೭೪ ಗ್ರಾಮಗಳನ್ನು ೪೬ ಹ್ಯಾಮ್ಲೆಟ್‌ಗಳನ್ನು ಒಳಗೊಂಡಿರುತ್ತದೆ. ಬಳ್ಳಾರಿ ನಗರವು ಜಿಲ್ಲಾ ಕೇಂದ್ರವಾಗಿದ್ದರೂ ಅದರ ಜನ ಸಾಂದ್ರತೆ ಪ್ರತಿ ಚದುರ ಕಿ.ಮಿ.ಗೆ ೩೭೦ ಮಾತ್ರವಿದೆ. ಇದರಿಂದ ತಿಳಿದು ಬರುವುದೇನೆಂದರೆ ಹೊಸಪೇಟೆ ತಾಲ್ಲೂಕಿನಲ್ಲಿ ಜನಜೀವನಕ್ಕೆ ಬೇಕಾದಂತಹ ಉದ್ಯೋಗ, ಕೂಲಿಯ ಹೆಚ್ಚಳದ ಪರಿಣಮವಾಗಿ ಜನಸಂಖ್ಯೆ ಹೆಚ್ಚಾಗಲು ಕಾರಣವೆಂಬುವುದು ಸ್ಪಷ್ಟ ವಾಗುತ್ತದೆ.

ಹೊಸಪೇಟೆ ತಾಲ್ಲೂಕಿನಲ್ಲಿ ಪ್ರತಿಯೊಂದು ಸಾಮಾಜಿಕ ಕಾರ್ಯಗಳು ಜಾತಿ ಆಧಾರಿತ ವಾಗಿರುತ್ತವೆ. ಜಾತಿಗನುಗುಣವಾಗಿ ಕೈಗೊಳ್ಳುವ ಸಾಮಾಜಿಕ ಆಚರಣೆಗಳು ವಿಂಗಡಣೆಯಾಗಿರುತ್ತವೆ. ಜನನ, ನಾಮಕರಣ, ಮದುವೆ, ಸಾವು, ಇತ್ಯಾದಿ ಕಾರ್ಯಕ್ರಮಗಳು ಜಾತಿಯಿಂದ ಜಾತಿಗೆ, ಧರ್ಮದಿಂದ ಧರ್ಮಕ್ಕೆ ವ್ಯತ್ಯಾಸಗೊಳ್ಳುತ್ತವೆ. ನಗರ ಜೀವನ ಮತ್ತು ಗ್ರಾಮೀಣ ಸಾಂಸ್ಕೃತಿಯಲ್ಲಿ ಜಾತಿಗೆ

ಸಂಬಂಧಪಟ್ಟ ಆಚರಣೆಗಳಲ್ಲಿ ಬದಲಾವಣೆಗಳೇನೂ ಕಾಣಬವುದಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಹಬ್ಬ, ಜಾತ್ರೆ ಉತ್ಸವಗಳಲ್ಲಿ ಮೇಲ್ಜಾತಿ ಮತ್ತು ಕೆಳಜಾತಿ ಜನರು ಭಿನ್ನವಾದ ರೀತಿಯಲ್ಲಿಯೇ ಭಾಗವಹಿಸುತ್ತಾರೆ. ನಗರ ಪ್ರದೇಶದಲ್ಲಿ ಸಾಮೂಹಿಕವಾಗಿ ಆಚರಿಸಲ್ಪಡುವ ಹಬ್ಬ ಜಾತ್ರೆಗಳಲ್ಲಿ ಜಾತಿ ಭೇದಗಳು ಅಷ್ಟಾಗಿ ಕಂಡು ಬರುವುದಿಲ್ಲ. ಪೂಜೆ ಮಾಡುವಲ್ಲಿ ಮಾತ್ರ ಕೆಲವೊಂದು ಜಾತಿಗಳಿಗೆ ಪ್ರಾಮುಖ್ಯತೆ ನೀಡಲಾಗಿದ್ದರೂ ಉಳಿದಂತೆ ಆಚರಣೆಯಲ್ಲಿ ಸರ್ವರೂ ಒಂದಾಗಿ ಆಚರಿಸುವ ಪರಿಪಾಠ ಬೆಳೆದು ಕೊಂಡು ಬಂದಿರುತ್ತದೆ.

ಹೊಸಪೇಟೆ ತಾಲ್ಲೂಕಿನ ಮುಖ್ಯ ಭಾಷೆ ಕನ್ನಡವಾಗಿರುತ್ತದೆ. ತೆಲುಗು, ಉರ್ದು, ತಮಿಳು, ಮರಾಠಿ, ಹಿಂದಿ, ಗುಜರಾತಿ ಮಾತೃ ಭಾಷೆಯುಳ್ಳ ಜನರು ಅನುಕ್ರಮವಾಗಿ ಪ್ರಾಶಸ್ತ್ಯದಲ್ಲಿ ಇದ್ದಾರೆ. ಲಂಬಾಣಿ, ಕೊರಚರೂ ಸಹಾ ತಮ್ಮದೇ ಆದ ಮಾತೃಭಾಷೆ ಹೊಂದಿದ್ದಾರೆ . ಹೀಗಾಗಿ ಹೊಸಪೇಟೆ ತಾಲ್ಲೂಕು ಹಲವು ಭಾಷೆಗಳ ಸಂಪರ್ಕ ಉಳ್ಳದ್ದಾಗಿದ್ದು, ಈಗೀಗ ರಾಷ್ಟ್ರದ ವಿವಿದ ಭಾಗಗಳಿಂದ ವಲಸಿಗರು ಬರುತ್ತಿದ್ದು ಹಲವು ಭಾಷಾ ಸಂಸ್ಕೃತಿಗಳ ಸಂಗಮವಾಗಿದೆ. ಆದರೂ ಕನ್ನಡ ಭಾಷೆಯನ್ನು ತಾಲ್ಲೂಕಿನ ಪ್ರಮುಖ ಜಾತಿಯವರೆಲ್ಲರೂ ಮಾತನಾಡುತ್ತಾರೆ. ಹಾಗೆಯೇ ತೆಲುಗು ಮಾತನಾಡುವ ಜನರೂ ಇದ್ದಾರೆ. ಹಂಪಿಯಲ್ಲಿ ಪಾಶ್ಚಿಮಾತ್ಯ ದೇಶಗಳಿಂದ ಬಂದವರೂ ಶಾಶ್ವತವಾಗಿ ನೆಲೆಸಿದ್ದಾರೆ. ಅವರು ತಮ್ಮ ನಾಡಿನ ಭಾಷೆಯನ್ನೇ ಮಾತನಾಡುತ್ತಾರೆ.

## ಧಾರ್ಮಿಕ ಜೀವನ

ಹೊಸಪೇಟೆ ತಾಲ್ಲೂಕಿನ ಹೆಚ್ಚಿನ ಜನರು ಹಿಂದೂಗಳಾಗಿದ್ದಾರೆ. ನಂತರದ ಸ್ಥಾನದಲ್ಲಿ ಮುಸ್ಲೀಂರು, ಕ್ರೈಸ್ತರು, ಜೈನರು, ಸಿಖ್‌ರು, ಪಾರ್ಸಿಗಳು ಬರುತ್ತಾರೆ. ಬಳ್ಳಾರಿ ಜಿಲ್ಲೆಯ ಗೆಜೆಟಿಯರ್ ನಲ್ಲಿ ಉಲ್ಲೇಖಿತವಾದಂತೆ ಹಿಂದೂ, ಮುಸ್ಲೀಂರ ನಡುವಿನ ಸಾಮರಸ್ಯದ ಜೀವನ ಇಲ್ಲಿದ್ದಷ್ಟು ಮತ್ತೆಲ್ಲೂ ಕಾಣಲಾರದೆಂಬುದು ಕಂಡು ಬರುತ್ತದೆ. ಈ ಎರಡೂ ಕೋಮುಗಳ ನಡುವೆಯೇ ಹೆಚ್ಚು ಗಲಭೆಗಳು ಸಾಮಾನ್ಯವಾಗಿ ನಡೆದಿರುವ ಮತ್ತು ನಡೆಯುತ್ತಿರುವ ಪ್ರಕರಣಗಳು ಬೇರೆಲ್ಲಾ ಕಡೆ ಸಿಗುತ್ತಿದ್ದರೂ ಇಲ್ಲಿ ಮಾತ್ರ ಕೋಮುಗಲಭೆಯಂತಹ ಅಹಿತಕರ ಘಟನೆಗಳು ಬಹಳ ವಿರಳ. ಹೊಸಪೇಟೆ ತಾಲೂಕಿನ ಮುಸ್ಲೀಂರು ಚಾರಿತ್ರಿಕವಾಗಿಯೂ ಅತ್ಯಂತ ಪ್ರಮುಖರೆಂಬ ಖ್ಯಾತಿ ಹೊಂದಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಹೈದ್ರಾಬಾದ್ ಕರ್ನಾಟಕ ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತು. ಮುನಿರಾಬಾದಿನಲ್ಲಿ ನಡೆದ ಭಾರತೀಯ ಮಿಲಿಟರಿ ಸೈನ್ಯಕ್ಕೂ (ಪೋಲಿಸರು) ಮತ್ತು ನಿಜಾಮನ ಸೈನ್ಯಕ್ಕೂ ಕಾಳಗ ನಡೆದಾಗ ಹೊಸಪೇಟೆಯ ಮುಸ್ಲೀಂರು ತಮ್ಮ ಧರ್ಮದ ರಜಾಕಾರರಿಗೆ ಬೆಂಬಲ ನೀಡದೇ ಭಾರತೀಯ ಸೈನಿಕರಿಗೆ ನೆರವು ನೀಡಿದ್ದನ್ನು ಹೈದ್ರಾಬಾದ್ ವಿಮೋಚನಾ ಹೋರಾಟದಲ್ಲಿ ಸ್ಮರಿಸಲಾಗಿದೆ. ಇಂಥಹ ಖ್ಯಾತಿಯನ್ನು ಹೊಸಪೇಟೆಯ ಮುಸ್ಲಿಂ ಸಮುದಾಯ ಹೊಂದಿದ್ದು, ಈ ಕಾರಣಕ್ಕಾಗಿಯೇ ಇದರ ಬಗ್ಗೆ ವಿಶೇಷ ಗೌರವ

ಹೊಂದಲಾಗಿದೆ. ಕೋಮು ಸೌಹಾರ್ದತೆಗೆ ಇದೂ ಕೂಡ ಪ್ರಮುಖ ಕಾರಣವಾಗಿದೆ. ಹಿಂದೂಗಳು ಮೊಹರಂ ಹಬ್ಬದಲ್ಲಿ ಸಕ್ಕರೆಯನ್ನು 'ಪೀರ್ಲ್' ದೇವರಿಗೆ ಒಪ್ಪಿಸುವುದು ಸೌಹಾರ್ದದ ಕುರುಹಾಗಿದೆ. ಹಿಂದೂಗಳಂತೆಯೇ ಜೈನರೂ ಸ್ಥಳೀಯ ಜನರಾಗಿದ್ದಾರೆ. ಧಾರ್ಮಿಕ ವಿಷಯಗಳನ್ನು ಬಿಟ್ಟರೆ ಹಿಂದೂಗಳಿಗೂ ಜೈನರಿಗೂ ವಿಶೇಷ ಭೇದಗಳಿಲ್ಲ. ಆಧುನಿಕ ಹಾಗೂ ವೈಜ್ಞಾನಿಕ ವರ್ಚಸ್ಸು ಬೆಳೆದಂತೆ ಭೇದ ಕಡಿಮೆಯಾಗುತ್ತಾ ನಡೆದಿದೆ. ಕ್ರೈಸ್ತ ಪಾದ್ರಿಗಳು ವಿಜಯನಗರ ಸಾಮ್ರಾಜ್ಯದಲ್ಲಿ ಹೆಚ್ಚಿನ ಮನ್ನಣೆ ಪಡೆದಿದ್ದರು. ಲೂಯಿಡೊ ಸಾಲ್ವದೋರ ಎಂಬ ಪಾದ್ರಿಯವರು ಕ್ರೈಸ್ತ ದೇವಾಲಯವನ್ನು ನಿರ್ಮಿಸಲು ಹಾಗೂ ಮತ ಪ್ರಚಾರಗೊಳಿಸಲು ಅಂದಿನ ರಾಜರಿಂದ ಅನುಮತಿ ಪಡೆದಿದ್ದನೆಂದು ತಿಳಿದು ಬರುತ್ತದೆ. ಈ ಕಾರಣದಿಂದಲೇ ಈ ಪ್ರದೇಶದಲ್ಲಿ ಕ್ರೈಸ್ತರ ಸಂಖ್ಯೆ ಹೆಚ್ಚಾಯಿತೆಂದು ವದಂತಿ ಇದೆ. ಸಿಖ್‌ರು, ಪಾರ್ಸಿಗಳು ಕಡಿಮೆ ಸಂಖ್ಯೆಯಲ್ಲಿದ್ದು, ಕೇವಲ ವ್ಯಾಪಾರಿ ಉದ್ದೇಶಗಳಿಗಾಗಿ ವಲಸೆಬಂದವರಾಗಿದ್ದಾರೆ. ಪ್ರತಿಯೊಂದು ಧರ್ಮವು ತಮ್ಮದೇ ಆದ ದೇವಾಲಯಗಳು, ಆಶ್ರಮಗಳು, ಮಠಗಳನ್ನು ಹೊಂದಿದ್ದು, ಧಾರ್ಮಿಕ ಆಚರಣೆಗಳ ಮೂಲಕ ತಮ್ಮ ತಮ್ಮ ಧರ್ಮಿಯರ ನಡುವೆ ಒಗ್ಗಟ್ಟನ್ನು ಕಾಪಾಡುವ ಮತ್ತು ಸಮನ್ವಯತೆಯನ್ನು ಸಾಧಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕೋಮು ಸಾಮರಸ್ಯತೆಗೆ ಇದೂ ಒಂದು ಕಾರಣವಾಗಿದೆ.

### ಊರು ಕೇರಿ ಮತ್ತು ಪಟ್ಟಣಗಳು :

ಸಾಮಾಜಿಕ ಜನಜೀವನದಲ್ಲಿ 'ಊರು' 'ಕೇರಿ'ಗಳ ಕಲ್ಪನೆ ವಿಶಿಷ್ಟವಾದುದು. ಊರಿನೊಂದಿಗೆ ಜನರು ಅವಿನಾಭಾವ ಸಂಬಂಧವನ್ನು ಹೊಂದಿರುತ್ತಾರೆ. ಒಂದು ಊರು ಎನಿಸಬೇಕಾದರೆ ಅದಕ್ಕೆ ಊರಬಾಗಿಲು ಇರಬೇಕು. ಇದಕ್ಕೆ ಅಗಸೆ ಬಾಗಿಲು ಎಂತಲೂ ಕರೆಯುವರು. ಅಗಸೆ ಬಾಗಿಲಿನ ಕಲ್ಪನೆ ವಿಜಯನಗರ ಸಾಮ್ರಾಜ್ಯದ ಕಾಲದಿಂದಲೂ ಅಸ್ತಿತ್ವದಲ್ಲಿವೆ. ಅಗಸೆ ಬಾಗಿಲುಗಳು ಇಂದು ಹೊಸಪೇಟೆ ತಾಲೂಕಿನಾದ್ಯಂತ ಕಂಡು ಬರುತ್ತವೆ. ಸಾಮಾನ್ಯವಾಗಿ ಈ ಬಾಗಿಲುಗಳು ಬೃಹದಾಕಾರದ ಕಲ್ಲಿನ ಬಾಗಿಲುಗಳಾಗಿರುತ್ತವೆ. ಅವುಗಳ ಮೇಲೆ ಸುಂದರವಾದ ಕೆತ್ತನೆಗಳನ್ನು ಕಾಣಬಹುದು. ಊರಿನ ಕಲ್ಪನೆಯಲ್ಲಿ 'ಹಳೆ ಊರು' ಮತ್ತು 'ಹೊಸ ಊರು' ಗಳೆಂಬ ನುಡಿಗಟ್ಟುಗಳು ವಿಶಿಷ್ಟವಾಗಿವೆ. ಹಳೆ ಊರೆಂದರೆ ಜನರು ಯಾವುದಾದರೊಂದು ಕಾರಣಕ್ಕೆ ಬಿಟ್ಟು ಬಂದ ಪ್ರದೇಶವಾಗಿದ್ದರೆ, ಹೀಗೆ ಬಿಟ್ಟು ಬಂದ ಜನರು ಮತ್ತೊಂದು ಪ್ರದೇಶದಲ್ಲಿ ನೆಲೆಸಿದರೆ, ಆಗ ಅದೇ ಹೊಸ ಊರಾಗುತ್ತದೆ. ಒಂದು ಊರಿನಲ್ಲಿರುವ ಕೆಲವೊಂದು ಧರ್ಮದ ಅಥವಾ ಜಾತಿಯ ಜನರು ಪ್ರತ್ಯೇಕವಾಗಿ ಮನೆಗಳನ್ನು ಕಟ್ಟಿಕೊಂಡು ತಮ್ಮವರೊಂದಿಗೆ ನೆಲೆಸಿದಾಗ ಅದು ಒಂದು ಕೇರಿಯ ರೂಪವನ್ನು ಪಡೆಯುತ್ತದೆ. ಹಳೆಯ ಊರಾಚೆ ಕೆಲವು ಜನ ಕೆಲವು ಮನೆಗಳನ್ನು ನಿರ್ಮಿಸಿ ವಾಸ ಮಾಡಿದಾಗ ಅದು ಪ್ರತ್ಯೇಕ ಕೇರಿಯಾಗಿ

ಗ್ರಾಮದ ಸ್ವರೂಪ ಪಡೆಯುತ್ತದೆ. ಹಳೆಯ ಊರಾಚೆ ಕೆಲವು ಜನ ಕೆಲವು ಮನೆಗಳನ್ನು ನಿರ್ಮಿಸಿ ವಾಸ ಮಾಡಿದಾಗ ಅದು ಪ್ರತ್ಯೇಕ ಕೇರಿಯಾಗಿ ಗ್ರಾಮದ ಸ್ವರೂಪ ಪಡೆಯುತ್ತದೆ. 'ಊರು' 'ಕೇರಿ' ಗಳೇ ಹೆಚ್ಚಿನ ಸಂಖ್ಯೆಯಲ್ಲಿ ಕಂದಾಯ ಗ್ರಾಮಗಳಾಗಿರುವುದು ತಿಳಿದು ಬರುತ್ತದೆ. ಹೊಸಪೇಟೆ ತಾಲೂಕಿನ ಜನರ ಆರ್ಥಿಕ, ವಾಣಿಜ್ಯ ಅಗತ್ಯಗಳಿಗಾಗಿ ಒಟ್ಟು ಮೂರು ಪಟ್ಟಣಗಳನ್ನು ಹೊಂದಿರುವ ಹೆಗ್ಗಳಿಕೆ ಹೊಂದಿದೆ. ಹೊಸಪೇಟೆ, ಕಮಲಾಪುರ, ಮತ್ತು ಕಂಪ್ಲಿಗಳು ಈ ಪಟ್ಟಣಗಳಾಗಿದ್ದು, ಸುತ್ತಮುತ್ತಲ ಗ್ರಾಮಗಳ ಜನರ ದೈನಂದಿನ ಅಗತ್ಯಗಳನ್ನು ಪೂರೈಸುವ ನಗರಗಳಾಗಿರುತ್ತವೆ.

ಊರಿಗೊಬ್ಬ ಅಥವಾ ಕೆಲವೇ ಕೆಲವರು ಮುಖ್ಯಸ್ಥರಿರುವುದು ವಾಡಿಕೆ. ಈ ಮುಖ್ಯಸ್ಥರು ಸಾಮಾನ್ಯವಾಗಿ ಮೇಲ್ಜಾತಿಯವರೇ ಆಗಿರುತ್ತಾರೆ. ಲಿಂಗಾಯಿತ ಜಾತಿಯವರೇ ಹೆಚ್ಚಾಗಿರುತ್ತಾರೆ. ಇವರನ್ನು ಮುಖಂಡರು, ಗೌಡರು, ಬಣಕಾರರು ಎಂದು ವಾಡಿಕೆಯಲ್ಲಿ ಕರೆಯುತ್ತಾರೆ. ಇವರು ಊರಿನ ಪ್ರತಿಯೊಂದು ಜಾತಿಯ ವಿವಾದಗಳನ್ನು ತಮ್ಮಲ್ಲಿಯೇ ಬಗೆಹರಿಸುವರು. ಸಾಮಾನ್ಯವಾಗಿ ಊರಿನ ಸಮಸ್ಯೆ ಹೊರಗಡೆ ಹೋಗಬಾರದೆಂಬ ಕಾರಣಕ್ಕೆ ಮತ್ತು ಊರಿನ ಸಮಸ್ಯೆಗಳನ್ನು ಊರವರೇ ಸೇರಿ ಬಗೆಹರಿಸಿಕೊಳ್ಳುವ ಉದ್ದೇಶ ಹೊಂದಿದ್ದಾರೆ. ಈ ವ್ಯವಸ್ಥೆಯನ್ನು ಇಂದಿಗೂ ಹೊಸಪೇಟೆ ತಾಲೂಕಿನಾದ್ಯಂತ ಕಾಣಬಹುದು.

## ಆಹಾರ ಪದ್ಧತಿ, ವೇಷಭೂಷಣಗಳು

ಜೋಳ ಜನಸಾಮಾನ್ಯರ ಸಾಮಾನ್ಯ ಆಹಾರವಾಗಿದೆ. ಜೋಳದ ರೊಟ್ಟಿ, ಜೋಳದ ಮುದ್ದೆ ಇವು ಹಳ್ಳಿಗಳಲ್ಲಿ ಇವತ್ತಿಗೂ ಸಾಮಾನ್ಯ ಜನರ ಆಹಾರಗಳಾಗಿವೆ. ಮೊದಲು ಅಕ್ಕಿ ಅನ್ನ ಕೆಲವೇ ವರ್ಗದ ಆಹಾರವಾಗಿತ್ತಾದರೂ ಇತ್ತೀಚೆಗೆ ಅಕ್ಕಿ ಅನ್ನವನ್ನು ಸಾಮಾನ್ಯ ಜನರೂ ಪ್ರಮುಖ ಆಹಾರವಾಗಿ ಉಪಯೋಗಿಸುವುದು ತಿಳಿದು ಬರುತ್ತದೆ. ಗೋಧಿಯ ಉಪಯೋಗ ಬಹಳಷ್ಟು ಕಡಿಮೆಯಿದ್ದು, ಕೆಲವೇ ವರ್ಗದ ಜನರ ಆಹಾರವಾಗಿದೆ. ಕಾಯಿಪಲ್ಯೆಗಳ ಬಳಕೆ ಕಡಿಮೆಯೆಂದೇ ಹೇಳಬಹುದು. ಗ್ರಾಮೀಣ ಪ್ರದೇಶದ ಜನರು ಕಾಯಿಪಲ್ಯೆಗಳನ್ನು ಬೆಳೆದರೂ ಉಪಯೋಗಿಸುವುದು ಮಾತ್ರ ವಿರಳವಾಗಿದ್ದು, 'ವ್ಯಾಪಾರಿ' ಉದ್ದೇಶಕ್ಕಾಗಿ ಬಳಸುತ್ತಿರುವುದು ಕಂಡು ಬರುತ್ತದೆ. ಕಾಯಿಪಲ್ಯೆಗಳ ಬಳಕೆ ನಗರ ಪ್ರದೇಶದ ಪ್ರತಿಷ್ಠಿತ ವರ್ಗಕ್ಕೆ 'ಸೀಮಿತ'ವಾಗಿರುವುದು ವಿಚಿತ್ರವಾಗಿದೆ. ಇತ್ತೀಚೆಗೆ ಸಸ್ಯಹಾರಿಗಳ ಸಂಖ್ಯೆಗಿಂತ 'ಮಾಂಸಹಾರಿ' ಗಳ ಸಂಖ್ಯೆ ಹೆಚ್ಚಳವಾಗುತ್ತಿದ್ದು, 'ಗಣಿಗಾರಿಕೆ' ಒಡ್ಡಿರುವ ಆರ್ಥಿಕ ಬಲವೂ ಪ್ರಮುಖ ಕಾರಣವೆಂದು ಹೇಳಿದರೆ ತಪ್ಪಾಗಲಾರದು.

ಜನಸಾಮಾನ್ಯರಲ್ಲಿ ಗಂಡಸರು ಲುಂಗಿ, ಅಂಗಿಗಳನ್ನು ಧರಿಸುತ್ತಾರೆ. ಮಹಿಳೆಯರು ಸಾಮಾನ್ಯವಾಗಿ ಸೀರೆ, ಕುಬುಸ ಧರಿಸುವುದು ಕಂಡು ಬರುತ್ತದೆ. ವಿದ್ಯಾವಂತರು, ಕುಶಲಕರ್ಮಿಗಳು, ಮಧ್ಯಮವರ್ಗದ

ಗಂಡಸರು ಸಾಮಾನ್ಯವಾಗಿ ಪ್ಯಾಂಟು ಮತ್ತು ಅಂಗಿಗಳನ್ನು ಧರಿಸುವುದನ್ನು ಹೊಸಪೇಟೆ ತಾಲೂಕಿನಾದ್ಯಂತ ಕಾಣಬಹುದಾಗಿದೆ. ಹಳ್ಳಿಗಳ ಹಳೆಯ ತಲೆಮಾರಿನ ರೈತಾಪಿ ವರ್ಗ ಪಂಚೆ, ಅಂಗಿ, ರುಮಾಲುಗಳನ್ನು ಧರಿಸುತ್ತಾರೆ. ಮುಸ್ಲಿಂ ಮಹಿಳೆಯರು 'ಬುರ್ಕಾ' ಧರಿಸುತ್ತಾರೆ. ಚಳಿಗಾಲದಲ್ಲಿ 'ಸ್ವೆಟರ್' ಗಳನ್ನು ಎಲ್ಲಾ ಧರ್ಮದವರೂ ವಿಶೇಷವಾಗಿ ಧರಿಸುತ್ತಾರೆ. ಕಂಬಳಿ ಬಳಕೆ ಹಳ್ಳಿ ಪ್ರದೇಶದಲ್ಲಿ ಇವತ್ತಿಗೂ ಕಾಣುತ್ತದೆ. ನಯವಾದ 'ಉಣ್ಣೆ ಚಾದರ'ಗಳನ್ನು ಅನುಕೂಲಸ್ಥ ಜನರು ಬಳಸುವುದನ್ನು ಕಾಣುತ್ತೇವೆ.

## ಮನೆಗಳ ನಿರ್ಮಾಣ

ಗ್ರಾಮೀಣ ಪ್ರದೇಶದಲ್ಲಿ ಮಣ್ಣಿನ ಹೆಂಡೆಯ ಗೋಡೆ ಮತ್ತು ಅದರ ಮೇಲೆ ಟೊಂಗೆಗಳನ್ನು ಹಾಕಿ ಮೇಲೆ ಮಣ್ಣಿನ ಕೆಸರಿನ ಮೇಲ್ಹಾವಣೆಯಿರುವ ಮನೆಗಳನ್ನೇ ಹೆಚ್ಚು ಕಾಣುತ್ತೇವೆ. ಮಧ್ಯಮ ವರ್ಗದವರು ಸಾಮಾನ್ಯವಾಗಿ ಇಂಥಹ ಮನೆಗಳನ್ನು ಹೊಂದಿರುತ್ತಾರೆ. ಅತೀ ಬಡವರು 'ಗುಡಿಸಲು'ಗಳನ್ನು ತಮ್ಮ ವಾಸಕ್ಕಾಗಿ ನೆಚ್ಚಿಕೊಂಡಿದ್ದಾರೆ. ಗ್ರಾಮಗಳ ಕೆಲವೇ ಕೆಲವು ಶ್ರೀಮಂತರು ಹೊಸ ಆರ್.ಸಿ.ಸಿ. ಮನೆಗಳ ಒಡೆಯರಾಗಿರುತ್ತಾರೆ. ಇತ್ತೀಚೆಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಆಶ್ರಯ ಮನೆಗಳ ನಿರ್ಮಾಣದಿಂದಾಗಿ ಅತಿಬಡವ, ದಲಿತರು, ಹಿಂದುಳಿದವರೂ, ಆಶ್ರಯ ಮನೆಗಳ ಫಲಾನುಭವಿಗಳಾಗಿರುವುದನ್ನು ನೋಡಬಹುದು.

ಹಳೆಯಕಾಲದ ಮನೆಗಳು ಕೋಟೆಗಳ ಮಾದರಿಯಲ್ಲಿ ಭದ್ರವಾದ ವಸತಿಗಳಾಗಿರುತ್ತವೆ. ಕಿಟಕಿಗಳಿಲ್ಲದ ಕಟ್ಟಡಗಳಾಗಿ ಒಂದೇ ಬಾಗಿಲಿನಿಂದ ಕೂಡಿದ್ದು, ಸಾಮಾನ್ಯವಾಗಿ ಊರಿನ ಕಡೆ ಮುಖವಾಗಿರುತ್ತದೆ. ಹಳ್ಳಿಗಳಲ್ಲಿ ರೈತರ ಮನೆಗಳ ದನಕರುಗಳು ಮನೆಯ ಮುಂಭಾಗದ ಸ್ಥಳವನ್ನು ಆಕ್ರಮಿಸಿರುತ್ತವೆ. ಸ್ಥಿತಿವಂತರ ನಗರದ ಮದ್ಯಮವರ್ಗದ ಮನೆಗಳ ಮುಂದೆ ವಾಹನಗಳ ನಿಲ್ದಾಣಕ್ಕೆ ಸ್ಥಳವನ್ನು ಕಾದಿರಿಸಲಾಗುತ್ತದೆ. ಈಗಿನ ಗ್ರಾಮೀಣ ಪ್ರದೇಶದಲ್ಲಿ ಆಧುನಿಕ ರೀತಿಯ ಗಚ್ಚುಗಾರೆಯ ಸಿಮೆಂಟ್ ಕಾಂಕ್ರೀಟಿನ ಮನೆಗಳು ವಿಶಾಲವಾದ ಸ್ಥಳದಲ್ಲಿ ಉತ್ತಮ ರೀತಿಯಲ್ಲಿ ಗಾಳಿ ಬೆಳಕು ಸಿಗುವಂತೆ ಕಿಟಕಿ ಬಾಗಿಲು ಹಾಗೂ ಶೌಚಾಗೃಹಗಳಿರುವಂತೆ ಕಟ್ಟಿಸಲಾಗುತ್ತಿದೆ. ಮನೆಗಳನ್ನು ಚೊಕ್ಕಟವಾಗಿಟ್ಟುಕೊಳ್ಳುವುದು, ದಿನನಿತ್ಯದ ಸ್ನಾನ ಮಾಡುವುದನ್ನು ಜನರು ರೂಡಿಸಿಕೊಳ್ಳುತ್ತಿದ್ದಾರೆ. ಗುಡಿಸಲುಗಳಾಗಲೀ ಮೇಲ್ಮುದ್ದಿ ಮನೆಗಳಾಗಲೀ ಅಂತರವಿಲ್ಲದೆ ಒಂದಕ್ಕೊಂದು ತಾಗಿಕೊಂಡಿರುತ್ತವೆ. ಸಾಮಾನ್ಯವಾಗಿ ಹೆಂಗಸರು ಮನೆಯ ಒಳಗಡೆಯೇ ಇರುತ್ತಾರೆ. ಪಡಸಾಲೆ ಅಥವಾ ಬಂಕದಲ್ಲಿ ಗಂಡಸರು ಅಥವಾ ಮನೆಯ ಯಜಮಾನರು ಇರುತ್ತಾರೆ. ಇದು ಅತಿಥಿ ಸ್ವೀಕಾರದ ಸ್ಥಳವೂ ಆಗಿರುತ್ತದೆ. ಆದರೆ ಅತಿಥಿಗಳಾಗಿ ಸ್ತ್ರೀಯರು ಬಂದಾಗ ಅವರನ್ನು ಬಹುತೇಕವಾಗಿ ಪಡಶಾಲೆಯಲ್ಲಿ ಕೂರಿಸದೆ ಮನೆಯ ಸ್ತ್ರೀಯರಿರುವ ಕೋಣೆಗೆ ಕರೆದುಕೊಂಡು ಹೋಗುವುದು ಸರ್ವೇಸಾಮಾನ್ಯ. ಅತಿಥಿ ಪುರುಷನಾದರೆ ಪುರುಷರಿಲ್ಲದ ಸಮಯದಲ್ಲಿ ಹೆಂಗಸರು ಸ್ವಾಗತಿಸುವುದಿಲ್ಲ.

## ಹೊಸಪೇಟೆ ತಾಲೂಕಿನ ಪ್ರಮುಖ ಹಬ್ಬಗಳು

ಹೊಸಪೇಟೆ ತಾಲೂಕಿನಾದ್ಯಂತ ಜನಪದರು ಆಚರಿಸುವ ಆಚರಣೆಗಳು, ಹಬ್ಬಗಳು ಒಳ್ಳೆಯ ಮೆರಗನ್ನು ನೀಡಿವೆ. ಜೀವನದ ಏಳುಬೀಳುಗಳಿಂದ ಜರ್ಝರಿತರಾದವರಿಗೆ ಹಬ್ಬಗಳು ಪುನಶ್ಚೇತನ ನೀಡಿ, ಮತ್ತೆ ದೈನಂದಿನ ಜೀವನದಲ್ಲಿ ತೊಡಗಿಸಿಕೊಳ್ಳಲು ಸಹಾಯಕವಾಗುತ್ತವೆ. ಕರ್ನಾಟಕದಲ್ಲಿ ಎಲ್ಲೆಡೆ ಇರುವ ಹಬ್ಬಗಳನ್ನಲ್ಲದೆ ಸ್ಥಳೀಯವಾದ ಕೆಲವು ಹಬ್ಬಗಳನ್ನು ತಾಲೂಕಿನಲ್ಲಿ ಆಚರಿಸಲಾಗುತ್ತದೆ. ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು ಅವರದೇ ಪ್ರತ್ಯೇಕವಾದ ಹಬ್ಬಗಳನ್ನು ಆಚರಿಸುತ್ತಾರೆ. ಹಬ್ಬಗಳ ಅನುಕ್ರಮಣಿಕೆಯಲ್ಲಿಯೇ ವರ್ಷವನ್ನು ವಿಂಗಡಿಸುವ ಕ್ರಮವೂ ಜನಪದರಲ್ಲಿದೆ. ಹಬ್ಬಗಳಿಗನುಗುಣವಾಗಿ ವರ್ಷದ ವಿಂಗಡಣೆಯನ್ನು ಮಾಡಬಹುದಾಗಿದೆ.

ಯುಗಾದಿ - ಹಂಪಿ ಹುಣ್ಣಿಮೆ - ಬಸವಜಯಂತಿ - ಕಾರಹುಣ್ಣಿಮೆ - ಪೀರಲು ಹಬ್ಬ - ನಾಗರ ಅಮವಾಸ್ಯೆ - ಶ್ರಾವಣ - ಗಣೇಶಚೌತಿ - ಗೋಕುಲಾಷ್ಟಮಿ - ದೀಪಾವಳಿ - ಮಾರ್ನುಮಿ - ಎಳ್ಳ ಅಮವಾಸ್ಯೆ - ಮಕರ ಸಂಕ್ರಮಣ - ಶಿವರಾತ್ರಿ - ಹೋಳಿ.

ತಾಲೂಕಿನಾದ್ಯಂತ ಬಹುತೇಕ ಈ ಎಲ್ಲಾ ಹಬ್ಬಗಳನ್ನು ಆಚರಿಸಲಾಗುತ್ತದೆ. ಇದರಲ್ಲಿ ಯುಗಾದಿ, ಪೀರಲು ಹಬ್ಬ, ಮಾರ್ನವಮಿ, ಶಿವರಾತ್ರಿ, ನಾಗರ ಪಂಚಮಿಗಳು ಹಿಂದೂಗಳ ಪ್ರಮುಖ ಹಬ್ಬಗಳಾದರೆ, ಮುಸ್ಲಿಮರು ರಂಜಾನ್, ಬಕ್ರೀದ್, ಈದ್‌ಮಿಲಾದ್ ಮೊದಲಾದ ಹಬ್ಬಗಳನ್ನು ಆಚರಿಸುವರು. ಕ್ರಿಶ್ಚಿಯನ್ನರು ಗುಡ್‌ಫ್ರೈಡೆ, ಕ್ರಿಸ್‌ಮಸ್ ಮೊದಲಾದ ಹಬ್ಬಗಳನ್ನು ಆಚರಿಸುತ್ತಾರೆ. ಹಂಪಿ ಹುಣ್ಣಿಮೆ ಸ್ಥಳೀಯರಲ್ಲಿ ವಿಶೇಷವಾದ ಹಬ್ಬ. ಮಾಘಮಾಸದ ಪುಷ್ಯದಲ್ಲಿ ಈ ಆಚರಣೆಯನ್ನು ನಡೆಸಲಾಗುತ್ತದೆ. ಈ ಸಂದರ್ಭದಲ್ಲಿ ಹಂಪಿಯಲ್ಲಿಯೂ ಫಲಪೂಜೆಯಿರುತ್ತದೆ. ಹಂಪಿಯ ಈ ಜಾತ್ರೆಗೆ ಸ್ಥಳೀಯರಲ್ಲದೆ ಸುತ್ತಮುತ್ತಲಿನ ಪ್ರದೇಶದ ಜನರೂ ಭಾಗವಹಿಸುತ್ತಾರೆ. ಅಂದು ಹಂಪಮ್ಮ ಮತ್ತು ವಿರುಪಾಕ್ಷನಿಗೆ ಮದುವೆ ನಡೆಯಿತೆಂಬ ನಂಬಿಕೆ ಇದೆ.

ಪೀರಲು ಹಬ್ಬ ತಾಲೂಕಿನಾದ್ಯಂತ ಜೀವಂತಿಕೆಯನ್ನು ತೋರಿಸುವ ಹಬ್ಬ. ಮೂಲತಃ ಮುಸ್ಲಿಂ ಸಮುದಾಯದ ಹಬ್ಬವಾದ ಇದನ್ನು ಹಿಂದು ಮತ್ತು ಮುಸ್ಲಿಂ ಸಮುದಾಯದವರು ಸೇರಿ ಅನ್ಯೋನ್ಯತೆಯಿಂದ ಆಚರಿಸುತ್ತಾರೆ. ಈ ಹಬ್ಬವನ್ನು ಮುಸ್ಲಿಂರಿಗಿಂತಲೂ ಹೆಚ್ಚು ಆಸಕ್ತಿಯಿಂದ ಉಳಿದ ಜಾತಿಯವರು ಆಚರಿಸುತ್ತಾರೆ. ಅಂದು ಪೀರಲು ದೇವರ ಗುಡಿಯಿಂದ ಪೀರಲು ದೇವರನ್ನು ಹೊರಡಿಸುತ್ತಾರೆ. ಈ ಮೆರವಣಿಗೆಯಲ್ಲಿ ಬಗೆಬಗೆಯ ವೇಷಗಳಿರುತ್ತವೆ. ಹುಲಿವೇಷ, ಕರಡಿ ವೇಷ, ಸ್ತ್ರೀವೇಷ, ಅಚ್ಚಳ್ಳಿ, ಪಿಚ್ಚಳ್ಳಿ ಮೊದಲಾದ ವೇಷಗಳನ್ನು ಹಾಕಿಕೊಂಡು ಮೆರವಣಿಗೆ ಮಾಡಲಾಗುತ್ತದೆ. ಈ

ವೇಷಗಳು ಮೆರವಣಿಗೆಯಲ್ಲಿ ಮಾತ್ರವಲ್ಲದೆ ಮನೆಮನೆಗೂ ಬಂದು ಹಣ ಪಡೆಯುವ ಪದ್ಧತಿ ರೂಡಿಯಲ್ಲಿದೆ. ಈ ಹಬ್ಬ ಕೇವಲ ಆಚರಣೆ ಮಾತ್ರವಲ್ಲದೆ ಕೋಮು ಸೌಹಾರ್ದತೆಯನ್ನು ಸಾಧಿಸುವ ಮಹತ್ವದ ಕಾರ್ಯವನ್ನು ಮಾಡುತ್ತಿದ್ದು, ಇಂತಹ ಹಬ್ಬಗಳ ಅವಶ್ಯಕತೆ ಹೆಚ್ಚಿದೆ.

ಗಣೇಶ ಚೌತಿಯ ಹಬ್ಬವನ್ನು ಹೊಸಪೇಟೆ ತಾಲೂಕಿನಾದ್ಯಂತ ವಿಶಿಷ್ಠವಾಗಿ ಆಚರಿಸಲಾಗುತ್ತದೆ. ಹೊಸಪೇಟೆ, ಕಮಲಾಪುರ, ಕಂಪ್ಲಿ, ಮರಿಯಮ್ಮನಹಳ್ಳಿಗಳಲ್ಲಿ ಗಣೇಶ ಚೌತಿ ಆಚರಿಸಲೆಂದೇ ಅನೇಕ ಯುವಕ ಸಂಘಗಳು ಅಸ್ಥಿತ್ವಕ್ಕೆ ಬಂದಿರುತ್ತವೆ. ಗಣೇಶನ ಪಟ್ಟಿಯನ್ನು ಸಂಗ್ರಹಿಸುವ ಮೂಲಕ ಗಣೇಶವನ್ನು ಪ್ರತಿಷ್ಠಾಪನೆ ಮಾಡಿ ಮೂರು ದಿನ, ಐದು ದಿನ, ಒಂಭತ್ತು ದಿನ ಹೀಗೆ ವಿಭಿನ್ನ ದಿನಗಳಾವಧಿಯಲ್ಲಿ ಗಣೇಶನನ್ನು ಕೂಡಿಸುವರು. ಸಾಂಘಿಕವಾಗಿ ಹಣ ಸಂಗ್ರಹ ಮಾಡಿ ಖರ್ಚು ಮಾಡಿ ಪರಸ್ಪರ ಜವಾಬ್ದಾರಿ, ಸಹಕಾರದಿಂದ ಯಶಸ್ವಿಯಾಗಿ ಆಚರಿಸುತ್ತಾರೆ. ಗಣೇಶನ ಹಬ್ಬವನ್ನು ಹಲವು ವರ್ಷಗಳಿಂದ ಪ್ರತಿವರ್ಷವೂ ಆಚರಿಸಿಕೊಂಡು ಯಶಸ್ವಿಯಾಗಿ ಮುನ್ನಡೆದಿರುವ ಹಲವಾರು ಯುವಕ ಸಂಘಗಳು ಹೊಸಪೇಟೆ ತಾಲೂಕಿನಲ್ಲಿವೆ.

ಹಬ್ಬಗಳು ಕೌಟುಂಬಿಕ ಆಚರಣೆಗಳಾದರೆ ಜಾತ್ರೆಗಳು ಸಾರ್ವಜನಿಕ ಆಚರಣೆಗಳಾಗಿವೆ. ಕೆಲವು ಸಲ ಹಬ್ಬ ಮತ್ತು ಜಾತ್ರೆ ಒಂದೇ ದಿವಸ ನಡೆಯುವುದಿದೆ. 'ಹಂಪಿ ಜಾತ್ರೆ' ಇಡೀ ತಾಲೂಕಿಗೆ ಅತ್ಯಂತ ಸಡಗರದ ಜಾತ್ರೆ. ಇದಲ್ಲದೆ ಆಯಾಯ ಹಳ್ಳಿಗಳಲ್ಲಿ ಗ್ರಾಮದೇವತೆಗಳ ಜಾತ್ರೆಯೂ ನಡೆಯುತ್ತಿರುತ್ತದೆ. ಕೆಲವೊಂದು ಜಾತ್ರೆಗಳು ವರ್ಷಕ್ಕೊಮ್ಮೆ ನಡೆದರೆ, ಇನ್ನೂ ಕೆಲವು ಎರಡು ವರ್ಷಕ್ಕೊಮ್ಮೆ, ಮೂರು ವರ್ಷಕ್ಕೊಮ್ಮೆ ನಡೆಯುತ್ತವೆ. ಕೆಲವು ಜಾತ್ರೆಗಳು ಒಂದು ಗ್ರಾಮಕ್ಕಷ್ಟೇ ಸೀಮಿತವಾಗಿದ್ದರೆ, ಇನ್ನೂ ಕೆಲವು ಇಡೀ ಹೋಬಳಿಯನ್ನು ಒಳಗೊಂಡಿರುತ್ತವೆ. ಗ್ರಾಮ ದೇವತೆಗಳ ಜಾತ್ರೆಗಳಲ್ಲಿ 'ಪ್ರಾಣಬಲಿ' ಕೊಡುವ ಪದ್ಧತಿ ಸಾಮಾನ್ಯವಾಗಿದೆ. ಕುರಿಗಳನ್ನು ಸಹಜವೆನ್ನುವಂತೆ ಬಲಿ ಕೊಡಲಾಗುತ್ತದೆ. ಮೂರು ವರ್ಷಕ್ಕೊಮ್ಮೆ, ಆರು ವರ್ಷಕ್ಕೊಮ್ಮೆ ನಡೆಯುವ ಗ್ರಾಮದೇವತೆಯ ಜಾತ್ರೆಯಲ್ಲಿ ಕೋಣ ಬಲಿಕೊಡುವ ಪದ್ಧತಿ ರೂಢಿಯಲ್ಲಿದೆ. ಊರಿನ ಸಮಸ್ತರೂ ಸೇರಿಹಣ ಕೂಡಿಸಿ ಮರಿಕೋಣವನ್ನು ಕೊಂಡು ಕೊಂಡು ಸಾಕುತ್ತಾರೆ. ಹೀಗೆ ಸಾಕಿದ ಕೋಣವು ಯಾರ ಹೊಲದಲ್ಲಿ ಬೇಕಾದರೂ ಮೇಯುವ ಸ್ವಾತಂತ್ರ್ಯ ಹೊಂದಿರುತ್ತದೆ. ಬೇಡಿಕೊಂಡ ವರ್ಷದ ಜಾತ್ರೆಯಲ್ಲಿ ಅದನ್ನು ಕಡಿಯಲಾಗುತ್ತದೆ. ಹೀಗೆ ಕಡಿಯಲಾದ ಕೋಣದ ರಕ್ತಕ್ಕೆ ವಿಶೇಷವಾದ ಮಹತ್ವವಿದೆ. ಇದನ್ನು ಗ್ರಾಮದ ಹುಲ್ಸು (ಸಮೃದ್ಧಿ) ಫಲವಂತಿಕೆ ಎಂದು ಭಾವಿಸಲಾಗುತ್ತದೆ. ಹಿಂದಿನ ಕಾಲದಲ್ಲಿ ಪರ ಊರಿನವರು ಈ ಹುಲ್ಸನ್ನು ಯಾವುದಾದರೂ ಮಾದರಿಯಲ್ಲಿ ತಮ್ಮ ಊರಿಗೆ ಕೊಂಡೊಯ್ಯಲು ಪ್ರಯತ್ನಿಸುತ್ತಿದ್ದರು. ಆಗ ಪರಸ್ಪರ ಹೊಡೆದಾಟವಾಗುತ್ತಿತ್ತು. ಏಕೆಂದರೆ, ಯಾವ ಗ್ರಾಮದಿಂದ ಹುಲ್ಸನ್ನು ಕೊಂಡೊಯ್ಯಲಾಗುತ್ತದೋ ಆ ಗ್ರಾಮದ ಹುಲ್ಸು ಹೊರಟು

ಹೋಗುತ್ತದೆ ಎಂಬ ನಂಬಿಕೆಯಿದೆ. ಇದರಿಂದಾಗಿ ಬೇರೆ ಊರವರು ಹುಲ್ಸನ್ನು ಒಯ್ಯುವಾಗ ಸಿಕ್ಕಿಬಿದ್ದರೆ ಅವರನ್ನು ಕೊಂದು ಹಾಕಲಾಗುತ್ತಿತ್ತು. ಊರಿನ ತುಂಬ ಈ ರೀತಿ ಹುಲ್ಸನ್ನು ಕೊಂಡೊಯ್ಯುತ್ತಿದ್ದವರ ಸಲುವಾಗಿ ಅನೇಕ ವೀರಗಲ್ಲುಗಳನ್ನು ನೆಡಲಾಗಿದೆ. ಇಂತಹ ಹಲವು ವೀರಗಲ್ಲುಗಳು ಹೊಸಪೇಟೆ ತಾಲೂಕಿನಲ್ಲಿ ಸಿಗುತ್ತವೆ. ಇಂದಿನ ದಿನಗಳಲ್ಲಿ ಹುಲ್ಸನ್ನು ಪರ ಊರಿಗೆ ಸಾಗಿಸುವ ಕ್ರಮ ಇಲ್ಲ. ಆದರೆ ಈ ರೀತಿಯ ಜಾತ್ರೆಗೆ ಪರ ಊರಿನವರಾರೂ ಹೋಗುವಂತಿಲ್ಲ. ಜಾತ್ರೆ ನಡೆಯುವ ದಿನದಂದು ಇಡೀ ಊರಿಗೆ ಬೇಲಿ ಹಾಕಿ ನಿಯಂತ್ರಿಸಲಾಗುತ್ತಿದೆ. ಇಂದಿಗೂ ಅನೇಕ ಕಡೆ ಕೋಣನ ಬಲಿಯನ್ನು ಕೊಡುವ ಕ್ರಮ ಜೀವಂತವಾಗಿರುವುದನ್ನು ನೋಡಬಹುದಾಗಿದೆ.

ಹೊಸಪೇಟೆ ತಾಲೂಕಿನ ಜನಜೀವನದಲ್ಲಿ ಕಂಡು ಬರುವ ಪ್ರಮುಖ ಸಮುದಾಯಗಳ ಸಂಕ್ಷಿಪ್ತ ವಿವರ ಈ ರೀತಿಯಿದೆ.

**ಬ್ರಾಹ್ಮಣರು :** ಬ್ರಾಹ್ಮಣರು ಪರಂಪರಾನುಗತವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಹಲವು ಜನಬ್ರಾಹ್ಮಣರು ತಮ್ಮ ಉಪಜೀವನಕ್ಕಾಗಿ ಪುರೋಹಿತರಾಗಿ ದುಡಿಯುತ್ತಿರುವವರು. ಕೆಲವು ಬ್ರಾಹ್ಮಣರು ವಿದ್ಯಾವಂತರಾಗಿ ಸರಕಾರಿ, ಅರೆಸರಕಾರಿ ಮತ್ತು ಖಾಸಗಿ ರಂಗದ ಉನ್ನತ ಹುದ್ದೆಗಳಲ್ಲಿದ್ದಾರೆ. ಇನ್ನೂ ಕೆಲವು ಬ್ರಾಹ್ಮಣರು 'ಅಡಿಗೆ ಮಾಡುವ' ಕಾಯಕವನ್ನು ಪರಂಪರಾನು ಗತವಾಗಿ ಮುಂದುವರೆಸಿರುವುದು ಕಂಡು ಬರುತ್ತದೆ. ಶಾಸ್ತ್ರನಿಷ್ಠತೆ ಕ್ಷೀಣಿಸುತ್ತಿರುವ ಸಂದರ್ಭದಲ್ಲಿ ಬ್ರಾಹ್ಮಣರೂ ಇತರರಂತೆ ಇನ್ನಿತರ ಉದ್ದಿಮೆಗಳಲ್ಲಿ ತೊಡಗುತ್ತಿರುವುದು ಕಂಡು ಬರುತ್ತದೆ. ಆದಾಗ್ಯೂ ಅವರ ಸಂಪ್ರದಾಯಬದ್ಧ ಆಚರಣೆಗಳು ಹಿಂದೂ ಸಂಸ್ಕೃತಿಯ ಕಂಠಮಣಿಗಳಂತಿವೆ ಎಂಬುದು ಕಟ್ಟಾ ಸಂಪ್ರದಾಯಸ್ಥರ ವಾದವಾಗಿದೆ.

**ಆರ್ಯವೈಶ್ಯರು :** ಆರ್ಯವೈಶ್ಯರು ವ್ಯಾಪಾರಿ ಉದ್ದೇಶಗಳಿಗಾಗಿ ವಿಜಯನಗರ ಸಾಮ್ರಾಜ್ಯದ ಆಕರ್ಷಣೆಗೆ ಒಳಗಾಗಿ ವಲಸೆ ಬಂದವರೆಂದು ತಿಳಿದು ಬರುತ್ತದೆ. ಕೊಮಟಿಗರು, ಶೆಟ್ಟರು ಎಂದೆಲ್ಲಾ ಕರೆಯುವ ಈ ಸಮುದಾಯದವರು ತಾಲೂಕಿನಲ್ಲಿರುವ ಪ್ರಮುಖ ಸಮಾಜಗಳಲ್ಲಿ ಒಂದಾಗಿದೆ. ವ್ಯಾಪಾರವೇ ಮುಖ್ಯ ಉದ್ಯೋಗವಾಗಿರುವುದರಿಂದ ಆರ್ಥಿಕ ಕ್ಷೇತ್ರದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದೆ. ಹೊಸಪೇಟೆ ತಾಲೂಕಿನ ಶಿಕ್ಷಣ, ಉದ್ಯಮ, ವ್ಯಾಪಾರ ಮುಂತಾದ ಪ್ರಮುಖ ರಂಗದಲ್ಲಿ ತೊಡಗಿರುವ ಕೊಮಟಿಗರು ಆರ್ಥಿಕ ಮತ್ತು ಸಾಮಾಜಿಕ ರಂಗದಲ್ಲಿ ಸಕ್ರಿಯರಾಗಿದ್ದಾರೆ. ಉತ್ತಮ ಸಂಘಟನೆ ಮತ್ತು ಸಮಾಜದ ಒಗ್ಗಟ್ಟನ್ನು ಕಾಪಾಡಿಕೊಂಡು ಬಂದಿರುವ ಈ ಸಮಾಜ ಕನ್ನಡ ಮನೆ ಮಾತಾಗಿರುವ ವೈಶ್ಯರಿಗೆ 'ವಾಸವಿ' ನಗರೇಶ್ವರ ದೇವರು ಇವರ ಆರಾಧ್ಯ ದೈವವಾಗಿದ್ದಾರೆ.

**ವಾಲ್ಮೀಕಿ ನಾಯಕ ಸಮಾಜ :** ವಿಜಯನಗರ ಸೇವೆಯಲ್ಲಿ ಕಾದಾಳುಗಳಾಗಿದ್ದ ಈ ನಾಯಕರು ಇಂದಿಗೂ ತಮ್ಮ ಶ್ರೇಯಸ್ಸನ್ನು ಕಾಪಾಡಿಕೊಂಡು ಬರುತ್ತಿದ್ದಾರೆ. ಧೈರ್ಯ, ಸಾಹಸ, ಪರಾಕ್ರಮಗಳಿಗೆ ಹೆಸರು ವಾಸಿಯಾದ ಈ ಸಮಾಜ ಹೊಸಪೇಟೆ ತಾಲೂಕಿನಲ್ಲಿ ಶೇ. ೧೬ ರಷ್ಟಿದ್ದರೂ ಅತ್ಯಂತ ಬಲಿಷ್ಠ ಸಮಾಜವಾಗಿ ಗುರುತಿಸಿಕೊಂಡಿದೆ. ಖ್ಯಾತ ಸಮಾಜ ಶಾಸ್ತ್ರಜ್ಞರಾದ ವಿಲಿಯಂಸ್ಮಿತ್ ರವರು ಈ ಸಮುದಾಯ ಬಗ್ಗೆ, ಆಡಿರುವ ಮಾತು ಉಲ್ಲೇಖನೀಯವಾಗಿದೆ. ವಾಲ್ಮೀಕಿ, ನಾಯಕರಷ್ಟು ಧೈರ್ಯಶಾಲಿಗಳು ಜಗತ್ತಿನಲ್ಲಿ ಸಿಗಬಹುದು. ಆದರೆ ನಾಯಕರಿಗಿಂತಲೂ ಹೆಚ್ಚಿನ ಧೈರ್ಯ ಶಾಲಿಗಳು ಸಿಗಲಾರರೆಂದು ಹೇಳಿರುವುದು ಗಮನಾರ್ಹವಾಗಿದೆ. ವಿಜಯನಗರ ಸಾಮ್ರಾಜ್ಯದ ಪತನವಾದ ನಂತರ ಕರ್ನಾಟಕ ರಾಜ್ಯದ ಸುಮಾರು ೭ ಪಾಳೆಯಪಟ್ಟುಗಳಲ್ಲಿ ಬಹುತೇಕ ಪಾಳೆಯಗಾರರು ಈ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ಬಹಳಷ್ಟು ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಸೈನಿಕರ ಸಂಬಂಧಿಗಳಾಗಿದ್ದರೆಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಕ್ರೀಡಾರಂಗದಲ್ಲಿ ಅದರಲ್ಲೂ ಕುಸ್ತಿಯಲ್ಲಿ ನಾಯಕರದು ಎತ್ತಿದ ಕೈ. ಬೇಟೆಯಾಡುವುದರಲ್ಲಿ ನಿಸ್ಸೀಮರು. ಗುಡ್ಡದ ಮೇಲೆ ಧಾನ್ಯದ ಚೀಲವನ್ನು ಹೊತ್ತುಕೊಂಡು ಹಿಮ್ಮುಖವಾಗಿ ವೇಗದಿಂದ ಓಡುವುದಕ್ಕೂ, ಕಾಲಿಗೆ ಹುಲ್ಲಿನ ಹಗ್ಗವನ್ನು ಕಟ್ಟಿಕೊಂಡು ಅದನ್ನು ಬಿಡಿಸಲು ಆಹ್ವಾನವೀಯುವುದಕ್ಕೂ ಈ ಬೇಡನಾಯಕರು ಸರಿ ಸಾಟಿಯಿಲ್ಲದವರೆಂಬುದು ವಿಜಯನಗರ ಕಾಲದಿಂದ ಪ್ರಚಲಿತವಾಗಿದೆ. ಬೇಟೆಯಾಡುವುದು ಪಾರಂಪರಿಕ ಜೀವನ ಮಾರ್ಗವಾದುದರಿಂದ ಇವರನ್ನು 'ಬೇಡರು' ಎಂದು ಕರೆಯಲಾಗಿದೆ. ನಾಯಕರು, ಹನುಮಂತನ ಆರಾಧಕರು. ಯುಗಾದಿ ಹಬ್ಬಕ್ಕೆ ಇಂದಿಗೂ ಸಾಂಪ್ರದಾಯಿಕವಾಗಿ ಬೇಟೆಗೆ ಹೋಗುವುದರ ಮೂಲಕ 'ಬೇಟೆ' ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ಹೊಸಪೇಟೆ ತಾಲೂಕಿನ ಬೇಡರಲ್ಲಿ ಊರುಬೇಡ, ಮ್ಯಾಸಬೇಡ, ಮೊಂಡಬೇಡ ಎಂಬ ಒಳಪಂಗಡಗಳಿವೆ. ಇವುಗಳೊಳಗೆ ಮತ್ತೆ ಬೆಡಗುಗಳಿವೆ. ಒಂದೇ ಬೆಡಗಿನ ಒಳಗಡೆ ವೈವಾಹಿಕ ಸಂಬಂಧಗಳನ್ನು ನಿಷೇಧಿಸಲಾಗಿದೆ. ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಊರು ಬೇಡರಿದ್ದಾರೆ. ದೇವದಾಸಿ ಪದ್ಧತಿಯನ್ನು ಇಂದಿಗೂ ಒಂದಿಲ್ಲೊಂದು ರೂಪದಲ್ಲಿ ನಡೆಸಿಕೊಂಡು ಬರುತ್ತಿದ್ದು, ಇದರ ವಿರುದ್ಧ ಬೇಡ ಸಮುದಾಯದ ಸಂಘಟನೆಗಳು ಜಾಗೃತಿಯುಂಟು ಮಾಡುವ ಮೂಲಕ ಬಹುಮಟ್ಟಿಗೆ ಕಡಿಮೆಯಾಗಿದೆ ಎಂದು ಹೇಳಬಹುದು.

**ಮುಸ್ಲಿಂ ಸಮಾಜ :** ಹೊಸಪೇಟೆ ತಾಲೂಕಿನಲ್ಲಿ ಹಿಂದೂ ಧರ್ಮವನ್ನು ಬಿಟ್ಟರೆ ಇಸ್ಲಾಂ ಪ್ರಬಲವಾದ ಮತ್ತೊಂದು ಧರ್ಮ. ಮುಸ್ಲಿಂರು ಉರ್ದು ಭಾಷೆಯನ್ನಾಡುತ್ತಾರೆ. ತಾಲೂಕಿನ ಮುಸ್ಲೀಮರಲ್ಲಿ ಸೈಯದ್ ಶೇಕ್, ಪಠಾಣ ಮತ್ತು ಪಿಂಜಾರ ಎಂಬ ಒಳಪಂಗಡಗಳಿವೆ. ಸಾಮಾನ್ಯವಾಗಿ ಮುಸ್ಲಿಂರು ವ್ಯಾಪಾರದಲ್ಲಿ ತೊಡಗಿಕೊಂಡಿರುವುದೇ ಹೆಚ್ಚು. ಮುಸ್ಲೀಮರಲ್ಲಿ ಪ್ರಮುಖವಾದ ಒಳಪಂಗಡವಾದ ಪಿಂಜಾರರು ಇವರು ಆಚರಣೆಯಲ್ಲಿ ಮುಸ್ಲಿಂರಂತೆ ಕಂಡು ಬರುತ್ತಾರಾದರೂ ಹಿಂದೂ ಧರ್ಮದಿಂದ ಹೆಚ್ಚು

ಪ್ರಭಾವಿತರಾದವರು. ಮುಸ್ಲಿಂ ಧರ್ಮದ ಬಿಗಿಯಾದ ಆಚರಣೆಗಳನ್ನು ಪಿಂಜಾರರು ಆಚರಿಸಬೇಕೆಂದಿಲ್ಲ. ಇವರ ಸ್ತ್ರೀಯರು ಇತರೆ ಮುಸ್ಲಿಂರಂತೆ ಸಾಮಾನ್ಯವಾಗಿ ಬುರ್ಖಾ ಧರಿಸುವುದಿಲ್ಲ. ಮುಸ್ಲಿಂ ಮತ್ತು ಪಿಂಜಾರರೊಂದಿಗೆ ವೈವಾಹಿಕ ಸಂಬಂಧಗಳು ಏರ್ಪಡುವುದು ಅಪರೂಪ. ಇವರಲ್ಲಿ ಬಯಲಾಟದ ಉತ್ತಮ  ಕಲಾವಿದರೂ ಇದ್ದಾರೆ. ಪೀರಲು ಹಬ್ಬ ಪಿಂಜಾರರ ಪ್ರಮುಖ ಹಬ್ಬ. ಪೀರಲು ದೇವರು ಮಾತ್ರವಲ್ಲದೆ ಇತರೆ ಗ್ರಾಮ ದೇವತೆಗಳನ್ನು ನಂಬುತ್ತಾರೆ. ಮುಸ್ಲೀಮರನ್ನು ಗುರುಗಳಿಗೆ ಸಮಾನರೆಂದು ಭಾವಿಸುವ ಇವರು ಹಿಂದೂ ಧರ್ಮದಿಂದಲೇ ಸಾಕಷ್ಟು ಪ್ರಭಾವಿತರಾಗಿದ್ದಾರೆ.

**ವಿಶ್ವಕರ್ಮ ಸಮಾಜ :** ಅಕ್ಕಸಾಲಿಗ, ಬಡಿಗೇರ, ಕಮ್ಮಾರ, ಕಂಚಾಗಾರ, ಇವರನ್ನು ಒಟ್ಟಾಗಿ ವಿಶ್ವಕರ್ಮವೆಂದು ಕರೆಯುತ್ತಾರೆ. ಅಕ್ಕಸಾಲಿಗರು ಚಿನ್ನದ ಕೆಲಸವನ್ನು, ಕೆಲಸವನ್ನು ಬಡಿಗೇರರು ಮರದ ಕೆಲಸವನ್ನು ಮಾಡುತ್ತಾರೆ. ವಿಶ್ವಕರ್ಮವೆಂಬ ದೇವಶಿಲ್ಪಿ ತಮ್ಮ ವಂಶದ ಮೂಲ ಪುರಷನೆಂದು ಇವರು ನಂಬುತ್ತಾರೆ. ಕೃಷಿ ಸಂಸ್ಕೃತಿಯ 'ಆಯಾಗಾರ' ಪದ್ಧತಿಯಲ್ಲಿ ಇವರಿಗೆ ಪ್ರಮುಖಸ್ಥಾನವಿದೆ. ಪರಂಪರಾನುಗತ ಆಯಾಯ ವೃತ್ತಿಯಲ್ಲಿ ಇವತ್ತಿಗೂ ಮುಂದುವರೆದಿರುವ ಈ ಸಮುದಾಯ ಹೊಸಪೇಟೆ ತಾಲೂಕಿನ ಜನಜೀವನದಲ್ಲಿ ಪ್ರಧಾನ ಪಾತ್ರವಹಿಸಿದೆ. ಇವರ ಭಾಷೆ ಕನ್ನಡವೇ ಆಗಿದ್ದು, ಒಟ್ಟಾರೆಯಾಗಿ ಇವರ ಜೀವನಮಟ್ಟ ಇನ್ನೂ ಸುಧಾರಿಸಬೇಕಾಗಿದ್ದು, ಸಂಘಟಿತರಾಗಬೇಕಾಗಿದೆ.

**ಹರಿಜನರು :** ಹರಿಜನರಲ್ಲಿ ಮಾದಿಗರು, ಚೆಲುವಾದಿಗರು, ಹೊಲೆಯರು ಸೇರಿದ್ದಾರೆ. ಈ ಜನರಲ್ಲಿ ಸ್ವಾತಂತ್ರ್ಯ ನಂತರದಲ್ಲಿ ಅದರಲ್ಲೂ ದೇಶದ ತುರ್ತುಪರಿಸ್ಥಿತಿ ನಂತರದ ದಿನಗಳಲ್ಲಿ ಅನೇಕ ಪ್ರಗತಿಪರ ಚಿಂತಕರ ಪ್ರಭಾವದಿಂದಾಗಿ ಈ ಸಮುದಾಯದ ಸಂಘಟನೆಯಲ್ಲಿ ಮಹತ್ವದ ಬದಲಾವಣೆಗಳಾದವು. ಹೊಸಪೇಟೆ ತಾಲೂಕಿನಲ್ಲಿ ಇದೇ ಕಾಲಘಟ್ಟದಲ್ಲಿ ದಲಿತರ ವಿವಿದ ಒಳಪಂಗಡಗಳ ಸಂಘಟನೆಗಳು ಆರಂಭವಾದವು. ಇದರಿಂದ ಸ್ವಲ್ಪಮಟ್ಟಿಗೆ ಸುಧಾರಣೆಯಾಗಿದ್ದರೂ ಇದು ನಗರಗಳಲ್ಲಿ ಮಾತ್ರ ಆದಂತಹ ಬದಲಾವಣೆ ಹೊರತು ಗ್ರಾಮೀಣ ಪ್ರದೇಶದಲ್ಲಿ ದಲಿತರ ಸ್ಥಿತಿಗತಿ, ಸಾಮಾಜಿಕ ಪರಿಸ್ಥಿತಿಯಲ್ಲಿ ಅಂಥಹ ಹೇಳಿಕೊಳ್ಳುವಂತಹ ಬದಲಾವಣೆಗಳೇನಾಗಿಲ್ಲವೆಂದೇ ಹೇಳಬಹುದು. 'ಮಾದರು' ಎಂದು ಸ್ಥಳೀಯರಿಂದ ಕರೆಯಲ್ಪಡುವ ಹರಿಜನರು ತಾಲೂಕಿನ ಬಹುಸಂಖ್ಯಾತ ಪರಿಶಿಷ್ಟ ಜಾತಿಯವರು ಹಾಗೆಯೇ ಹರಿಜನರು ಇರುತ್ತಾರಾದರೂ 'ಹರಿಜನಕೇರಿ ಅಥವಾ ಮಾದರಕೇರಿ' ಎಂದು ಪ್ರತ್ಯೇಕವಾಗಿಯೇ ಗುರುತಿಸಲಾಗುತ್ತಿದೆ. ಕೆಲವೊಮ್ಮೆ ಹರಿಜನರೇ ತಮ್ಮನ್ನು 'ಕೇರಿಜನ' ಎಂದೂ ಉಳಿದವರನ್ನು ಊರುಜನ ಎಂದು ಹೇಳುತ್ತಾರೆ. ಕನ್ನಡ ಮನೆಮಾತಾಗಿರುವ ಹರಿಜನರಲ್ಲಿ ಪ್ರತಿಯೊಂದು ಒಳಪಂಗಡದಲ್ಲಿ ಕುಲನಾಮಗಳಾದ ಬೆಡುಗುಗಳಿವೆ. ಜನಸಂಖ್ಯೆಯಲ್ಲಿ ಇವರು ಬಹು ಸಂಖ್ಯಾತರಾದರೂ ಮುಂದುವರೆದವರಲ್ಲ. ದೇವದಾಸಿಯರಿರುವಂತಹ ಸಮಾಜವಾಗಿದೆ. ಇತ್ತೀಚಿನ ದಿನಗಳಲ್ಲಿ ಹೊಸಪೇಟೆ ತಾಲೂಕಿನ ಬಹಳಷ್ಟು ಕಡೆಯ ದಲಿತರಲ್ಲಿ ವಿದ್ಯಾವಂತರ ಸಂಖ್ಯೆ ಅಧಿಕ ಗೊಳ್ಳುತ್ತಿದ್ದು, ಇದೊಂದು ಉತ್ತಮ ಬೆಳವಣಿಗೆಯೆಂದು ಹೇಳಬಹುದು.

**ಮೇದಾರ ಸಮಾಜ :** ಬಿದಿರಿನ ಮತ್ತು ನೈಸರ್ಗಿಕ ಕಲ್ಲು ಬಂಡೆಗಳನ್ನು ಮಾರಾಟ ಮಾಡಿ ಜೀವನ ನಡೆಸುವ ಮೇದಾರ ಸಮಾಜ ಹೊಸಪೇಟೆ ತಾಲೂಕಿನ ಪ್ರಮುಖ ಪಟ್ಟಣಗಳಲ್ಲಿ ನೆಲೆಸಿದೆ. ಶಿವಶರಣ ಕೇತಯ್ಯನವರ ಸಂಪ್ರದಾಯದವರಾದ ಇವರು ದೈವ ಪರಾಯಣರು, ಶ್ರಮಜೀವಿಗಳು. ಬಿದಿರಿನಿಂದ ಬುಟ್ಟಿ ಮತ್ತು ಇತರ ಕರಕುಶಲ ವಸ್ತುಗಳನ್ನು ತಯಾರಿಸುವ ಮೇದಾರರು ಇವುಗಳನ್ನು ಆಯ್ದ ಪಟ್ಟಣಗಳಲ್ಲಿ ಮಾರಾಟ ಮಾಡುವರು. ಹಳ್ಳಿಗಳಿಗೂ ಹೋಗಿ ಮಾರಾಟ ಮಾಡುವುದುಂಟು. ಕೃಷಿ ಕೆಲಸಗಳಲ್ಲಿ ತೊಡಗಿ ಕೊಂಡಿರುವ ಮೇದಾರರ ಸಂಖ್ಯೆ ಕಡಿಮೆಯೆಂದೇ ಹೇಳಬಹುದು. ಪಾರಂಪರಿಕ ವೃತ್ತಿಯಲ್ಲಿಯೇ ಮುಂದುವರೆದಿರುವ ಮೇದಾರರು ಶಿಕ್ಷಣವೇ ಮೊದಲಾದ ಪ್ರಮುಖ ರಂಗಗಳಲ್ಲಿ ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡಿಲ್ಲವೆಂದೇ ಹೇಳಬಹುದು. ಶ್ರಮಿಕ ವರ್ಗವಾಗಿರುವ ಈ ಸಮುದಾಯವನ್ನು ಸಾಂಘಿಕ ಪ್ರವೃತ್ತಿಯಲ್ಲಿ ತೊಡಗಿಸುವ ಆ ಮೂಲಕ ಸಮಾಜದ ಮುಖ್ಯ ವಾಹಿನಿಗೆ ತರುವ ಅವಶ್ಯಕತೆ ಇದೆ ಎಂದು ಹೇಳಬಹುದು.

**ಗೊಲ್ಲರು :** ಯದುವಂಶದವರೆಂದು ಹೇಳಿಕೊಳ್ಳುವ ಗೊಲ್ಲವರು ಅಥವಾ ಯಾದವರು ಕೃಷ್ಣನ ಭಕ್ತರಲ್ಲದೆ ವೈಷ್ಣವ ಸಂಪ್ರದಾಯಸ್ಥರು. ಹಾಲು, ಮೊಸರು, ಬೆಣ್ಣೆ ಮುಂತಾದ ಹೈನು ಪದಾರ್ಥಗಳನ್ನು ಮಾರಾಟ ಮಾಡುವ ಇವರು ಇಂದಿಗೂ ತಮ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಕೃಷಿ, ಹೈನುಗಾರಿಕೆಗಳೆರಡನ್ನು ಮಾಡುವ ಈ ಸಮುದಾಯ ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿಯೇ ನೆಲೆಸಿದೆ. ನೀರಾವರಿ ಪ್ರದೇಶದ ಹಳ್ಳಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಈ ಸಮುದಾಯ ಇದಕ್ಕೆ ಕಾರಣ ದನಕರುಗಳಿಗೆ ನೀರು, ಮೇವಿನ ಅನುಕೂಲವಿರುವುದೇ ಆಗಿರುತ್ತದೆ. ಈ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿದಿದ್ದರೂ ಆರ್ಥಿಕವಾಗಿ ಸ್ವಲ್ಪ ಸುಧಾರಿಸಿದ ಸಮಾಜವೆಂದು ಹೇಳಿದರೆ ತಪ್ಪಾಗಲಾರದು.

**ಕುರುಬರು :** ಹೊಸಪೇಟೆ ತಾಲೂಕಿನ ಪ್ರಮುಖ ಸಮುದಾಯದವರಾಗಿದ್ದು, ಉಣ್ಣೆಯ ಉದ್ಯಮ ಹಾಗೂ ವ್ಯವಸಾಯದಲ್ಲಿ ಹೆಚ್ಚಾಗಿ ತೊಡಗಿಸಿಕೊಂಡಿದ್ದಾರೆ. ಸುಸಂಘಟಿತರಾಗುತ್ತಿರುವ ಈ ಸಮಾಜ ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಇನ್ನೂ ಸುಧಾರಿಸಬೇಕಾಗಿದೆ. 'ಉಣ್ಣೆಕಂಕಣ' ಮತ್ತು 'ಹತ್ತಿ ಕಂಕಣ' ಎಂಬುದು ಇವರಲ್ಲಿಯ ಪ್ರಧಾನ ಒಳಪಂಗಡಗಳು. ಈ ಒಳಪಂಗಡಗಳು ಅನೇಕ ಬೆಡಗುಗಳಾಗಿ ಒಡೆಯುತ್ತವೆ. ಇವರ ಮಾತೃ ಭಾಷೆ ಕನ್ನಡ. ಕುರುಬ ಸಮುದಾಯದವರು, ಜಾನಪದ ಕಲೆಗಿತ್ತ ಬಹು ದೊಡ್ಡ ಕೊಡುಗೆಯೆಂದರೆ 'ಡೊಳ್ಳುಕುಣಿತ'. ಕುರಿ ಹಾಗೂ ಕಂಬಳಿ ನೇಯ್ಗೆಯೇ ಪ್ರಧಾನ ವೃತ್ತಿ ಯಾಗಿರುವ ಇವರು ಇದೀಗ ಇವರಲ್ಲಿ ಕೆಲವರು ವ್ಯವಸಾಯದಲ್ಲಿ ತೊಡಗಿಸಿಕೊಂಡಿದ್ದಾರೆ. ಹಳ್ಳಿಯ ಆಗುಹೋಗುಗಳನ್ನು ನಿರ್ಧರಿಸುವ ಕೆಲವೇ ಕೆಲವು ಸಮಾಜಗಳಲ್ಲಿ ಕುರುಬರದೂ ಒಂದು. ಇವರ ಸಮಾಜದಲ್ಲಿ ಅನೇಕರು ಸ್ಥಿತಿವಂತರಾಗಿದ್ದರೆ ಹೆಚ್ಚಿನ ಸಂಖ್ಯೆಯಲ್ಲಿ ಇನ್ನೂ ಸುಧಾರಣೆಯ ಹಂತದಲ್ಲಿದ್ದಾರೆ.

**ಲಂಬಾಣಿ ಜನಾಂಗ :** ಲಂಬಾಣಿ ಸಮುದಾಯ ಕಾಡಿನ ಆಯಕಟ್ಟಿನ ಸ್ಥಳಗಳಲ್ಲಿ ನೆಲೆಸಿದ್ದು, ಧೈರ್ಯ, ಸಾಹಸಕ್ಕೆ ಹೆಸರುವಾಸಿಯಾದ, ಕಷ್ಟ ಕಾರ್ಪಣ್ಯಗಳನ್ನು ಎದುರಿಸುವ ಸಮುದಾಯವೆಂದೇ ಕರೆಯಲಾಗಿದೆ. ಲಂಬಾಣಿಗಳು ತಾಲೂಕಿನ ಪ್ರಮುಖ ಬುಡಕಟ್ಟಿನ ಸಮುದಾಯವಾಗಿರುತ್ತದೆ. ಇವರು ವಾಸಿಸುವ ನೆಲೆಗಳನ್ನು 'ತಾಂಡಾ'ಗಳೆಂದು ಕರೆಯಲಾಗುತ್ತಿದೆ. ಇತ್ತೀಚೆಗೆ ಇಂತಹ 'ತಾಂಡಾ' ಗಳನ್ನು ಕಂದಾಯ ಗ್ರಾಮಗಳೆಂದು ಪರಿಗಣಿಸಲಾಗುತ್ತಿದೆ. ಲಂಬಾಣಿಗಳು ತಾಂಡಾಗಳಲ್ಲಿ ಅಂದರೆ ಊರಿನ ಪಕ್ಕದಲ್ಲಿಯೇ ಪ್ರತ್ಯೇಕವಾಗಿ ವಾಸಿಸುತ್ತಿದ್ದು, ಪಕ್ಕದ ಊರಿನ ಹೆಸರಿನ ಮುಂದೆ 'ತಾಂಡಾ' ಹೆಸರು ಸೇರಿಸಿಕೊಂಡು ಈ ನಾಮದಿಂದ ಕರೆಯುವುದು ಬಳಕೆಯಲ್ಲಿದೆ. ಉದಾ : ಅನಂತಶಯನಗುಡಿಯ ಪಕ್ಕದ ಲಂಬಾಣಿ ಕೇರಿಗೆ ಅನಂತಶಯನಗುಡಿ ತಾಂಡಾವೆಂದು ಕರೆಯಲಾಗುತ್ತದೆ. ಅದೇ ರೀತಿ ಮಲಪನಗುಡಿ ಗ್ರಾಮದ ಪಕ್ಕದ ಲಂಬಾಣಿಗರ ಕೇರಿಗೆ 'ಮಲಪನಗುಡಿ ತಾಂಡಾ' ವೆಂದು ಕರೆಯುವಂತೆ ತಾಲೂಕಿನ ಬಹುತೇಕ ತಾಂಡಾಗಳ ಹೆಸರುಗಳು ಇದೇ ರೀತಿ ತಾಂಡಾಗಳಿಗೆ ಪಕ್ಕದ ಊರಿನ ಹೆಸರನ್ನೇ ಇಡಲಾಗಿರುತ್ತದೆ. ಲಂಬಾಣಿಗರ ಸಾಂಪ್ರದಾಯಿಕವಾದ ಆಚಾರ ವಿಚಾರಗಳು ಇಂದಿಗೂ ಉಳಿದುಕೊಂಡು ಬಂದಿವೆ. ವಿಶೇಷವಾಗಿ ಮಹಿಳೆಯರು ವೇಷಭೂಷಣಗಳು ವಿಶಿಷ್ಟವಾಗಿ ಕಾಣುತ್ತವೆ. ಈ ಸಮುದಾಯವೂ ಬೇರೆ ಕಡೆಯಿಂದ ವಲಸೆ ಬಂದಿದ್ದು, ಇವರು 'ಸೇವಾಲಾಲ್' ದೇವರಿಗೆ ನಡೆದುಕೊಳ್ಳುತ್ತಾರೆ. ಹೋಳಿ ಹಬ್ಬದ ಆಚರಣೆಯಲ್ಲಿ ಲಂಬಾಣಿ ಮಹಿಳೆಯರು ಕುಣಿಯುತ್ತಾ ಮನೆ ಮನೆಗೆ ಹೋಗುವ ಪದ್ಧತಿಯಿದೆ. ಹೊಸಪೇಟೆ ತಾಲೂಕಿನ ಕೆಲವು ತಾಂಡಾ ಜನರಲ್ಲಿ ಕೆಲವರು ಆರ್ಥಿಕವಾಗಿ ಸುಸ್ಥಿತಿಯಲ್ಲಿರುವುದು ಕಂಡು ಬರುತ್ತದೆ. ಪರಿಶಿಷ್ಟ ಜಾತಿಗೆ ಸೇರಿದ್ದರೂ ಈ ಸಮುದಾಯ ಅಸ್ಪೃಶ್ಯರಾಗಿರುವುದಿಲ್ಲ. ಪರಂಪರಾನುಗತ ವೃತ್ತಿಯೆಂದರೆ ಕಾಡಿನಿಂದ ಸೌದೆ ತಂದು ಮಾರಾಟ ಮಾಡಿ ಜೀವನ ನಡೆಸುವುದಾಗಿರುತ್ತದೆ.

**ಲಿಂಗಾಯತರು :** ವೀರಶೈವರೆಂದು ಕರೆಯಲ್ಪಡುವ ಈ ಸಮುದಾಯ ತಾಲೂಕಿನ ಪ್ರಮುಖ ಜಾತಿಯಾಗಿದೆ. ಜಂಗಮ, ಪಂಚಾಚಾರ್ಯರು, ಲಾಳಗಂಡರು, ಬಣಜಿಗ, ಗೌಡ ಎಂಬ ಒಳಪಂಗಡಗಳಿದ್ದು, ತಾಲೂಕಿನಾದ್ಯಂತ ಇವರು ಕಂಡು ಬರುತ್ತಾರೆ. ಲಿಂಗಾಯಿತರು 'ವೀರಶೈವ' ಧರ್ಮದವರೆಂದು ಹಿಂದೂ ಧರ್ಮಕ್ಕಿಂತ ಭಿನ್ನರಾಗಿ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಇವರದು ತಾಲೂಕಿನ ಅತ್ಯಂತ ಪ್ರಮುಖ ಸಮಾಜವಾಗಿದೆ. ಗ್ರಾಮಗಳ ಮುಖ್ಯಸ್ಥರಾಗಿರುವ ಇವರನ್ನು ಬಣಕಾರರು, ಗೌಡರು ಎಂದು ಕರೆಯಲಾಗುತ್ತದೆ. ಗ್ರಾಮಗಳಲ್ಲಿ ಇವರಿಗೆ ವಿಶೇಷ ಗೌರವಾದರಗಳಿವೆ. ಶೈಕ್ಷಣಿಕ, ಆರ್ಥಿಕ, ರಾಜಕೀಯ, ಔದ್ಯೋಗಿಕ, ವಾಣಿಜ್ಯರಂಗದಲ್ಲಿ ಸಕ್ರಿಯವಾಗಿ ಪಾತ್ರವಹಿಸುತ್ತಿರುವ ಇವರು ತಾಲೂಕಿನ ಆಗು ಹೋಗುಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದವರಾಗಿದ್ದಾರೆ.

**ನೇಕಾರ :** ನೇಕಾರ, ನೇವಾರ ಎಂದು ಕರೆಯಲ್ಪಡುವ ಈ ಸಮುದಾಯದ ಪಾರಂಪರಿಕ ವೃತ್ತಿ ನೇಯ್ಗೆ ಮಾಡುವುದು. ಬಿಳಿ ಮಗ್ಗ, ದೇವಾಂಗ, ಪಟ್ಟೇಗಾರ, ಸೌರಾಷ್ಟ್ರ, ತೊಗಟೆ, ಪದ್ಮಶಾಲಿಗಳೆಂಬ ಒಳಪಂಗಡಗಳಿರುತ್ತವೆ. ನೇಕಾರರಲ್ಲಿ ಸಸ್ಯಹಾರಿಗಳು, ಮಾಂಸಹಾರಿಗಳು ಇಬ್ಬರೂ ಇದ್ದಾರೆ. ಸಾಮಾನ್ಯವಾಗಿ ದೇವಾಂಗದವರು ಸಸ್ಯಹಾರಿಗಳಾದರೆ, ಪದ್ಮಶಾಲಿಗಳು ಮಾಂಸಹಾರಿಗಳಾಗಿದ್ದಾರೆ. 'ಮಾರ್ಕಂಡೇಶ್ವರ' ಇವನು ಆರಾಧ್ಯ ದೈವವಾಗಿದ್ದಾನೆ. ನೇಕಾರಿಕೆ ಇಂದು ಕುಲಕಸಬಾಗಿ ಉಳಿದಿಲ್ಲ. ಇತರ ಜಾತಿಯವರೂ ಈ ವೃತ್ತಿಗೆ ಬಂದಿದ್ದು, ಪರಂಪರಾನುಗತ ವೃತ್ತಿಯ ನೇಕಾರರು ತಾಲೂಕಿನ ಒಟ್ಟಾರೆ ಹಿಂದುಳಿದ ಸ್ಥಿತಿಯಲ್ಲಿದ್ದಾರೆ.

**ಹಜಾಮರು :** ಕ್ಷೌರಿಕ, ಹಡಪದ, ಸವಿತಾ ಸಮಾಜ ಎಂದೆಲ್ಲಾ ಕರೆಯಲ್ಪಡುವ ಈ ಸಮುದಾಯ ಜನಜೀವನದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದೆ. ಕ್ಷೌರ ಮಾಡುವುದು ಇವರ ಕುಲಕಸಬು. ಹಾಗೆಂದು ಹಜಾಮರು ಎಲ್ಲಾ ಜಾತಿಯವರಿಗೂ ಕ್ಷೌರಿಕೆ ಮಾಡುವುದಿಲ್ಲ. ನಗರ ಪ್ರದೇಶದಲ್ಲಿ ಈ ವ್ಯತ್ಯಾಸ ಅಷ್ಟಾಗಿ ಕಾಣಿಸುವುದಿಲ್ಲ. ಆದರೆ ಹಳ್ಳಿ ಗಾಡಿನಲ್ಲಿ ಲಿಂಗಾಯಿತರಲ್ಲಿಯೇ ಪ್ರತ್ಯೇಕ ಹಜಾಮರಿದ್ದು, ಇವರು ಮೇಲ್ಜಾತಿಯವರಿಗೆ ಮಾತ್ರ ಕ್ಷೌರ ಮಾಡುತ್ತಾರೆ. ಹಜಾಮರ ಸಾಮಾಜಿಕ ಸ್ಥಾನಮಾನ ಕೆಳಮಟ್ಟದಲ್ಲಿದ್ದರೂ ಇವರು ಅಸ್ಪೃಶ್ಯರಲ್ಲ. ಪರಂಪರಾನುಗತ ವೃತ್ತಿದಾರ ಕ್ಷೌರಿಕರಲ್ಲದೆ ಇತ್ತೀಚೆಗೆ ಇತರೆ ಜಾತಿಯವರೂ ಉಪ ಜೀವನಕ್ಕಾಗಿ ಈ ವೃತ್ತಿಯನ್ನು ಅವಲಂಬಿಸಿರುವ ಹಲವು ನಿದರ್ಶನಗಳು ಕಾಣಿಸುತ್ತವೆ.

**ಕಿಳ್ಳೆಕ್ಯಾತರು :** ಊರು ಕಿಳ್ಳೆಕ್ಯಾತರು ಮತ್ತು ಮರಾಠಿ ಕಿಳ್ಳೆಕ್ಯಾತರು ಎಂಬುದಾಗಿ ಎರಡು ಪಂಗಡಗಳಿವೆ. ಊರಿ ಕಿಳ್ಳೆಕ್ಯಾತರು ಕನ್ನಡ ಮಾತನಾಡುವವರಾಗಿದ್ದು, ಮರಾಠಿ ಕಿಳ್ಳೆಕ್ಯಾತರು ಮಾರಾಠಿ ಮಾತನಾಡುತ್ತಿದ್ದಾರೆ. ತಾಲೂಕಿನಲ್ಲಿ ಕೆಲವೇ ಕೆಲವು ಕಡೆ ಮಾತ್ರ, ಕಾಣಿಸುವ ಇವರು ಬಹುಮಟ್ಟಿಗೆ ಅಲೆಮಾರಿಗಳು, ಇವರಲ್ಲಿ ಮರಾಠಿ ಕಿಳ್ಳೆಕ್ಯಾತರು ಮಾತ್ರ ತಮ್ಮ ಪಾರಂಪರಿಕ ವೃತ್ತಿಯಾದ 'ತೊಗಲು ಗೊಂಬೆಯಾಟ' ಮಾಡುತ್ತಿದ್ದಾರೆ. ಇವರು ಮೀನು ಹಿಡಿದು ಮಾರಾಟ ಮಾಡುವ ಕಾಯಕವನ್ನು ಮಾಡುವರು. ಇದಲ್ಲದೆ ಇವರ ಇನ್ನೊಂದು ಪಾರಂಪರಿಕ ವೃತ್ತಿಯೆಂದರೆ ಹಚ್ಚೆ ಹಚ್ಚುವುದು. ಕಿಳ್ಳೆಕ್ಯಾತರು ಕೂಡ ನಾಗರೀಕ ಸೌಲಭ್ಯವನ್ನು ಪಡೆದ ಸಮುದಾಯವಲ್ಲ. ನಾಗರೀಕ ಸಮಾಜದ ವ್ಯವಸ್ಥೆ ಅನುಕೂಲ ಅವರಿಗಿನ್ನೂ ತಲುಪದೆ ಪಾರಂಪರಿಕ ಜೀವನವನ್ನು ನಡೆಸುತ್ತಿದ್ದಾರೆ.

**ಕೊರಚರು :** ಕೊರಚರ ತಾಂಡಗಳು ಆಗಾಗ್ಗೆ ಸಂಚರಿಸುತ್ತಾ ಹೊಸಪೇಟೆ ವಲಯದಲ್ಲಿ ಠಾಣೆ ಹೂಡುತ್ತವೆ. ಅಪರಾಧ ಮಗ್ನ ಮನೋವೃತ್ತಿಯ ಈ ಸಮಾಜವನ್ನು ಸುಧಾರಿಸುವುದು ಸಾಹಸದ ಮಾತೇ ಸರಿ ಎನ್ನುವವಾಡಿಕೆಯಿದೆ. ಈ ಸಮುದಾಯದಲ್ಲಿ ಅನೇಕ ಉಪಪಂಗಡಗಳಾಗಿದೆ. ಹಗ್ಗ ಮತ್ತು ಚಾಪೆ ಹೆಣೆಯುವುದರಲ್ಲಿ, ಹಕ್ಕಿಗಳನ್ನು ಹಿಡಿಯುವುದರಲ್ಲಿ ಇವರು ನಿಸ್ಸೀಮರಾಗಿದ್ದಾರೆ.

**ರಜಪೂತರು :** ಸುಮಾರು ೩೦೦ ವರ್ಷಗಳ ಕೆಳಗೆ ನಿರ್ವಸಿತರಾಗಿ ದೂರದ ರಾಜಸ್ಥಾನದಿಂದ ರಜಪೂತ ಸಮಾಜದ ಕೆಲವು ವಂಶಸ್ಥರು ಆಗಮಿಸಿ ವ್ಯಾಪಾರ, ಉದ್ದಿಮೆಗಳಲ್ಲಿ ತೊಡಗಿಸಿಕೊಂಡಿದ್ದು, ಇಂದು ಹೊಸಪೇಟೆ ನಗರದಲ್ಲಿ ಈ ಸಮುದಾಯದ ಮನೆತನಗಳು ಆರ್ಥಿಕವಾಗಿ ಸದೃಢವಾಗಿ ಬೆಳದಿದ್ದು, ರಾಜಕೀಯ ಅಧಿಕಾರಿವನ್ನು ಪಡೆದ ಕುಟಂಬಗಳಿವೆ. ಕಂಪ್ಲಿ, ಕಮಲಾಪುರ, ರಾಮಸಾಗರ ಮೊದಲಾದ ಕಡೆಗಳಲ್ಲಿಯೂ ರಜಪೂತ ಸಮುದಾಯದ ಜನರಿರುವುದು ಕಂಡು ಬರುತ್ತಿದೆ.

**ಒಡ್ಡರು :-** ಬಳ್ಳಾರಿ ಜಿಲ್ಲೆಯಲ್ಲಿ ಬೆಟ್ಟಗುಡ್ಡಗಳ ಆಯಾಕಟ್ಟಿನ ಸ್ಥಳಗಳಲ್ಲಿ ವಾಸ ಮಾಡುವ ಶ್ರಮಿಕ ವರ್ಗವಾಗಿರುವ ಒಡ್ಡರೆಂಬ ಬೋವಿ ಜನಾಂಗವೆಂದೂ ಕರೆಯುವುದಿದೆ. ಹೊಸಪೇಟೆ ತಾಲೂಕಿನ ಒಡ್ಡರಲ್ಲಿ ಕಲ್ಲು, ಊರು, ಬಂಡಿ, ಮಣ್ಣು, ಬಯಲು ದೇಶದ ಒಡ್ಡ ಹೀಗೆ ವಿವಿದ ಒಳಪಂಗಡಗಳಿರುತ್ತವೆ. ಕಲ್ಲು ಅಥವಾ ಮರದ ಒಡ್ಡರು ಹೊಸಪೇಟೆ ತಾಲೂಕಿನಲ್ಲಿ ಪಾಪಿನಾಯಕನಹಳ್ಳಿ, ವೆಂಕಟಾಪುರ, ರಾಮಸಾಗರ, ನಲ್ಲಾಪುರ, ಚಿನ್ನಾಪುರ ಉಪ್ಪಾರಹಳ್ಳಿ, ಮರಿಯಮ್ಮನಹಳ್ಳಿ, ದೇವಲಾಪುರ ಗ್ರಾಮಗಳಲ್ಲಿ ಬೋವಿ ಸಮುದಾಯ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡು ಬರುತ್ತದೆ. ಮಣ್ಣಿನ ಹಾಗೂ ಕಲ್ಲಿನ ಕೆಲಸ ಮಾಡುವುದರ ಜೊತೆಗೆ ಕಟ್ಟಡಗಳ ನಿರ್ಮಾಣ, ಕೆರೆಬಾವಿ ತೋಡುವುದು, ಇವರ ಪಾರಂಪರಿಕ ವೃತ್ತಿಯಾಗಿರುತ್ತದೆ. ಆಧುನಿಕ ತಂತ್ರ, ಜ್ಞಾನದಯುಗದಲ್ಲಿ ಇವರ ಪಾರಂಪರಿಕ ವೃತ್ತಿಯಾದ ಕಟ್ಟಡ ನಿರ್ಮಾಣದ ಕೆಲಸಕ್ಕೆ ಬೇರೆ ಬೇರೆ ಸಮುದಾಯಗಳು ಲಗ್ಗೆಯಿಟ್ಟ ಪರಿಣಾಮದಿಂದಾಗಿ ಈಗ ಪಾರಂಪರಿಕ ವೃತ್ತಿಯಿಂದ ಇತರೆ ವೃತ್ತಿಗಳಿಗೆ ಪರಿವರ್ತನೆಗೊಳ್ಳುವುದು ಅನಿವಾರ್ಯವಾಗಿದೆ. ಇವರಲ್ಲಿ ಕೆಲವರು ಕೃಷಿಯಲ್ಲಿ ತೊಡಗಿರುವುದು ತಾಲೂಕಿನಲ್ಲಿ ಕಂಡು ಬರುತ್ತದೆ. ಪರಿಶಿಷ್ಟ ಜಾತಿಯ ವರ್ಗಕ್ಕೆ ಬರುವ ಒಡ್ಡರು ವಿದ್ಯಾವಂತರಾದರೆ ಮಾತ್ರ ಈ ಸೌಲಭ್ಯ ಪಡೆಯಲು ಸಾಧ್ಯ. ಆದರೆ ಇತರೆ ಸಮುದಾಯಗಳ ಶೈಕ್ಷಣಿಕ ಮಟ್ಟಕ್ಕೆ ಹೋಲಿಸಿದರೆ ಒಡ್ಡರು ಹಿಂದುಳಿದವರೆಂದೇ ಹೇಳಬಹುದು. ಹೊಸಪೇಟೆ ತಾಲೂಕಿನಲ್ಲಿ ತೆಲುಗು ಮಾತನಾಡುವ ಸಂಖ್ಯೆಯೇ ಹೆಚ್ಚಿದೆ ಎಂದು ಹೇಳಬಹುದು.

**ಗಂಗಾಮತ ಸಮುದಾಯ :-** ಕಬ್ಬೇರ, ಬೆಸ್ತ, ಜಾಲಗಾರ ಗಂಗಾಮತಸ್ಥ, ಮಡ್ಡೇರ, ಬಾರಿಕ ಎಂದೆಲ್ಲಾ ಕರೆಯುವ ಈ ಸಮುದಾಯದ ಪಾರಂಪರಿಕ ವೃತ್ತಿ ಮೀನಗಾರಿಕೆಯಾಗಿದೆ. ಹೊಸಪೇಟೆ ತಾಲೂಕಿನಲ್ಲಿ ಸುಮಾರು ೧೧ ಸಾವಿರದಷ್ಟು ಜನಸಂಖ್ಯೆ ಹೊಂದಿರುವ ಈ ಗಂಗಾಮತ ಸಮುದಾಯವನ್ನು ಅತ್ಯಂತ ಸುಸಂಗಟಿತ ಸಮಾಜ ಎಂದು ಹೇಳಲಾಗುತ್ತಿದೆ. ಹೊಸಪೇಟೆ ಮತ್ತು ಕಂಪ್ಲಿಗಳಲ್ಲಿ ಗಂಗಾಮತ ಸಮುದಾಯದ ಸ್ಥಳೀಯ ಸಂಘಟನೆಗಳನ್ನು ಹೊಂದಿರುವ ಈ ಸಮುದಾಯ ಪ್ರತಿ ವರ್ಷ 'ಗಂಗಾ

ಜಯಂತಿ' ಅಂಬಿಗರ ಚೌಡಯ್ಯ ಜಯಂತಿ' ಗಳನ್ನು ಆಚರಿಸುತ್ತಿದೆ. ಗಂಗಾಮತ ಸಮುದಾಯದ ತಾಲೂಕಿನ ಅನೇಕ ಯುವಕ ಸಂಘಗಳು ಪ್ರತಿ ವರ್ಷ ಈ ಜಯಂತಿಗಳೊಂದಿಗೆ, ದೀಪಾವಳಿ ಕಾರ್ಯಕ್ರಮ, ಗಣೇಶ ಚೌತಿಯಂತಹ ಕಾರ್ಯಕ್ರಮಗಳನ್ನು ತುಂಬಾ ಅಚ್ಚುಕಟ್ಟಾಗಿ ಆಚರಿಸುತ್ತವೆ. ನಿರಂತರ ಕ್ರಿಯಾಶೀಲತೆ ಗಾಗಿ ಕೆಲವೊಂದು ಯುವಕ ಸಂಘಗಳು, ಹೊಸಪೇಟೆ, ಕಂಪ್ಲಿ ಪಟ್ಟಣಗಳಲ್ಲಿ ಪೂರ್ವ ಪ್ರಾಥಮಿಕ, ಪ್ರಾಥಮಿಕ ಶಾಲೆಗಳನ್ನು ಯಶಸ್ವಿಯಾಗಿ ನಡೆಸುತ್ತಿವೆ. ಬಾರಿಕರು ಮೀನುಗಾರಿಕೆಯೊಂದಿಗೆ ಕೃಷಿಯನ್ನು ಬಹಳ ಯಶಸ್ವಿಯಾಗಿ ಮಾಡುತ್ತಿದ್ದಾರೆ. ಹೊಸಪೇಟೆ ತಾಲೂಕಿನ ಬಾರಿಕಕೃಷಿಕರಲ್ಲಿ ಅತ್ಯಂತ ಮಾದರಿ ಕೃಷಿಕರಿದ್ದು ಅನೇಕ ಸಂಘ ಸಂಸ್ಥೆ ಹಾಗೂ ಸರಕಾರಿ ಸಂಸ್ಥೆಗಳಿಂದ ಹೆಚ್ಚಿನ ಇಳುವರಿ ಪಡೆದುದಕ್ಕಾಗಿ ಬಹುಮಾನವನ್ನು ಪಡೆದಂತಹ ರೈತರಿರುವುದು ಕಂಡು ಬರುತ್ತದೆ. ಬೆಸ್ತರಿಗೂ ನೀರಿಗೂ ನೇರವಾದ ಸಂಬಂಧವಿದೆ. ಹಾಗಾದುದರಿಂದ ಇಂದಿಗೂ ತಾಲೂಕಿನಲ್ಲಿ ಇದರ ಮುಂದುವರೆಕೆಯನ್ನು ಕಾಣಬಹುದು. ಊರಿನ ಕೆರೆಯಿಂದ ಸೂಕ್ತ ಸಮಯಕ್ಕೆ ನೀರು ಹರಿಸಲು ನೇಮಕಗೊಂಡು 'ನೀರ್ಗಂಟಿ' ಇರುತ್ತಾನೆ. ಈ ನೀರ್ಗಂಟಿ ಇಂದಿಗೂ ಬಹುತೇಕ 'ಗಂಗಾಮತದವ' ನಾಗಿರುತ್ತಾನೆ. ಬಾರಿಕರು ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಒಟ್ಟಾರೆ ವಿದ್ಯಾವಂತರ ಸಂಖ್ಯೆ ಕಡಿಮೆಯಿದೆ ಎಂದು ಹೇಳಬಹುದು. ಗಂಗಾಮತ ಸಮುದಾಯದಲ್ಲಿ 'ದೇವದಾಸಿ' 'ಬಾಲ್ಯವಿವಾಹ' ದಂತಹ ಅನಿಷ್ಟ ಪದ್ಧತಿಗಳು ಇಂದಿಗೂ ಅವ್ಯಾಹತವಾಗಿ ನಡೆಯುತ್ತಿದ್ದು ಸುಸಂಘಟಿತ ಸಮುದಾಯವೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಸಮುದಾಯದ ಬಗ್ಗೆ ಎಷ್ಟೇ ಕಾಳಜಿಯಿದ್ದರೂ ಪಾರಂಪರಿಕ ಅನಿಷ್ಟ ಪದ್ಧತಿಗಳನ್ನು ಸಂಪೂರ್ಣ ನಿಲ್ಲಿಸಲು ಸಾಧ್ಯವಾಗದಿರುವುದು ವಿಚಿತ್ರವಾದರೂ ಸತ್ಯವಾಗಿದೆ.

**ಇತರೆ ಜಾತಿಗಳು :** ಹೊಸಪೇಟೆ ತಾಲೂಕಿನಲ್ಲಿ ಮೇಲಿನ ಪ್ರಮುಖ ಜಾತಿಗಳಲ್ಲದೆ ಉಪ್ಪಾರರು, ಈಡಿಗರು, ಮಡಿವಾಳರು, ನದಾಫರು (ಪಿಂಜಾರರು) ಒಡ್ಡರು, ಗೌಳಿಗರು, ಬಲಿಜರು ಇನ್ನೂ ಹಲವಾರು ಇದೇ ರೀತಿಯ ಸಮುದಾಯಗಳ ಜನರು ಅಧಿಕ ಸಂಖ್ಯೆಯಲ್ಲಿರುವುದು ಕಂಡು ಬರುತ್ತದೆ. ಆಧುನಿಕ ಸಮಾಜದ ರಾಷ್ಟ್ರ ಸಂವಿಧಾನಕ್ಕನುಗುಣವಾಗಿ ಪುನರ್ರಚಿತವಾಗುತ್ತಿದ್ದು, ಜಾತ್ಯಾತೀತ ಭಾವನೆ ಜನತೆಯಲ್ಲಿ ಇತ್ತೀಚೆಗೆ ಒಡಮೂಡುತ್ತಿದ್ದರೂ ಗ್ರಾಮೀಣ ಪ್ರದೇಶದಲ್ಲಿ ಮಾತ್ರ, ಜಾತಿಯ ಕಂದಕಗಳು ಇನ್ನೂ ಉಳಿದುಕೊಂಡು ಬಂದಿವೆಯೆಂದೇ ಹೇಳಬೇಕಾಗುತ್ತದೆ. ಎಲ್ಲಾ ಧರ್ಮ, ಜಾತಿಗಳ ನಡುವೆ ಸಮನ್ವಯತೆ ಮತ್ತು ಪ್ರಗತಿಯನ್ನು ಸಾಧಿಸುವ ಮೂಲಕ ಸುಸಜ್ಜಿತವಾದ ಹಾಗೂ ಸುಸಂಘಟಿತವಾದ ಭದ್ರ ಸಮಾಜ ರೂಪುಗೊಳ್ಳಲು ಅನುಕೂಲವಾಗುತ್ತದೆ.

**ನೀರಾವರಿ ಮತ್ತು ಕೃಷಿ :**

ಹೊಸಪೇಟೆಯು ಕೃಷಿ ಪ್ರಧಾನವಾದ ತಾಲ್ಲೂಕಾಗಿದ್ದು, ವಿಜಯನಗರ ಸಾಮ್ರಾಜ್ಯ ಕಾಲದಿಂದಲೂ ಕೃಷಿಗೆ ಪ್ರಧಾನ ಸ್ಥಾನ ದೊರೆತಿದ್ದು, ಹಸಿರು ತುಂಬಿದ ಗದ್ದೆ ತೋಟಗಳಿಂದ ಕಂಗೊಳಿಸುತ್ತಿದೆ. ಸ್ವಾತಂತ್ರ್ಯ ನಂತರ ತುಂಗಭದ್ರಾ ಜಲಾಶಯ ನಿರ್ಮಾಣದಿಂದಾಗಿ ಹೊಸಪೇಟೆ ತಾಲೂಕಿನ ಸುಮಾರು ೩೦ ಕ್ಕೂ ಹೆಚ್ಚು ಗ್ರಾಮಗಳು ನೀರಾವರಿ ವ್ಯಾಪ್ತಿಗೆ ಬರುತ್ತಿವೆ. ಹೆಚ್. ಎಲ್. ಸಿ. ಮತ್ತು ಎಲ್. ಎಲ್.ಸಿ. ಎಂಬ ಎರಡು ಪ್ರಮುಖ ಕಾಲುವೆಗಳ ಮೂಲಕ ಈ ಗ್ರಾಮಗಳ ರೈತರಿಗೆ ೬ ತಿಂಗಳು ಮತ್ತು ೧೧ ತಿಂಗಳು ಸತತ ನೀರು ಪೂರೈಸುವುದರಿಂದ ೬ ತಿಂಗಳ ನೀರು ಸಿಗುವ ರೈತರು ಒಂದು ಬೆಳೆಯನ್ನು ನೀನಾವರಿಯಿಂದ ಬೆಳೆದರೆ ೧೧ ತಿಂಗಳು ನೀರು ಸಿಗುವ ರೈತರು ಎರಡು ಬೆಳೆಗಳು ಸಿಗುವಂತೆ ಬೆಳೆಯುತ್ತಾರೆ. ತುಂಗಾಭದ್ರಾ ಜಲಾಶಯ ನಿರ್ಮಾಣಕ್ಕೆ ಆಗಮಿಸಿದ್ದ ತಮಿಳನಾಡಿನ, ಆಂಧ್ರಪ್ರದೇಶದ ಕುಶಲ ಕೆಲಸಗಾರರು ತುಂಗಾಭದ್ರಾ ಜಲಾಶಯ ನಿರ್ಮಾಣದ ನಂತರವೂ ತಮ್ಮ ಊರುಗಳಿಗೆ ಹೋಗದೇ ಇಲ್ಲಿಯೇ ನೆಲೆಸಿದ್ದು, ಅನ್ಯ ಉದ್ಯೋಗಗಳನ್ನು ಅದರಲ್ಲೂ ವಿಶೇಷವಾಗಿ ಕಟ್ಟಡ ನಿರ್ಮಾಣದಂತಹ ಕೆಲಸವನ್ನು ಮಾಡುವ ಮೂಲಕ ಶಾಶ್ವತ ಜೀವನ ನಡೆಸುತ್ತಿದ್ದು, ಟಿ.ಬಿ. ಡ್ಯಾಂ, ಪ್ರದೇಶದಲ್ಲಿ ಇವರು ಹೆಚ್ಚಾಗಿ ವಾಸಿಸುತ್ತಿರುವುದು ಕಂಡು ಬರುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ನಿರ್ಮಾಣಗೊಂಡ ತಾಲೂಕಿನ ಪ್ರಮುಖ ಕೆರೆಗಳಾದ ಡಣಾಯಕನಕೆರೆ, ರಾಯಕಾಲುವೆ, ಬಸವಣ್ಣನ ಕಾಲುವೆ, ಬೆಲ್ಲದ ಕಾಲುವೆ, ತುರ್ತುಕಾಲುವೆ, ಕಮಲಾಪುರ ಕೆರೆ ಇವುಗಳು ನೀರೊದಗಿಸುವ ಪ್ರಮುಖ ಮೂಲಗಳಾಗಿದ್ದವು. ಸ್ವಾತಂತ್ರ್ಯ ನಂತರದಲ್ಲಿ ತುಂಗಾಭದ್ರಾ ಜಲಾಶಯದಿಂದ ಇವುಗಳಲ್ಲಿ ಕೆಲವು ಕೆರೆ, ಕಾಲುವೆಗಳಿಗೆ ಇಂದಿಗೂ ನೀರನ್ನು ಹರಿಸುವ ಮೂಲಕ, ಸಂಗ್ರಹಿಸುವ ಮೂಲಕ ಕೃಷಿಗೆ ಸಹಕಾರಿ ಯಾಗಿರುತ್ತವೆ. ಜಲಾಶಯದ ವ್ಯಾಪ್ತಿ ಹೊರತುಪಡಿಸಿದ ಗ್ರಾಮಗಳ ಬಹುತೇಕ ಕೆರೆಗಳು ಇಂದು ನೀರಿಲ್ಲದೆ ಪಾಳುಬಿದ್ದು ಹೂಳು ತುಂಬಿಕೊಂಡಿವೆ. ನೀರಾವರಿ ಅನುಕೂಲವಿಲ್ಲದ ಗಾದಿಗನೂರು, ಮರಿಯಮ್ಮನಹಳ್ಳಿ ಹೋಬಳಿಗಳ ಬಹುತೇಕ ಗ್ರಾಮಗಳಲ್ಲಿ ಕೇವಲ ಕೃಷಿಯ ಮೇಲೆಯೇ ಜೀವನ ಮಾಡಬೇಕಾದವರ ಪರಿಸ್ಥಿತಿ ತುಂಬಾ ಕಷ್ಟಕರವಾಗಿರುತ್ತದೆ. ಇತ್ತೀಚೆಗೆ ಈ ಗ್ರಾಮಗಳ ಕೃಷಿಕೂಲಿಗಾರರು, ಸಣ್ಣ ಹಿಡುವಳಿ ರೈತರು ಕೃಷಿಯನ್ನೇ ತ್ಯಜಿಸಿ ಗಣಿಗಾರಿಕೆಯಲ್ಲಿ ಕಾರ್ಮಿಕರಾಗಿ, ಮತ್ತು ಕೆಲವರು ಊರನ್ನೇ ಬಿಟ್ಟು ನಗರದ ಚಾಕರಿ ಕೆಲಸಗಳಲ್ಲಿ ತೊಡಗಿಸಿಕೊಂಡಿರುವುದು ತಿಳಿದು ಬರುತ್ತದೆ.

ಕಬ್ಬು, ಭತ್ತ, ಬಾಳೆ, ಮೆಕ್ಕೆಜೋಳ, ಸೂರ್ಯಕಾಂತಿ, ತೆಂಗು, ಕಾಯಿಪಲ್ಯೆಗಳು ನೀರಾವರಿ ಪ್ರದೇಶದಲ್ಲಿ ಪ್ರಮುಖವಾಗಿ ಬೆಳೆದರೆ ಮಳೆಯಾಶ್ರಿತ ಪ್ರದೇಶದಲ್ಲಿ ಜೋಳ, ರಾಗಿ, ಸಜ್ಜೆಗಳನ್ನು ಸಾಮಾನ್ಯವಾಗಿ ಬೆಳೆಯುತ್ತಿರುವುದು ತಾಲ್ಲೂಕಿನಾದ್ಯಂತ ಕಂಡು ಬರುತ್ತದೆ. ನೀರಾವತಿ ಪ್ರದೇಶದಲ್ಲಿ ಹೆಚ್ಚಾಗಿ ಕಬ್ಬು ಬೆಳೆಯುತ್ತಿರುವುದರಿಂದ ಕಬ್ಬು ಪೂರೈಕೆಯಾಗುವ ಸಕ್ಕರೆ ಕಾರ್ಖಾನೆಗಳು ತಾಲೂಕಿನಲ್ಲಿ

ಮೊದಲಿಗೆ ಹೊಸಪೇಟೆ ಮತ್ತು ಕಂಪ್ಲಿಗಳಲ್ಲಿ ಎರಡು ಕಾರ್ಖಾನೆಗಳಿದ್ದವು. ಆದರೆ ಈಗ ಕೇವಲ ಹೊಸಪೇಟೆ ಸಕ್ಕರೆ ಕಾರ್ಖಾನೆ ಮಾತ್ರ ಕಾರ್ಯ ನಿರ್ವಹಿಸುತ್ತಿದ್ದು ಸಕ್ಕರೆ ಕಾರ್ಖಾನೆಯಿಂದ ಕಬ್ಬು ಬೆಳೆಗಾರರಿಗೆ ನ್ಯಾಯಯುತವಾದ ಬೆಲೆ ದೊರಕಿಸಿಕೊಳ್ಳಲು ಕಬ್ಬು ಬೆಳೆಗಾರರೆಲ್ಲಾ ಒಂದಾಗಿ ಹೊಸಪೇಟೆ ರೈತ ಸಂಘವನ್ನು ರಚಿಸಿಕೊಂಡಿದ್ದು ಸದ್ರಿ ಸಂಘದ ಸಾಧನೆಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಿದ್ದೇವೆ.

**ಮೀನುಗಾರಿಕೆ:-** ಮೀನುಗಾರಿಕೆಗೆ ತುಂಗಭದ್ರಾ ಜಲಾಶಯ ತುಂಬಾ ಆಸರೆಯನ್ನು ನೀಡಿದೆ. ನೂರಾರು ಜಾತಿಯ ಮೀನುಗಳನ್ನು ತುಂಗಭದ್ರಾ ಜಲಾಶಯದಲ್ಲಿ ಸಾಕಲಾಗುತ್ತಿದೆ. ಈ ಜಲಾಶಯದ ಮೀನುಗಳನ್ನು ವ್ಯಾಪಾರ ಮಾಡುವುದಕ್ಕಾಗಿ ಸಹಕಾರಿ ಸಂಘಗಳನ್ನು ಸಂಯೋಜಿಸಲಾಗಿದೆ. ಸಾವಿರಾರು ಟನ್ನುಗಟ್ಟಲೆ ಸಾಕಾಣೆ ಆಗುವ ಮೀನುಗಳನ್ನು ದೂರದ ಕಲ್ಕತ್ತಾ, ಮುಂಬೈ, ಚೆನ್ನೈಗಳಿಗೆ ವ್ಯಾಪಾರ ಮಾಡಲಾಗುತ್ತಿದೆ. 50 ಟನ್ನು ಪ್ರಮಾಣದ ಮಂಜುಗಡ್ಡೆ ಉತ್ಪಾದನಾ ಯಂತ್ರವನ್ನು ಮತ್ತು ಇದಕ್ಕೆ ಸಾಕಾಗುವಷ್ಟು ಶೀಥಲ ಸ್ಥಾವರವನ್ನು ತುಂಗಭದ್ರಾ ಬೋರ್ಡಿನ ವತಿಯಿಂದ ನಿರ್ಮಿಸಲಾಗಿದೆ. ಭಾರತದಲ್ಲಿಯೇ ಅತ್ಯಂತ ಉತ್ಕೃಷ್ಟವಾದ ''ಮತ್ಸ್ಯ ಕ್ಷೇತ್ರ'' ತುಂಗಭದ್ರಾ ಆಣೆಕಟ್ಟಿನ ಹತ್ತಿರ ಕಾರ್ಯ ಮಾಡುತ್ತಿದೆ. ''ಜಲಾಶಯ ಮತ್ಸ್ಯ ಸಮೀಕ್ಷಣ ಘಟಕ''ವು ಸಂಶೋಧನಾ ಕಾರ್ಯದಲ್ಲಿ ನಿರತವಾಗಿದ್ದು ಮತ್ಸ್ಯೋದ್ಯಮಕ್ಕೆ ನೆರವನ್ನು ನೀಡುತ್ತಲಿದೆ. ತುಂಗಭದ್ರಾ ಜಲಾಶಯದ ಮತ್ತು ತಾಲೂಕಿನ ಕೆರೆಗಳ ಮೀನುಗಳನ್ನು ಪ್ರತಿ ವರ್ಷ ಹರಾಜು ಮಾಡಲಾಗುತ್ತಿದ್ದು ಇದರಿಂದ ರಾಜ್ಯ ಸರಕಾರಕ್ಕೆ ಕೋಟ್ಯಂತರ ರೂಪಾಯಿಗಳ ಆದಾಯ ದೊರೆಯುತ್ತದೆ. ಹರಾಜು ಮಾಲೀಕರಿಂದ ಚಿಲ್ಲರೆ ವ್ಯಾಪಾರಿಗಳ ಮೂಲಕ ಗ್ರಾಹಕರಿಗೆ ದೊರೆಯುವ ಮೀನುಗಾರಿಕೆಯಿಂದ ಹೊಸಪೇಟೆ ತಾಲೂಕಿನ ಸಾವಿರಾರು ಕುಟುಂಬಗಳಿಗೆ ಜೀವನಾಧಾರವಾಗಿರುತ್ತದೆ. ಹೊಸಪೇಟೆ ತಾಲೂಕಿನಲ್ಲಿ ವಿವಿಧ ಸಹಕಾರ ಸಂಘಗಳು ಕಾರ್ಯನಿರ್ವಹಿ ಸುತ್ತಿದ್ದು ವ್ಯಾಪಾರಿಗಳ ಹಿತವನ್ನು ಕಾಪಾಡುವ ಜವಾಬ್ದಾರಿಯನ್ನು ನಿರ್ವಹಿಸುತ್ತಿವೆ.

## ಹೊಸಪೇಟೆ ತಾಲೂಕಿನಲ್ಲಿ ಗಣಿಗಾರಿಕೆಯ ಸವಾಲುಗಳು:

ವಿಜಯನಗರ ಕಾಲದಿಂದಲೇ ಇಲ್ಲಿಯ ಕಬ್ಬಿಣದ ಅದಿರು ದೂರದ ಪಾಶ್ಚಾತ್ಯ ದೇಶಗಳಿಗೆ ರಫ್ತಾಗುತ್ತಿತ್ತು. ಸಂಡೂರು ಮತ್ತು ಹೊಸಪೇಟೆಯ ಮಧ್ಯದಲ್ಲಿ ಸುಮಾರು ೪೦ ಕಿ.ಮೀ. ಉದ್ದ, ೨೦ ಕಿ.ಮೀ. ಅಗಲದಷ್ಟು ವಿಸ್ತಾರವಾದ ಗುಡ್ಡವನ್ನು ಹೊಂದಿರುವ ಪರ್ವತದಲ್ಲಿ "IRON FIRMATION" ಎಂಬ ಕಲ್ಲಿನಿಂದ ಕಬ್ಬಿಣದ ಅದಿರು ಲಭಿಸುತ್ತಿದೆ. ಸಂಡೂರು ಬಿಟ್ಟರೆ ಜಿಲ್ಲೆಯಲ್ಲಿ ಹೊಸಪೇಟೆ ತಾಲೂಕಿನಿಂದಲೇ ಹೆಚ್ಚಿನ ಖನಿಜದ ನಿಕ್ಷೇಪವನ್ನು ನೋಡಬಹುದು. ಹೊಸಪೇಟೆ ಪ್ರದೇಶದಲ್ಲಿ ದೊರೆಯುವ ಅದಿರಿನಲ್ಲಿ ಕಬ್ಬಿಣದ ಅಂಶ ಹೆಚ್ಚಿರುವುದರಿಂದ ''ವಿಶ್ವಗುಣದರ್ಜೆ''ಯನ್ನು

ಹೊಂದಿರುವುದರಿಂದ ವಿದೇಶಗಳಲ್ಲಿ ಹೆಚ್ಚಿನ ಬೇಡಿಕೆ ಹೊಂದಿರುತ್ತದೆ. ಹೀಗಾಗಿ ಗಣಿ ಮಾಲೀಕರು ಮತ್ತು ಗಣಿ ಕಾರ್ಮಿಕರ ಸಂಖ್ಯೆ ದಿನದಿಂದ ದಿನಕ್ಕೆ ತೀವ್ರಗತಿಯಲ್ಲಿ ಬೆಳೆಯುತ್ತಿದೆ. ಕಳೆದ ೧೦ ವರ್ಷಗಳಿಂದೀಚೆಗೆ ಮ್ಯಾಂಗನೀಸ್ ಕಲ್ಲಿನ ಕೆಂಪು ಮಣ್ಣಿನ ಪುಡಿ ಚೈನಾದೇಶದಿಂದ ಸಿಕ್ಕ ಅತೀಯಾದ ಬೇಡಿಕೆಯಿಂದ ಹೊಸಪೇಟೆ ತಾಲೂಕಿನಲ್ಲಿ ಆಧುನಿಕ ಕುಬೇರರ ಉಗಮವಾಗಿದೆ ಎಂದೇ ಹೇಳಬಹುದು. ಪ್ರತಿ ವರ್ಷ ಇಲ್ಲಿಯ ಗಣಿ ಮಾಲೀಕರಿಂದ ೫೦ ಲಕ್ಷ ಟನ್ ಕೆಂಪು ಪುಡಿ ಚೈನಾ ದೇಶಕ್ಕೆ ರವಾನೆ ಮಾಡಲಾಗುತ್ತಿದೆ ಎಂದು ಅಂದಾಜು ಮಾಡಲಾಗಿದೆ. ಇದರ ಜೊತೆಗೆ ಇಷ್ಟೇ ಪ್ರಮಾಣದಲ್ಲಿ ಅನಧಿಕೃತವಾಗಿ ಹೋಗುತ್ತಿದ್ದು ಕೋಟಿ ಕೋಟಿ ಹಣದ ದುರ್ಬಳಕೆಯಾಗುತ್ತಿದ್ದು ಒಬ್ಬರ ಮೇಲೆ ಮತ್ತೊಬ್ಬರು ''ಗಣಿ ಅವ್ಯವಹಾರ''ದ ಬಗ್ಗೆ ಮಾಡುತ್ತಿರುವ ಆರೋಪಗಳು ದಿನನಿತ್ಯದ ಸುದ್ದಿಗಳಾಗುತ್ತಿವೆ.

ಗಣಿಗಾರಿಕೆಯ ಈ ದಿಡೀರ್ ಬೆಳವಣಿಗೆ ಹೊಸಪೇಟೆ ತಾಲೂಕಿನ ಇಡೀ ಜನಜೀವನದ ಮೇಲೆ ವ್ಯಾಪಕ ಪರಿಣಾಮ ಬೀರಿದೆಯೆಂದರೆ ತಪ್ಪಾಗಲಾರದು. ಗಣಿಗಾರಿಕೆಯ ಉದ್ಯೋಗ ಅರಸಿ ಮಳೆಯಾಶ್ರಿತ ಪ್ರದೇಶಗಳಾದ ಗದಗ, ಬಾಗಲಕೋಟೆ, ರಾಯಚೂರು, ಚಿತ್ರದುರ್ಗ, ಕೊಪ್ಪಳ ಜಿಲ್ಲೆಗಳಿಂದ ಕೃಷಿ ಕೂಲಿಕಾರರು, ಕಾರ್ಮಿಕರು ದೊಡ್ಡ ಸಂಖ್ಯೆಯಲ್ಲಿ ವಲಸೆ ಬರುತ್ತಿದ್ದು ಉತ್ತರ ಭಾರತದ ಕೆಲವು ರಾಜ್ಯಗಳ ಕುಶಲ ಕೆಲಸಗಾರರು, ಕೂಲಿಕಾರರು ಬರುತ್ತಿದ್ದು ಒಂದು ರೀತಿಯಲ್ಲಿ ನಾಗಾಲೋಟದಿಂದ ಬೆಳೆಯುತ್ತಿರುವುದರಿಂದ ಮೂಲಭೂತ ಸೌಲಭ್ಯಗಳ ಕೊರತೆ ಎದ್ದು ಕಾಣುತ್ತಿದೆ. ಆಧುನಿಕ ಕುಬೇರರ ಆರ್ಭಟದಲ್ಲಿ ಮದ್ಯಮ ವರ್ಗ ಮತ್ತು ನೌಕರದಾರರ ವರ್ಗ ಹೊಸಪೇಟೆ ನಗರದಂತಹ ಪಟ್ಟಣದಲ್ಲಿ ಕನಿಷ್ಠ ಪಕ್ಷ ನಿವೇಶನ ಖರೀದಿಯೂ ಗಗನ ಕುಸುಮವಾಗಿದ್ದು ಇದೂ ಗಣಿಗಾರಿಕೆಯ ಪ್ರಭಾವದ ಮಹಿಮೆಯೆಂಬುದು ನಿಜಸಂಗತಿ. ಇದರಿಂದಾಗಿ ೨೦೦೧ರ ಜನಗಣತಿಯ ಪ್ರಕಾರ ೪ ಲಕ್ಷದಂಚಿಗೆ ಇದ್ದ ಜನಸಂಖ್ಯೆ ಈಗ ೬ ಲಕ್ಷದಾಟಿದೆ ಎಂದು ಅಂದಾಜು ಮಾಡಲಾಗಿದೆ. ಗಣಿಗಾರಿಕೆಯಿಂದ ಇಲ್ಲಿಯ ಕೃಷಿ, ಪರಿಸರ, ಜನರ ಆರೋಗ್ಯ, ಸಾರಿಗೆ ವ್ಯವಸ್ಥೆಯ ಮೇಲೆ ತೀವ್ರ ವ್ಯತಿರಿಕ್ತ ಪರಿಣಾಮ ಬೀರಿದೆ. ''ಪುಡಿಯ ಧೂಳಿನ'' ಉಸಿರಾಟದಿಂದಾಗಿ 'ಅಸ್ತಮಾ'ದಂತಹ ದೀರ್ಘಕಾಲಿಕ ರೋಗಕ್ಕೆ ತುತ್ತಾಗುತ್ತಿರುವುದು ಸಾಮಾನ್ಯವಾಗಿದೆ. ಇದರಿಂದಾಗಿ ಉಸಿರಾಟದ ಮೂಲಗಳಾದ ಗಿಡಮರಗಳು ಕೆಂಪು ಧೂಳಿನಿಂದ ಅಸ್ಥಿತ್ವವನ್ನೇ ಕಳೆದು ಕೊಳ್ಳುತ್ತಿದ್ದು 'ಜನಾರೋಗ್ಯ' ಗಣಿಗಾರಿಕೆಯು ಒಡ್ಡಿರುವ ಆಧುನಿಕ ಸವಾಲೆಂದೇ ಹೇಳಬಹುದು. ಸಾರ್ವಜನಿಕ ಸಂಪರ್ಕ ರಸ್ತೆಗಳಂತೂ ಗಣಿಗಾರಿಕೆಯಿಂದ ಜರ್ಜರಿತವಾಗಿ ಹೋಗಿರುತ್ತವೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ಪ್ರತಿದಿನ ಒಂದು ಅಂದಾಜಿನ ಪ್ರಕಾರ ಸುಮಾರು 50 ಕೋಟಿ ರೂಪಾಯಿಗಳ ರಾಜಸ್ವ ಸಂದಾಯವಾಗುತ್ತಿದೆಯೆಂದು ಹೇಳಲಾಗುತ್ತಿದೆ. ಆದರೆ ಗಣಿಗಾರಿಕೆಯ ಈ ಅವ್ಯವಸ್ಥೆಯನ್ನು ಸರಿಪಡಿಸಲು ವ್ಯಾಪಕ ಜನಾಂದೋಲನದ ಅವಶ್ಯಕತೆಯಿರುವುದು ಮೇಲು ನೋಟಕ್ಕೆ ಕಂಡು ಬರುತ್ತದೆ.

## ಹೊಸಪೇಟೆ ತಾಲೂಕಿನ ಶೈಕ್ಷಣಿಕ ಪರಿಸ್ಥಿತಿ:

ಹೊಸಪೇಟೆ ತಾಲೂಕು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಸಮೃದ್ಧವಾದ ತಾಲೂಕೆಂಬ ಖ್ಯಾತಿಗೆ ಒಳಗಾಗಿದ್ದರೂ ಶೈಕ್ಷಣಿಕವಾಗಿ ಹಿಂದುಳಿದ ತಾಲೂಕೆಂದು ಕರೆಯಲಾಗುತ್ತಿದೆ. ಒಟ್ಟಾರೆ ಜನಸಂಖ್ಯೆಗೆ ಹೋಲಿಸಿದರೆ ತಾಲೂಕಿನಲ್ಲಿರುವ ಶಾಲೆಗಳು, ಕಾಲೇಜುಗಳು ಕಡಿಮೆಯೆಂದೇ ಹೇಳಬಹುದು. ಆರು ಲಕ್ಷದಷ್ಟಿರುವ ಜನಸಂಖ್ಯೆಗೆ ಸುಮಾರು ೩೧೫ ಪ್ರಾಥಮಿಕ ಶಾಲೆಗಳಿದ್ದು ೬೫ ಪ್ರೌಢಶಾಲೆಗಳಿವೆ. ೧೫ ಪದವಿ ಪೂರ್ವ ಕಾಲೇಜುಗಳಿದ್ದು ಕೇವಲ ೬ ಪ್ರಥಮ ದರ್ಜೆಯ ಸರಕಾರಿ ಮತ್ತು ಅರೆಸರಕಾರಿ ಕಾಲೇಜುಗಳಿರುತ್ತವೆ. ದಿನದಿಂದ ದಿನಕ್ಕೆ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಶಾಲಾಕಾಲೇಜುಗಳನ್ನು ಹೆಚ್ಚು ಮಾಡುವ ಅವಶ್ಯಕತೆ ಇದೆ. ತಾಲೂಕಿನಲ್ಲಿ ಗಣಿಗಾರಿಕೆಯ ಕಾರಣದಿಂದ ಕೂಲಿಯ ಹೆಚ್ಚಳ ಮತ್ತು ಕೂಲಿಕಾರರ ಕೊರತೆಯ ಕಾರಣದಿಂದ ಶಾಲೆಗಳನ್ನು ಬಿಟ್ಟು ಬಾಲಕಾರ್ಮಿಕರ ಸಂಖ್ಯೆ ಹೆಚ್ಚಾಗುತ್ತಿದೆ. ಬಾಲಕಾರ್ಮಿಕರ ಶಿಕ್ಷಣಕ್ಕಾಗಿ ಸರಕಾರ ಏನೆಲ್ಲಾ ಪ್ರಯತ್ನಗಳನ್ನು ಮಾಡುತ್ತಿದ್ದರೂ ಇದರಲ್ಲಿ ಯಶಸ್ವಿಯಾಗಿಲ್ಲವೆಂದೇ ಹೇಳಬಹುದು. ಸಾರ್ವಜನಿಕ ಸಂಘ ಸಂಸ್ಥೆಗಳ ಸಕ್ರಿಯ ಪಾಲುದಾರಿಕೆಯಿಂದ ಮತ್ತು ಮಕ್ಕಳಲ್ಲಿ, ಪೋಷಕರಲ್ಲಿ ಶಿಕ್ಷಣದ ಅವಶ್ಯಕತೆಯ ಜಾಗೃತಿ ಮೂಡಿಸುವಂತಹ ಕೆಲಸ ಆಗುವ ಅವಶ್ಯಕತೆಯಿದೆ.

## ಅಧ್ಯಾಯ - ೪

# ಹೊಸಪೇಟೆ ತಾಲೂಕಿನ ಪ್ರಮುಖ ಸಾಂಘಿಕ ನೆಲೆಗಳು

ಸಮಾಜವಾದಿ ಮಾದರಿ ಸಮಾಜ, ಕಲ್ಯಾಣ ರಾಜ್ಯ, ರಾಮರಾಜ್ಯ, ಗರೀಬಿ ಹಠಾವೋ, ಅಭಿವೃದ್ಧಿಯೊಂದೇ ಇಪ್ಪತ್ತೊಂದನೆ ಶತಮಾನದಕಡೆಗೆ ಮುಂತಾದ ಆಕರ್ಷಕ ಆದರ್ಶಗಳನ್ನು ಇಟ್ಟುಕೊಂಡು ಬಂದ ಆರ್ಥಿಕ ಅಭಿವೃದ್ಧಿಯನ್ನು ನೋಡಿದರೆ ಎದೆ ನಡುಕದ ಭ್ರಮನಿರಸನವಾಗುವುದು. ಬಡವರನ್ನು ದಲಿತರನ್ನು ಹಿಂದುಳಿದವರನ್ನು, ಮಹಿಳೆ ಮತ್ತು ಮಕ್ಕಳನ್ನು ಅವರ ಸರ್ವತೋಮುಖ ಅಭಿವೃದ್ಧಿಗೆ ಅಣಿಗೊಳಿಸುವ ಪ್ರಾಮಾಣಿಕತೆಯ ಕೊರತೆ ಎದ್ದು ಕಾಣುತ್ತದೆ. ಕೆಳಜಾತಿ ವರ್ಗಕ್ಕೆ ಪೂರಕವಲ್ಲದ ಮೌಲ್ಯವ್ಯವಸ್ಥೆಯ ಪರಿಣಾಮವಾಗಿ ಬಡವರು, ದುರ್ಬಲರು, ಮಹಿಳೆಯರು, ದಲಿತರು ಪ್ರಗತಿಯಿಂದ ವಂಚಿತರಾಗಿದ್ದಾರೆ. ಇದಕ್ಕೆ ಪರಿಹಾರವೆಂದರೆ, ಬಡವರ, ದುರ್ಬಲರ, ದಲಿತರ, ಸಂಘಟನೆ ಸಂಘರ್ಷ, ಸಂಘಟನೆಗಳಿಲ್ಲದೆ ನ್ಯಾಯ ಪಡೆಯುವುದು ಅಸಾಧ್ಯವೇ ಸರಿ. ಭೂರಹಿತ ಕೃಷಿಕೂಲಿಕಾರರು, ಉನ್ನತ ಜಾತಿ, ಕೆಳಜಾತಿ, ಗಂಡ-ಹೆಂಡತಿ, ಗಂಡು-ಹೆಣ್ಣು ಮುಂತಾದ ನೆಲೆಗಳಲ್ಲಿ ಮೂಲಭೂತವಾದ ಅಸಮಾನತೆ ಇದೆ. ಯಾರು ಯಾರ ಮುಂದೆ ಹೇಗೆ ಮಾತಾಡಬೇಕು, ಯಾವ ವಿಷಯ ಮಾತನಾಡಬೇಕು, ಯಾರು ಯಾವ ಸ್ಥಳಗಳಿಗೆ ಪ್ರವೇಶಿಸಬೇಕು, ಪ್ರವೇಶಿಸಬಾರದು ಮುಂತಾದ ನಿಷೇಧಗಳು ಜೀವಂತವಾಗಿರುವ ಗ್ರಾಮಾಂತರ ಪ್ರದೇಶಗಳಲ್ಲಿ ಅಭಿವೃದ್ಧಿ ಅಥವಾ ಪ್ರಗತಿಯು ಪ್ರಜಾಸತ್ತಾತ್ಮಕವಾಗಿ ಸಮಾನತೆಯನೆಲೆಯಲ್ಲಿ ಸಂಭವಿಸಲು ಸಾಧ್ಯವಿಲ್ಲ. ಕುಡಿಯುವ ನೀರಿನ ಸಂಗ್ರಹದ ಬಗ್ಗೆ ಡಾ॥ ಬಿ. ಆರ್. ಅಂಬೇಡ್ಕರ್ ನಡೆಸಿದ ಮಹಾನ್ ನಾಯಕನ ಕೆರೆ ಹೋರಾಟ ಚರಿತ್ರೆಗೆ ಸೇರಿಲ್ಲ. ಆದರೆ ಇಂಥಹ ಕ್ರೂರ ಪದ್ಧತಿ ಇನ್ನೂ ಜೀವಂತವಾಗಿರುವ ಸಂಗತಿ ನಮ್ಮೆದುರಿಗಿದೆ.

ಮಾನವ ಒಂದೇ ಸಂದರ್ಭಗಳಲ್ಲಿ ಏಕಾಂಗಿಯೂ ಹೌದು, ಸಂಘ ಜೀವಿಯೂ ಹೌದು. ಏಕಾಂಗಿಯಾಗಿ ಅವನು ತನ್ನ ಸ್ವಂತ ಅಸ್ತಿತ್ವದ ರಕ್ಷಣೆಗೋಸ್ಕರ ಹೋರಾಡುತ್ತಾನೆ. ತನ್ನ ಆಸೆಗಳ ಈಡೇರಿಕೆ ಮತ್ತು ಸ್ವಾಭಾವಿಕ ಸಾಮರ್ಥ್ಯದ ಅಭಿವೃದ್ಧಿಗಾಗಿ ಪ್ರಯತ್ನಿಸುತ್ತಾನೆ. ತನಗೆ ತೀರಾ ಹತ್ತಿರವಾದವರ ಯೋಗಕ್ಷೇಮ ಕುರಿತು ಚಿಂತಿಸುತ್ತಾನೆ. ಸಂಘಜೀವಿಯಾಗಿ ತನ್ನನ್ನು ನೆರೆಹೊರೆಯವರು ಗುರುತಿಸಬೇಕೆಂದು ಆಶಿಸುತ್ತಾನೆ. ಅವನ ಆನಂದದಲ್ಲಿ ಪಾಲ್ಗೊಳ್ಳಲು, ದುಃಖದಲ್ಲಿ ಸಮಾಧಾನಿಸಲು

ಅವರ ಜೀವನ ಸ್ಥಿತಿಯನ್ನು ಉತ್ತಮಗೊಳಿಸಲು ಇಚ್ಚಿಸುತ್ತಾನೆ. ಆಗಾಗ್ಗೆ ಸಂಘರ್ಷಿಸುವ ಈ ವಿವಿಧ ಪ್ರವೃತ್ತಿಗಳ ಸಾಂಘಿಕ ನೆಲೆಗಳು, ಅವನ ಬಟ್ಟೆ, ವಸತಿ, ಭಾಷೆ, ಆಲೋಚನಾವಸ್ತು, ಆಲೋಚನಾ ತಂತ್ರ, ಆಲೋಚನಾರೂಪ, ಕಾರ್ಯ-ಸಾಧನ ಇವೆಲ್ಲವನ್ನು ಸಮಾಜವೇ ವ್ಯಕ್ತಿಗಳಿಗೆ ಒದಗಿಸುತ್ತದೆ. ಈ ಸೌಲಭ್ಯಗಳಿಗೆ ಧಕ್ಕೆಯಾದರೆ ಅವನು ವ್ಯವಸ್ಥೆಯೊಂದಿಗೆ ನಡೆಸುವ ಸಂಘರ್ಷ ಸಹಜವಾದುದು. ತಾನು, ತನ್ನಂತಿರುವ, ತನ್ನವರೊಡನೆ ಒಂದಾಗಿ, ನಿರ್ದಿಷ್ಟ ಗುರಿ, ಉದ್ದೇಶಗಳ ಈಡೇರಿಕೆಗಾಗಿ ಹೋರಾಟಗಳನ್ನು ನಡೆಸುತ್ತಾ ಬಂದಿದ್ದಾರೆ.

ನೂರಾರು ಸಂಘಟನೆಗಳು ಹುಟ್ಟಿರುವ ಈ ನೆಲದಲ್ಲಿ ಸಂಘಟನೆಗಳ ನಿರಂತರ ಕ್ರಿಯಾಶೀಲತೆ, ಚಲನೆ ಶೀಲತೆಗೆ ಸಾಧ್ಯವಾಗಬೇಕು. ಕಾರಣ ಇದು ಜನರ ನೋವು ಹಾಗೂ ಶೋಷಿತ ಸಮಾಜ ಆಗಿದೆ. ಹಳ್ಳಿಗಾಡಿನ ಜನರ ಕಡೆಗೆ ಪೂರ್ಣವಾಗಿ ಮುಖ ತಿರುಗಿಸಬೇಕು. ಎಲ್ಲಾ ಬಡ ಜನತೆಯ, ನೊಂದ ಜನತೆಯ, ದೀನದಲಿತರ, ದುರ್ಬಲರ, ಶ್ರಮಜೀವಿಗಳ ಹೋರಾಟದ ನಡುವೆ ಸಮನ್ವಯತೆ ಸಾಧಿಸಬೇಕಾಗಿದೆ. ಇದಕ್ಕೆ ಖಚಿತ ರಾಜಕೀಯ ತಿಳುವಳಿಕೆಯ ಅವಶ್ಯಕತೆ ಇದೆ. ದುಡಿಯುವ ಜನತೆಯ ಸಂಘಟನೆಯ ತಳ ಮತ್ತಷ್ಟು ಗಟ್ಟಿಯಾಗಬೇಕು, ಆಗ ಮಾತ್ರ ಸಾಂಘಿಕ ನೆಲೆಗಳು ಜನಮನದಲ್ಲಿ ಉಳಿಯುತ್ತವೆ.

ಅತಿಯಾದ ಅಸಮಾನತೆಯಿಂದ ತುಂಬಿರುವ ನಮ್ಮಂತಹ ವ್ಯವಸ್ಥೆಯಲ್ಲಿ ಕುಟುಂಬ ಸಮುದಾಯಗಳು ಬಲಗೊಳ್ಳುತ್ತಿವೆ ಎಂಬುದನ್ನು ಸಕಾರಾತ್ಮಕ ಬೆಳವಣಿಗೆಯೆಂದು ಭಾವಿಸಲು ಸಾಧ್ಯವಿಲ್ಲ. ಸಮಾಜ ಅಥವಾ ಸರಕಾರದಿಂದ ದೊರೆಯಬಹುದಾದ ಸೌಲಭ್ಯಗಳನ್ನು ಸಮಾಜದ ವಿವಿಧ ಸ್ಥರಗಳಿಗೆ ಸೇರಿದ ಜನರು ಬಳಸಿಕೊಳ್ಳುವ ಸಾಮರ್ಥ್ಯ ಬೇರೆ ಬೇರೆ ಆಗಿರುತ್ತದೆ. ಯಾವಾಗ ಪ್ರತಿಯೊಂದು ಸಮುದಾಯದ ದುಡಿಯುವ ಜನ ಪಾರಂಪರಿಕವಾಗಿ ಬಂದಿರುವ ಅಸಮಾನತೆಗಳಿಂದ ಹೊರಬರಲು ಸಮಾಜ ಅವಕಾಶ ಮಾಡಿಕೊಡುತ್ತದೆಯೋ ಆಗ ವ್ಯಕ್ತಿ ತನ್ನ ಕುಟುಂಬ ಸಮುದಾಯಗಳ ಅವಲಂಬನೆಯಿಂದ ಹೊರ ಬರಲು ಸಾಂಘಿಕ ಯತ್ನ ಮಾಡಲು ಸಾಧ್ಯವಾಗುತ್ತದೆ. ಆದುದರಿಂದ ದುರ್ಬಲ ಕುಟುಂಬ ಸಮುದಾಯಗಳ ದೃಷ್ಟಿಯಿಂದ ಕುಟುಂಬ ಸಮುದಾಯಗಳು ಬಲಗೊಳ್ಳುತ್ತಿವೆ ಎಂದರೆ ಅಸಮಾನತೆಯಿಂದ ದೂರವಾಗುತ್ತದೆ ಎಂದೇ ತಿಳಿಯಬೇಕಾಗುತ್ತದೆ.

ಮೂಲತಃ ಹೊಸಪೇಟೆ ಕೃಷಿ ಪ್ರಧಾನ ಪ್ರದೇಶ ಫಲವತ್ತಾದ ಮಣ್ಣನ್ನು ಹೊಂದಿರುವ ಭೂಪ್ರದೇಶ, ತುಂಗಾಭದ್ರಾ ಆಣೆಕಟ್ಟಿನ ಪ್ರದೇಶ ಕೂಡ ಕೃಷಿಯಲ್ಲಿ ಮಹತ್ವದ ಪಾತ್ರವಹಿಸಿದೆ. ಆದರೆ ಹೊಸಪೇಟೆ ತಾಲೂಕಿನ ಅನೇಕ ಗ್ರಾಮಗಳು ಇಂದಿಗೂ ಕೃಷಿಗೆ ಮಳೆಯ ನೀರು, ಕೊಳವೆ ಬಾವಿ ನೀರನ್ನೇ ಅವಲಂಬಿಸಿವೆ. ತಾಲೂಕಿನ ಎಲ್ಲಾ ಗ್ರಾಮಗಳಿಗೂ ಜಲಾಶಯದ ನೀರು ಲಭ್ಯವಾಗಿಲ್ಲ. ಹೊಸಪೇಟೆ ತಾಲ್ಲೂಕು ಐತಿಹಾಸಿಕ ಕೆರೆಗಳು, ಕಾಲುವೆಗಳಿಗೆ ಪ್ರಸಿದ್ಧ. ಆದರೆ ಅಂತಹ ಹಲವು ಕೆರೆಗಳು ಇಂದು ಹೂಳು ತುಂಬಿ ಹದಗೆಟ್ಟಿವೆ. ತಕ್ಕ ಪ್ರಮಾಣದ ನೀರು ಅವುಗಳಲ್ಲಿ ಶೇಖರಣೆ ಆಗುತ್ತಿಲ್ಲ.

ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕು ಸೇರಿದಂತೆ ಕರ್ನಾಟಕ ರಾಜ್ಯದಲ್ಲಿ ಅಭಿವೃದ್ಧಿ ನೀತಿಗಳು ಸಾಮಾಜಿಕ ಪರಿವರ್ತನೆಗೆ ಪೂರಕವಾಗಿರಲಿಲ್ಲ. ಸಾಮಾಜಿಕ ಅಸಮಾನತೆಗಳನ್ನು ಯಥಾ ರೀತಿಯಲ್ಲಿ ಇರಿಸಿಕೊಂಡು ನಡೆಸಿದ ಆಧುನೀಕರಣ ಪ್ರಕ್ರಿಯೆ ಸಮಾಜದ ಮೇಲು ವರ್ಗಗಳ, ಪಟ್ಟಭದ್ರರ ಹಿತಾಸಕ್ತಿಗೆ ಪೂರಕವಾಗಿಯೇ ಇತ್ತು. ಇದರಿಂದಾಗಿ ಕೆಳವರ್ಗಗಳು ತಮ್ಮ ಸಾಂಪ್ರದಾಯಿಕ ವರ್ಣರಂಜಿತ ಬದುಕನ್ನು ತ್ಯಾಗ ಮಾಡಬೇಕಾಯಿತು. ಆದುದರಿಂದ ಇಂದಿನ ವ್ಯವಸ್ಥೆಯಲ್ಲಿ ನೋವಿರುವುದು ಕೆಳವರ್ಗದ ಅಸಹಾಯಕರ ಪರಿಸ್ಥಿತಿ ಕುರಿತು. ಸಾಂಪ್ರದಾಯಿಕ ಬಡತನ ಕೇವಲ ಆರ್ಥಿಕ ಪ್ರಶ್ನೆ ಅಲ್ಲ ಉತ್ತಮ ಕೂಲಿ, ಪೌಷ್ಠಿಕಾಂಶ, ಉತ್ತಮ ಶಿಕ್ಷಣ, ಆಶ್ರಯ ಇತ್ಯಾದಿಗಳು ಕೆಳವರ್ಗದ ಜನರಿಗೆ ಗಗನ ಕುಸುಮ. ಆದರೆ ಇದೆಲ್ಲಾ ಸಾಧ್ಯವಾಗುವುದು ಈ ವರ್ಗಗಳ ಪ್ರಾತಿನಿಧಿಕ ಸಾಂಘಿಕ ನೆಲೆಗಳು ನಡೆಸುವ ರಚನಾತ್ಮಕವಾದ ಚಳುವಳಿಗಳಿಂದ ಮಾತ್ರ. ಇಂತಹ ರಚನಾತ್ಮಕ ಸಾಂಘಿಕ ನೆಲೆಗಳು ಹೊಸಪೇಟೆಯಲ್ಲಿ ಮೊದಲಿನಿಂದಲೂ ನಡೆಯುತ್ತಿವೆ. ಅವುಗಳು ಈ ಕೆಳಗಿನಂತಿವೆ.

## ೪.೧ : ರೈತ ಸಾಂಘಿಕ ನೆಲೆ

ನಮ್ಮ ದೇಶದ ಚಳುವಳಿ ಎಂದರೆ ಅದು ಈ ದೇಶದ ಶೇ ೭೦% ರಷ್ಟು ದುಡಿಯುವವರ ಚಳುವಳಿಯಂದೇ ಹೇಳಬಹುದು. ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಾತ್ಮ ಗಾಂಧೀಜಿ, ಕಾಂಗ್ರೆಸ್ ನಾಯಕರ ಕರೆಯ ಮೇರೆಗೆ ರೈತಾಪಿ ವರ್ಗ ಸ್ವಾತಂತ್ರ್ಯ ಚಳುವಳಿಯಲ್ಲಿ ನಿರ್ಣಾಯಕ ಪಾತ್ರ ನಿರ್ವಹಿಸಿತು, ಆರ್ಥಿಕ ಪ್ರಮುಖ ರಾಜಕೀಯ ಪಾತ್ರ ನಿರ್ವಹಿಸಿತು. ಆರ್ಥಿಕ ಪ್ರಮುಖ ರಾಜಕೀಯ ವೆಂದರೆ ರೈತ ಚಳುವಳಿಯಂಥ ಚಳುವಳಿಗಳನ್ನು ಪರಿಗಣಿಸಲಾಗಿದೆ. ಇಲ್ಲಿ ಜಾತಿ, ಭಾಷೆ, ಧರ್ಮ, ಇತ್ಯಾದಿ ವಿಚಾರಗಳಿಂದ ಉದ್ಭವವಾಗುವ ಬಿನ್ನತೆಗಳು, ದ್ವೇಷ ಸಾಧನೆಗಳು ಕಡಿಮೆ ಎಂದು ಅಭಿಪ್ರಾಯ ಪಡಲಾಗಿದೆ. ಹಾಗಾದರೆ ರೈತರೆಂದರೆ ಯಾರು ಎಂಬ ಜಿಜ್ಞಾಸೆ ರೈತರ ಚಳುವಳಿಯ ಆಶಯಗಳನ್ನು ವ್ಯಕ್ತಪಡಿಸುತ್ತವೆಯೇ ಎನ್ನುವ ಚರ್ಚೆ ಈ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಯಾರು ತನ್ನ ಭೂಮಿಯನ್ನು ಸ್ವತಃ ಉಳುತ್ತಾನೋ ಅವನೇ ರೈತ, ಯಾರು ಕೃಷಿಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದಾರೋ ಅವರೇ ರೈತರು ಎಂದು ತನ್ನ ನಿಲುವನ್ನು ಸ್ಪಷ್ಠಪಡಿಸಲು ಪ್ರಯತ್ನಿಸಿದೆ.

೧೯೮೭ ರಲ್ಲಿ ಪ್ರಕಟಿಸಿದ ''ಫಾರ್ಮರ್ಸ್ ಮೂಮೆಂಟ್ ಇನ್ ಇಂಡಿಯಾ '' ಎಂ.ವಿ. ನಾಡಕರ್ಣಿಯವರ ಕೃತಿ ೧೯೯೭ ರಲ್ಲಿ ಪ್ರಕಟಿಸಿದ ಮುಝಾಫರ್ ಅಸ್ಸಾದಿಯವರ ''ಪೆಸೆಂಟ್ ಮೂಮೆಂಟ್ ಇನ್ ಕರ್ನಾಟಕ ಅತ್ಯಂತ ಪ್ರಮುಖವಾದ ಕೃತಿಗಳಾಗಿವೆ.

ಕರ್ನಾಟಕದ ಏಕೀಕರಣವಾದ ಮೇಲೆ ರೈತ ಚಳುವಳಿಯ ಸೈದ್ಧಾಂತಿಕತೆ ಮತ್ತು ಸಂಘಟನೆಯ ಅಂಶಗಳನ್ನು ಅಳವಡಿಸಿಕೊಂಡ ರೈತ ಚಳುವಳಿಗಳು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಮುಂದುವರೆದಿವೆ. ಅಖಿಲ ಭಾರತ ಕಿಸಾನ್ ಸಭಾ ಮತ್ತು ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ಪ್ರಾಂತ ರೈತ ಸಂಘಗಳು ಮುಖ್ಯವಾಗಿವೆ. ೧೯೮೦ರಲ್ಲಿ ನಡೆದ ಮಲಪ್ರಭಾ ರೈತರ ಹೋರಾಟವು

ಕರ್ನಾಟಕದ ರೈತರ ಚಳುವಳಿಯ ಮುಖ್ಯ ತಿರುವುವಾಗಿದೆ. ಈ ಚಳುವಳಿಯ ಹಿನ್ನಲೆಯಲ್ಲಿರು ಕರ್ನಾಟಕ ರಾಜ್ಯ ರೈತರು ಸಂಘವು ಕರ್ನಾಟಕ ರಾಜ್ಯದಲ್ಲಿ ಒಂದು ಪ್ರಬಲ ಶಕ್ತಿಯಾಗಿ ಹೊರ ಹೊಮ್ಮಲು ಕಾರಣವಾಯಿತು. ಕರ್ನಾಟಕದ ರೈತ ಹೋರಾಟಕ್ಕೆ ಒಂದು ರೀತಿಯ ಸಮಗ್ರತೆಯನ್ನು ನೀಡಿದ ಈ ರೈತ ಸಂಘದ ಹುಟ್ಟು ಬೆಳವಣಿಗೆ ಸೈದ್ಧಾಂತಿಕ ನಿಲುವುಗಳು ಹಾಗೂ ಹೋರಾಟದ ಮಾದರಿಗಳು ಆಧುನಿಕ ಕರ್ನಾಟಕದ ರೈತ ಚಳುವಳಿಯ ಮುಖ್ಯವಾದ ಮೈಲುಗಲ್ಲಾಗಿವೆ.

ಭಾರತದಲ್ಲಿ ರೈತರ ಸಮಸ್ಯೆಯನ್ನು ತೆಗೆದುಕೊಂಡು ಸುಮಾರು ೧೨೦ಕ್ಕೂ ಹೆಚ್ಚು ಮುಖ್ಯ ಹೋರಾಟಗಳು ನಡೆದಿರುವುದು ಕಂಡು ಬರುತ್ತದೆ. ಕಳೆದ ಎರಡು ಶತಮಾನಗಳಲ್ಲಿ ರೈತರ ಹೋರಾಟಗಳು ಪ್ರಾಮುಖ್ಯ ಪಡೆದಿವೆ. ಮೈಸೂರು ರಾಜ್ಯದಲ್ಲಿ ಸರ್ಕಾರಿ ವ್ಯವಸ್ಥೆ ಶಿಥಿಲವಾಗಿ ಅರಾಜಕತೆ ಉಂಟಾಗಿದ್ದರಿಂದ ಬ್ರಿಟೀಷರು ನೇರವಾಗಿ ರಾಜ್ಯವನ್ನು ಆಳುತ್ತಿದ್ದರು. ಈ ಸಂದರ್ಭದಲ್ಲಿ ನಡೆದ ರೈತರ ಹೋರಾಟಗಳನ್ನು 'ನಗರ ಡಿವಿಜನ್‌ದಂಗೆ' ಎಂದು ಕರೆಯಲಾಗಿದೆ. ಇದರ ಪರಿಣಾಮವಾಗಿ ಸ್ವಾತಂತ್ರ ಪೂರ್ವದಲ್ಲಿ ಬ್ರಿಟೀಷರು ರೈತರ ಭೂಮಿಯನ್ನು ನಿಗದಿಗೊಳಿಸಿ, ಇಂದು ಕಲ್ಲನ್ನು ಹಾಕಿಸಿ ಇಂತಿಷ್ಟು ಕಂದಾಯ ಎಂದು ಗೊತ್ತು ಪಡಿಸಿದ್ದು, ಇದೇ ರೈತವಾರಿ ಪದ್ಧತಿಯಾಯಿತು. ೧೯ನೇ ಶತಮಾನದಲ್ಲಿ ಅಖಿಲ ಭಾರತ ಮಟ್ಟದಲ್ಲಿ ಮಹಾತ್ಮ ಗಾಂಧೀಜಿಯವರ ನೇತೃತ್ವದಲ್ಲಿ ಚಂಪರಣ್, ಬಾಡೋರ್ಲಿ ರೈತ ಚಳುವಳಿ, ೧೯೨೦ ಮಲಬಾರ್ ಮಾಪಿಳ್ಳೆಗಳ ಹೋರಾಟ, ತೇಭಾಗ ಚಳುವಳಿ ಹಾಗೂ ತೆಲಂಗಾಣ ಹೋರಾಟಗಳು ೨೦ನೇ ಶತಮಾನದ ಉತ್ತರಾಧೀನದಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದವು.

ಕರ್ನಾಟಕದ ಮಟ್ಟಿಗೆ ಹೇಳಬಹುದಾದರೆ ಭೂ ಸಂಬಂಧಗಳು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ರೂಪದಲ್ಲಿದ್ದವು. ಇನಾಂ, ಜಮ್ಮ, ಜಹಗೀರು, ವಾರಗುತ್ತಿಗೆ, ಒಳಕಂದಾಯ, ಗೇಣಿ ಪದ್ಧತಿ ಮುಂತಾದ ಭೂ ಸಂಬಂಧಗಳು ಇದ್ದವು. ಪಾಳೆಯಗಾರಿಕೆ ಅಂಗಗಳಾದ ಬಿಟ್ಟಿ ದುಡಿಮೆ, ಜೀತ ಪದ್ಧತಿ, ಬಡ್ಡಿ ವ್ಯಾಪಾರ, ಜಾತಿ ಪದ್ಧತಿಯ ಸಾಮಾಜಿಕ ಅಂತಸ್ತುಗಳು, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಅನಿಷ್ಠಗಳೇ ತುಂಬಿದ್ದವು. ನಿಜಾಮಶಾಯಿ ಹಿಡಿತದಲ್ಲಿದ್ದ ಕರ್ನಾಟಕದ ಪ್ರದೇಶಗಳಲ್ಲಿ ಭೂಮಾಲೀಕ ಪದ್ಧತಿ ಘೋರವಾಗಿತ್ತು. ವ್ಯಾಪಕ ಗೇಣಿ ಪದ್ಧತಿಯಿಂದಾಗಿ ಉತ್ಪನ್ನದ ಬಹುಪಾಲನ್ನು ಜಮೀನಿನ ಮಾಲೀಕರಿಗೆ ಕೊಡಬೇಕಾಗಿತ್ತು. 'ಜಮ್ಮ' ಎನ್ನುವ ಭೂ ಹಿಡುವಳಿಯನ್ನು ಹೊಂದಿದ್ದ ಭೂ ಹಿಡುವಳಿ ದಾರರು ಸಾಂಪ್ರದಾಯಿಕ 'ಗುಲಾಮ' ಸಮುದಾಯಗಳನ್ನು ಬಿಟ್ಟಿಯಾಗಿ ದುಡಿಸಿಕೊಳ್ಳುತ್ತಿದ್ದರು. ಬಲಿಷ್ಠ ಭೂ ಹಿಡುವಳಿ ಸಮುದಾಯಗಳು ಮಧ್ಯಮ ಮತ್ತು ಬಡ ಭೂಹಿಡುವಳಿದಾರರನ್ನು ಶೋಷಿಸುತ್ತಿರುವುದು ಸಾಮಾನ್ಯವಾಗಿತ್ತು.

ಭಾಷಾವಾರು ಪ್ರಾಂತಗಳ ರಚನೆಯ ಹಿನ್ನೆಲೆಯಲ್ಲಿ ರೂಪಕಗೊಂಡ ಮೈಸೂರು ರಾಜ್ಯ ಅಸ್ಥಿತ್ವಕ್ಕೆ ಬಂದ ನಂತರ 'ಅಖಿಲ ಭಾರತ ಕಿಸಾನ್ ಸಭಾ' ಅಂಗ ಸಂಸ್ಥೆಯಾದ ಕರ್ನಾಟಕ ಪ್ರಾಂತ ರೈತ ಸಂಘವು ಕರ್ನಾಟಕ ರಾಜ್ಯದ ರೈತರನ್ನು ಸಂಘಟಿಸುವಲ್ಲಿ ಶ್ರಮಿಸಿತು. ಇದಕ್ಕೆ ಬಹುಮುಖ್ಯ ಕಾರಣ ೧೯೪೦ರ

ಪೂರ್ವಾರ್ಧದಲ್ಲಿ ಆಂಧ್ರದಲ್ಲಿ ನಡೆದ ತೆಲಂಗಾಣ ರೈತ ಹೋರಾಟವು ಜಮೀನ್ದಾರರ ವಿರುದ್ಧದ ಮತ್ತು ಭೂಮಿ ಹಂಚಿಕೆಗೆ ನೇರವಾಗಿ ಸಂಬಂಧಿಸಿದ್ದು ಎಂದು ಹೇಳಬಹುದು. ತೆಲಂಗಾಣ ರೈತ ಹೋರಾಟವನ್ನು ಸಂಘಟಿಸಿದ್ದು ಅಖಿಲ ಭಾರತ ಕಿಸಾನ್ ಸಭಾ ಎಂಬುದು ಬಹಳ ಮುಖ್ಯ. ಈ ಚಳುವಳಿಯ ಪರಿಣಾಮ ಏನೆಂದರೆ ಬಂಡವಾಳ ಶಾಹಿಗಳ ಕೈಯಲ್ಲಿದ್ದ ರಾಷ್ಟ್ರೀಯ ಸರಕಾರಗಳು ಭೂ ಸುಧಾರಣಾ ಕಾಯ್ದೆಗಳನ್ನು ತರಲು ಬಲವಂತವಾಗಿ ಒಪ್ಪಿಕೊಂಡವು. ಇಂದು ಬಂದಿರುವ ಶಾಸನಗಳಿಗೆ ಈ ಹೋರಾಟಗಳೇ ಕಾರಣೀಭೂತವಾಗಿವೆ ಎಂದು ಸಿ.ರಾಮಭದ್ರಯ್ಯ ಹೇಳುತ್ತಾರೆ.

ವಸಾಹತೋತ್ತರ ಕಾಲದಲ್ಲಿ ಪ್ರಮುಖವಾಗಿ ೧೯೫೦ರ ದಶಕದ ಆರಂಭದಲ್ಲಿ ಕಾಗೋಡಿನಲ್ಲಿ ನಡೆದ ರೈತ ಚಳುವಳಿ ಲೋಹಿಯಾವಾದಿಗಳಾಗಿದ್ದ ಶಾಂತವೇರಿ ಗೋಪಾಲಗೌಡರ ನೇತೃತ್ವದಲ್ಲಿ ನಡೆಯಿತು. ಕಾಗೋಡು ಗೌಡರ ಕುಳಗಳಾಗಿ ೭೦ ದೀವರ ಜಾತಿ ಮತ್ತು ೧೪ ಹರಿಜನ ಜಾತಿ ಕುಟುಂಬಗಳು 'ಕೊಳದ' ಪದ್ಧತಿಗೆ ಬಲಿಯಾಗಿದ್ದರು. ಈ ಪದ್ಧತಿಯ ಪ್ರಕಾರ ರೈತರನ್ನು ಬಲಾತ್ಕಾರವಾಗಿ ಒಕ್ಕಲೆಬ್ಬಿಸ ಬಹುದಾಗಿತ್ತು. ಈ ಸಂದರ್ಭದಲ್ಲಿ ೧೯೪೮ರ ಗೇಣಿದಾರ ಸಂಸ್ಥೆಗಳ ಮತ್ತು ೧೯೫೧ ರಲ್ಲಿ ಮಲೆನಾಡು ರೈತ ಸಂಘವು ಹುಟ್ಟಿಕೊಂಡಿತು. ಇದೇ ಸಂದರ್ಭದಲ್ಲಿಯೇ ಅಳತೆಯ ಗೇಣಿಯಲ್ಲಿ ವ್ಯತ್ಯಾಸಗಳಾಗಿ ಮಾಲೀಕರು ಹೊಲಗಳಿಂದ ರೈತರನ್ನು ಬಿಡಿಸಲು ಮುಂದಾದರು. ರೈತರು ಉಳಿಮೆ ಮಾಡಿದಾಗ ಅವರ ಮೇಲೆ ಕ್ರಿಮಿನಲ್ ಮೊಕದ್ದಮೆಗಳು ದಾಖಲಾದವು. ಪರಿಣಾಮವಾಗಿ ರೈತರ ಸತ್ಯಾಗ್ರಹ ಆರಂಬಿಸಿದ್ದು, ೧೯೫೧ ಜುಲೈ ೩ ರಂದು ಶಾಂತವೇರಿ ಗೋಪಾಲಗೌಡರ ಬಂಧನವಾಗಿ ಚಳುವಳಿ ನಿಂತಿತು. ಎಲ್ಲಾ ರೈತರನ್ನು ಭಾಗವಹಿಸುವಂತೆ ಪ್ರೇರೇಪಿಸಿದ ಈ ಹೋರಾಟ ಒಂದು ಚರಿತ್ರಾರ್ಹ ಘಟನೆಯಾಗಿದೆ. ಇದರ ಮುಖ್ಯ ಪರಿಣಾಮವೇನೆಂದರೆ ಭೂ ಮಾಲೀಕರಿಗೆ ಗೇಣಿದಾರರು ಮಾಡುತ್ತಿದ್ದ ಬಿಟ್ಟಿ ದುಡಿಮೆ ನಿಂತಿತು. ಈ ಸಂಘಟನೆ ಮುಂದಿಟ್ಟ ಭೂ ಸುಧಾರಣಾ ಕಾಯಿದೆ ಜಾರಿಗೆ ಪ್ರಯತ್ನಗಳಾದವು.

ಹೊಸಪೇಟೆ ತಾಲೂಕು ಸೇರಿದಂತೆ ಬಳ್ಳಾರಿ ಜಿಲ್ಲೆಯ ಈ ಪ್ರದೇಶ ಸ್ವಾತಂತ್ರ್ಯ ಪೂರ್ವದಲ್ಲಿ ಮದ್ರಾಸ್ ಪ್ರಾಂತಕ್ಕೆ ಒಳಪಟ್ಟಿದ್ದರಿಂದ ರೈತರಿಗೆ ತೀವ್ರವಾದ ಸಮಸ್ಯೆಗಳಿದ್ದವು. ಈ ಇಡೀ ಪ್ರದೇಶ ಪಾಳೆಯಗಾರಿ ವ್ಯವಸ್ಥೆ ಅದರ ಎಲ್ಲಾ ಕಾರ್ಯಗಳೊಂದಿಗೆ ಭದ್ರವಾಗಿ ಬೇರೂರಿದ್ದ ಪ್ರದೇಶವಾಗಿತ್ತು. ಜಮಿನ್ದಾರಿ ಶೋಷಣೆಯಲ್ಲಿ ಹೈದ್ರಾಬಾದ್ ನಿಜಾಮನ ಆಳ್ವಿಕೆಯಲ್ಲಿ ಆಡಳಿತದ ಪ್ರಭಾವ ದಟ್ಟವಾಗಿತ್ತು. ಹೈದ್ರಾಬಾದ್ ನಿಜಾಮನು ಒಟ್ಟು ಜಮೀನಿನ ೬೦ ಭಾಗ ಸರ್ಕಾರಿ ಭೂ ಕಂದಾಯಕ್ಕೆ (ದಿವಾನಿಭೂಮಿ) ಒಳಗಾಗಿದ್ದರೆ, ೩೦ ಭಾಗ ಜಾಗೀರ್‌ದಾರಿ ಪದ್ಧತಿಯಲ್ಲಿ ಮತ್ತು ಶೇ ೧೦ ನಿಜಾಮನ ಸ್ವಂತ ಜಮೀನು (ಸರ್ಫಖಾಸ್) ಆಗಿತ್ತು. ನಿಜಾಮ ಮತ್ತು ಅವನ ಸ್ವಂತ ಕುಟುಂಬ ವರ್ಷಕ್ಕೆ ೨ ಕೋಟಿ ರೂಪಾಯಿ ಖರ್ಚು ಮಾಡುತ್ತಿದ್ದರು. ಮೇಲೆ ತಿಳಿಸಿರುವ ಜಮೀನುಗಳಿಂದಲೂ ರೈತರಿಂದ ಅತಿದೊಡ್ಡ ಪ್ರಮಾಣದಲ್ಲಿ ಬೇರೆ ಬೇರೆ ರೀತಿಯಲ್ಲಿ ಕಾನೂನು ಬದ್ಧವಾಗಿಯೂ, ಕಾನೂನು ಬಾಹಿರವಾಗಿಯೂ, ತೆರಿಗೆ ಮತ್ತು ಭೂ ಕಂದಾಯಗಳನ್ನು ಬಲಾತ್ಕಾರವಾಗಿ ವಸೂಲಿ ಮಾಡುತ್ತಿತ್ತು. ರೈತನ ದುಡಿಮೆಯ ದೊಡ್ಡ ಭಾಗವನ್ನು

ನಿಜಾಮ ಮತ್ತು ಜಮೀನ್ದಾರರು ಕೊಳ್ಳೆ ಹೊಡೆಯುತ್ತಿದ್ದರು. ಭೂ ಒಡೆತನದ ವಿಪರೀತ ಕೇಂದ್ರೀಕರಣದ ಈ ಒಂದೇ ಒಂದು ಉದಾಹರಣೆ ಕಣ್ಣಿಗೆ ಕಟ್ಟಿದ ಹಾಗೆ ಹೇಳುತ್ತದೆ. ಜನ್ನಾರೆಡ್ಡಿ ಪ್ರತಾಪರೆಡ್ಡಿ ಎಂಬಾತ ಸುಮಾರು ಒಂದೂವರೆ ಲಕ್ಷ ಎಕರೆ ಜಮೀನು ಹೊಂದಿದ್ದ, ಹಲವಾರು ಜಮೀನುದಾರರು ೩೦ - ೪೦ ಸಾವಿರ ಎಕರೆಗಳಷ್ಟು ಜಮೀನು ಹೊಂದಿದ್ದರು.

ನಿಜಾಮನ ಆಡಳಿತದಲ್ಲಿ ವ್ಯಾಪಕ ಲಂಚ ಗುಳಿತನ ಇತ್ತು. ಭ್ರಷ್ಟಾಚಾರಿಗಳಿಂದ ಕೂಡಿದ ಏಕಾಧಿಕಾರವಾಗಿತ್ತು. ಯಾವುದೇ ರೀತಿಯ ಪ್ರಜಾಸತ್ತಾತ್ಮಕ ಹಕ್ಕುಗಳಾಗಲಿ, ಸ್ವಾತಂತ್ರ್ಯವಾಗಲಿ ಇರಲಿಲ್ಲ. ತೆಲಂಗಾಣದಲ್ಲಿ ರೈತರ ಹೋರಾಟಕ್ಕೆ ಇವು ಪ್ರಮುಖವಾಗಿ ಕಾರಣವಾದ ಅಂಶಗಳು. ಹೈದ್ರಾಬಾದ್ ನಿಜಾಮನ ಈ ದಮನಕಾರಿ ನೀತಿಗಳ ವಿರುದ್ಧ ಈ ಭಾಗದ ರೈತಾಪಿ ವರ್ಗ ಆಂಧ್ರ ಮಹಾಸಭಾದ ನೇತೃತ್ವದಲ್ಲಿ ವಿದ್ಯಾರ್ಥಿಗಳು, ಮಧ್ಯಮ ವರ್ಗದವರು ರೈತರು, ಸಣ್ಣ ವ್ಯಾಪಾರಿಗಳು, ಕುಲಕಸಬಿಗರು ಇವರೆಲ್ಲರ ಪ್ರಜಾಸತ್ತಾತ್ಮಕ ಆಕಾಂಕ್ಷೆಗಳ ಕೇಂದ್ರ ಬಿಂದುವಾಗಿ ಬೆಳೆಯಿತು. ಆಂಧ್ರ ಮಹಾ ಸಭಾದ ಯುವ ಕಾರ್ಯಕರ್ತರು ಎಲ್ಲಾ ಜನವಿಭಾಗಗಳನ್ನು, ಅದರಲ್ಲೂ ರೈತರನ್ನು ಬೇಡಿಕೆಗಳ ಸುತ್ತಾ ಸಂಘಟಿಸುತ್ತಾ ಅದನ್ನು ವಿಶಾಲ ತಳಹದಿಯಲ್ಲಿ ಬೆಳೆಸಿದರು.

ಈ ಚಳುವಳಿ ಆರಂಭದಲ್ಲಿ ಬಿಟ್ಟಿ ದುಡಿಮೆಯ ವಿರುದ್ಧ, ರೈತರ ಒಕ್ಕಲು ಎಬ್ಬಿಸುವಿಕೆಯ ವಿರುದ್ಧ ಭ್ರಷ್ಟ ಅಧಿಕಾರಿಗಳ ವಿರುದ್ಧ, ನಿಜಾಮರ ದುರಾಡಳಿತದ ವಿರುದ್ಧ ಬೆಳೆಯುತ್ತಾ ಕ್ರಮೇಣ ಹಳ್ಳಿಗಳಲ್ಲಿ ದೊಡ್ಡ ಬೆಂಬಲ ಪಡೆಯಿತು. ಅಲ್ಲಲ್ಲಿ ಭೂಮಾಲೀಕರ ಗುಂಡಾಗಳನ್ನು ಎದುರಿಸಲು ಹಲವು ಬಾರಿ ಹೊಡೆದಟ್ಟಲು ಶಕ್ತವಾಗಿತ್ತು.

ತೆಲಂಗಾಣ ಸಶಸ್ತ್ರ ಹೋರಾಟಕ್ಕೆ ಕಿಡಿಯಾದ ಮೊದಲ ಘಟನೆ ಜುಲೈ ೪, ೧೯೪೬ ರಂದು ನಡೆಯಿತು. ನಲಗೊಂಡಾ ತಾಲ್ಲೂಕಿನ ವಿಸನೂರು ರಾಮಚಂದ್ರ ರೆಡ್ಡಿ (ಇವನು ೪೦,000 ಎಕರೆ ಜಮೀನು ಮಾಲೀಕ) ಎಂಬುವನ ಸಶಸ್ತ್ರ ಗುಂಡಾಗಳು 'ಐಲಮ್ಮ' ಎಂಬ ರೈತ ಮಹಿಳೆಯ ಹೊಲಕ್ಕೆ ಲೂಟಿ ಮಾಡಲು ಆಂಧ್ರ ಸಭಾದ ಯುವ ಜನರು ಅವರನ್ನು ಹಿಮ್ಮೆಟ್ಟಿಸಿದ್ದರು. ಅದೇ ದಿನ ಆ ಆಕ್ರಮಣವನ್ನು ಪ್ರತಿಭಟಿಸಿ ನಡೆದ ಶಾಂತಿಯುತ ಮೆರವಣಿಗೆಯ ಮೇಲೆ ಭೂಮಾಲೀಕನ ಗುಂಡಾ ಪಡೆ ದಾಳಿ ಮಾಡಿ ಮೆರವಣಿಗೆಯ ನೇತೃತ್ವವಹಿಸಿದ್ದ, ದೊಡ್ಡಿಕೊಮರಯ್ಯ ಎಂಬ ರೈತ ನಾಯಕನನ್ನು ಗುಂಡಿಕ್ಕಿ ಕೊಲ್ಲಲಾಯಿತು. ಇದರಿಂದ ರೊಚ್ಚಿಗೆದ್ದ ರೈತ ಸಮೂಹ ಸಿಕ್ಕ ಆಯುಧಗಳನ್ನು ಬಳಸಿ ಗಂಡಾಳುಗಳನ್ನು ಬಡಿದೋಡಿಸಿತು.

ಈ ಘಟನೆ ಈ ಪ್ರದೇಶದ ರೈತರನ್ನೆಲ್ಲಾ ರೊಚ್ಚಿಗೆಬ್ಬಿಸಿತು. ಇನ್ನು ಮೇಲೆ ನಿಜಾಮನ ಈ ಪ್ರದೇಶದಲ್ಲಿ ಬಿಟ್ಟಿ ದುಡಿಮೆ ಇಲ್ಲ, ಕಾನೂನು ಬಾಹಿರ ಕಡ್ಡಾಯ ತೆರಿಗೆ ಕಂದಾಯಗಳಿಲ್ಲ, ರೈತರ ಬಲಾತ್ಕಾರದ ಒಕ್ಕಲೆಬ್ಬಿಸುವಿಕೆ ಇಲ್ಲ ಎಂದು ಸಾಮೂಹಿಕವಾಗಿ ರೈತರು ಘೋಷಣೆ ಮಾಡಿದರು. ಜನರ ಈ ಸಾಮೂಹಿಕ ಚಳುವಳಿಯಿಂದ ಅಂದಿನ ನಿಜಾಮನ ಸರಕಾರ ಧಾನ್ಯ ಲೆವಿ ವಸೂಲಿ ಮಾಡಲಾಗಲಿಲ್ಲ. ಹಲವು ಗ್ರಾಮಗಳಲ್ಲಿ ಭೂಮಾಲೀಕರನ್ನು ಗ್ರಾಮಗಳಿಂದ ಒಡಿಸಲಾಯಿತು. ಇದಕ್ಕೆ ನಿಜಾಮನ ಆಡಳಿತ

ಪ್ರತೀಕಾರಿ ಕ್ರಮಗಳನ್ನು ಜರುಗಿಸಲು ಆರಂಭಿಸಿತು. ಚಳುವಳಿ ನಿರತ ರೈತರನ್ನು ಶೋಧಿಸುವುದು, ಮುಖಂಡರನ್ನು ಬಂಧಿಸುವುದು. ಹೀಗೆ ನಿಜಾಮನ ಸೈನಿಕರು, ಪೋಲಿಸರು ಜನರ ಮೇಲೆ ಆಕ್ರಮಣ ನಡೆಸತೊಡಗಿದರು. ದೊಡ್ಡ ಪ್ರಮಾಣದಲ್ಲಿ ಕಾರ್ಯಕರ್ತರ ಬಂಧನ, ಚಿತ್ರ ಹಿಂಸೆ, ಜನರ ಮೇಲೆ, ರೈತರ ಮೇಲೆ ಸತತ ಆಕ್ರಮ ನಡೆದಿದ್ದಾಗ್ಯೂ, ಚಳುವಳಿ ಪಾಳೆಯಗಾರಿ ಭೂಮೂಲಿಕತ್ವದ ರದ್ದು ಮಾಡುವ ಚಳುವಳಿಯಾಗಿ ಮುಂದುವರೆಯಿತು. ಮಹಿಳೆಯರು ರೈತರು ಈ ಹೋರಾಟದಲ್ಲಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿಯೇ ಭಾರತಕ್ಕೆ ಬ್ರಿಟೀಷರಿಂದ ಅಧಿಕಾರದ ಹಸ್ತಾಂತರವಾಯಿತು.

ಇಡೀ ದೇಶ ಸ್ವಾತಂತ್ರ್ಯದ ಜನೋತ್ಸದಲ್ಲಿ ಭಾಗವಹಿಸಿದ್ದರೆ, ಇತ್ತ ಹೈದ್ರಾಬಾದಿನ ನಿಜಾಮನು ತಾನೇ ಸ್ವತಂತ್ರ್ಯ ರಾಷ್ಟ್ರವನ್ನು ರಚಿಸಲು ಹುನ್ನಾರ ನಡೆಸಿದ್ದನು. ಮೊದಲೇ ನಿಜಾಮನ ದುರಾಡಳಿತಕ್ಕೆ ರೋಸಿ ಹೋಗಿದ್ದ ಜನತೆ ಸ್ವಾತಂತ್ರ್ಯ ದೊರೆತ ಸಂಭ್ರಮದ ಹುರುಪಿನಲ್ಲಿ ನಿಜಾಮನ ವಿರುದ್ಧದ ತಮ್ಮ ಹೋರಾಟವನ್ನು ಮತ್ತಷ್ಟು ತೀವ್ರ ಗೊಳಿಸಿದರು. ಇದರಿಂದ ತೆಲಂಗಾಣ ಹೋರಾಟದ ಚಳುವಳಿಗೆ ಕಾಂಗ್ರೆಸ್ ಸಹ ಬೆಂಬಲಕ್ಕೆ ಧಾವಿಸಿತು.

ಈ ಎರಡನೆಯ ಘಟ್ಟದ ಚಳುವಳಿ ಬದಲಾದ ರಾಜಕೀಯ ಪರಿಸ್ಥಿತಿಯಿಂದಾಗಿ ಬಹಳ ಆಳವಾಗಿ ಹಾಗೂ ವ್ಯಾಪಕವಾಗಿ ಈ ಪ್ರದೇಶದ ತುಂಬೆಲ್ಲಾ ಹರಡಿತು. ಇದೇ ಸಂದರ್ಭದಲ್ಲಿಯೇ ನಿಜಾಮನ ಮಿಲಿಟರಿ ಸೈನ್ಯದ ಅನುಯಾಯಿ ಪಡೆಯಾಗಿದ್ದ ರಾಜಾಕಾರರ ಹಾವಳಿ ತೀವ್ರವಾಗಿ ಕಾಡುತಿತ್ತು. ರಾತ್ರಿ ಕಾಲದಲ್ಲಿ ರಜಾಕಾರರ ಪಡೆಯನ್ನು ಮಿಲಿಟರಿ ಬೆಂಬಲದೊಂದಿಗೆ ಮೂಲೆ ಮೂಲೆಗೆ ಕಳಿಸಲಾಗುತಿತ್ತು. ರಜಾಕಾರರು ಹೈದ್ರಾಬಾದ್ ಸಂಸ್ಥಾನದಲ್ಲಿದ್ದಂತಹ ಪ್ರದೇಶದಲ್ಲಿ ಸಾಮೂಹಿಕ ಕೊಲೆ, ಲೂಟಿ, ಮಾನಭಂಗ, ಅಗ್ನಿ ಸ್ಪರ್ಷ ಮುಂತಾದ ಅತ್ಯಾಚಾರಗಳಲ್ಲಿ ತೊಡಗಿದರು. ಇವರ ವಿರುದ್ಧ ರೈತರೂ ಸೇರಿದಂತೆ ಇಡೀ ಜನತೆ ಶಸ್ತ್ರಾಸ್ತ್ರ ಪ್ರಯೋಗ ಮಾಡುವುದು ಅನಿವಾರ್ಯವಾಯಿತು. ಆದಕ್ಕಾಗಿ ಆಂದ್ರ ಮಹಾಸಭಾ ೧೦,೦೦೦ ಬಲವುಳ್ಳ ಗ್ರಾಮ ಸ್ಕ್ವಾಡುಗಳು, ೨೦೦೦ ಗೆರಿಲ್ಲಾ ಸ್ಕ್ವಾಡುಗಳನ್ನು ಸಂಘಟಿಸಿತು. ಜನರ ಈ ಪ್ರತಿರೋಧದಿಂದ ಸುಮಾರು ೩೦೦೦ ಹಳ್ಳಿಗಳಲ್ಲಿ ಸಾಧ್ಯವಿರುವ ಎಲ್ಲಾ ಪಾಳೆಯಗಾರಿ ವಿರೋಧಿ ಕ್ರಮಗಳನ್ನು ಜಾರಿಗೆ ತಂದರು. ಬಲಾತ್ಕಾರದ ಬಿಟ್ಟಿ ದುಡಿಮೆ, ಒಕ್ಕಲೆಬ್ಬಿಸುವಿಕೆಯನ್ನು ನಿಲ್ಲಿಸಲಾಯಿತು. ಜಮಿನ್ದಾರರಿಗೆ ನೀಡುತ್ತಿದ್ದ ಗೇಣಿ ಮತ್ತು ಕಂದಾಯಗಳಲ್ಲಿ ಕಡಿತ ಆರಂಭವಾಗಿ ಪೂರ್ಣವಾಗಿ ನಿಲ್ಲಿಸುವುದರಲ್ಲಿ ಚಳುವಳಿ ಮುಂದುವರೆಯಿತು. ಗೇಣಿಗೆ ಪಡೆದುಕೊಂಡಿದ್ದ ಜಮೀನನ್ನು ಉಳಿಸಿಕೊಳ್ಳಲಾಯಿತು. ಭೂಮಾಲೀಕರು ಕಸಿದುಕೊಂಡಿದ್ದ ಜಮೀನನ್ನು ಅವರಿಗೆ ವಾಪಾಸ್ಸು ಕೊಡಿಸಲಾಯಿತು. ಭೂಹಿಡುವಳಿ ಮಿತಿಯನ್ನು ಕಡ್ಡಾಯವಾಗಿ ಜಾರಿಗೆ ತರಲಾಯಿತು. ೧೦೦ ಎಕರೆ ಭೂಜಮೀನು, ೧೦೦ ಎಕರೆ ನೀರಾವರಿ ಜಮೀನು ಪರಮಾವಧಿ ಮಿತಿಯಾಯಿತು. ಸುಮಾರು ೧೦ ಲಕ್ಷ ಜಮೀನನ್ನು ರೈತರಿಗೆ ಹಂಚಲಾಯಿತು. ಈ ಭೂ ಸುಧಾರಣೆ, ಭೂ ಹಿಡುವಳಿ ಮಿತಿಯ ಎಲ್ಲಾ ಕ್ರಮಗಳನ್ನು ಕಾರ್ಯಗತಗೊಳಿಸಿದ್ದು, ರೈತ ಸಮಿತಿಗಳೇ ಎಂಬುದು ಅತ್ಯಂತ ಪ್ರಮುಖವಾದದ್ದು. ಈ ಎಲ್ಲಾ ಕ್ರಿಯೆಗಳಲ್ಲಿಯೂ ರೈತರೊಂದಿಗೆ ಇತರೆ ಜನ ವಿಭಾಗಗಳನ್ನು ತೊಡಗಿಸಲಾಯಿತು. ಕುಖ್ಯಾತ

ಜಮೀನುದಾರರ ಭಾರಿ ಧವಸ, ಧಾನ್ಯಗಳ ಕಣಜಗಳನ್ನು ಸ್ವಾಧೀನ ಪಡಿಸಿಕೊಂಡು ಹಳ್ಳಿ ಬಡವರಿಗೆ ಹಂಚಲಾಯಿತು. ಸುಮಾರು ೧೬,೦೦೦ ಚ. ಮೈಲಿ ಹಾಗೂ ೩೦ ಲಕ್ಷ ಜನಸಂಖ್ಯೆ ಇರುವ ೩ ಜಿಲ್ಲೆಗಳಾದ ನಲ್ಗೊಂಡಾ, ವಾರಂಗಲ್, ಖಮ್ಮಾಮ್‌ಗಳ ೩೦೦ ಹಳ್ಳಿಗಳಲ್ಲಿ ಸ್ವಾತಂತ್ರ್ಯ ಬಂದ ಹೊಸದರಲ್ಲಿ ರೈತ ಸಮಿತಿಗಳೇ ಎಲ್ಲಾ ಆಡಳಿತವನ್ನು ನಡೆಸಿದವು. ಈ ಎಲ್ಲಾ ಕ್ರಮಗಳಿಂದಾಗಿ ಪಾಳೆಯಗಾರಿ ವ್ಯವಸ್ಥೆಯ ಮೇಲೆ ಆಧಾರಿತವಾದ ನಿಜಾಮನ ಆಡಳಿತ ಬುಡ ಸಹಿತವಾಗಿ ನಡುಗ ಹತ್ತಿತು.

೧೯೪೮ ರ ಮಧ್ಯದ ಹೊತ್ತಿಗೆ ನಿಜಾಮನ ರಜಾಕಾರರ ಪಡೆ, ಸೈನ್ಯ, ಪೋಲಿಸ್ ಪಡೆಗಳ ಮೇಲೆ ದಿನದಿಂದ ದಿನಕ್ಕೆ ಹೊಸ ವಿಜಯಗಳನ್ನು ಪಡೆಯುತ್ತಾ ತೆಲಂಗಾಣ ರೈತರ ಸಶಸ್ತ್ರ ಹೋರಾಟ ಮುನ್ನಡೆದಿತ್ತು. ತೆಲಂಗಾಣ ರೈತರ ಹೋರಾಟ ನಿಜಾಮನ ಮೇಲೆ ಪೂರ್ಣ ವಿಜಯ ಸ್ಥಾಪಿಸುವ ಸೂಚನೆ ಕುರಿತು ಬಂದಾಗ ಕಾಂಗ್ರೇಸ್ ನೇತೃತ್ವ ಕೇಂದ್ರ ಸರಕಾರ ಎಚ್ಚೆತ್ತುಗೊಂಡು, ಹೈದ್ರಾಬಾದ್ ಪ್ರಾಂತದ ರೈತರ, ಜನರ ಸಂಕಷ್ಟಗಳನ್ನು ಮನಗಂಡು ಭಾರತದ ಸೈನ್ಯ ಪಡೆಯೊಂದಿಗೆ ಹೈದ್ರಾಬಾದ್ ಪ್ರಾಂತದೊಳಗೆ ನುಗ್ಗಿ ಆ ಪ್ರದೇಶದ ವಿಲೀನಕ್ಕಾಗಿ ಪ್ರಯತ್ನ ನಡೆಸಲು ಆರಂಭಿಸಿತು. ಇದರ ಭಾಗವಾಗಿಯೇ ಹೊಸಪೇಟೆಯ ಹತ್ತಿರದ ಮುನಿರಾಬಾದಿನಲ್ಲಿ ನಡೆದ ಪೋಲಿಸ್ ಕಾರ್ಯಾಚರಣೆ ನಡೆದಿದ್ದು. ಕೇವಲ ಐದು ದಿನಗಳಲ್ಲಿಯೇ ಹೈದ್ರಾಬಾದಿನ ನಿಜಾಮನ ಸೈನಿಕರು, ರಜಾಕಾರರು, ಪೋಲೀಸರು ಮೊದಲೇ ಸ್ಥಳೀಯ ಜನತೆಯ ರೈತರ ಪ್ರತಿರೋಧದಿಂದ ಕಂಗೆಟ್ಟಿದ್ದ ಇವರುಗಳು ಭಾರತೀಯ ಪಡೆಗಳಿಗೆ ಶರಣಾಯಿತು.

ತೆಲಂಗಾಣ ರೈತರ ಹೋರಾಟ ಇನ್ನೂ ಹಲವು ಕಾರಣಗಳಿಗೆ ಗಮನಾರ್ಹವಾಗಿರುತ್ತದೆ. ಇದು ಮೊದಲ ಬಾರಿಗೆ ಭಾರತದ ಸಮಸ್ಯೆಗಳನ್ನು ಪರಿಹರಿಸಲು ದೇಶದ ಕೃಷಿ ಸಂಬಂಧಗಳಲ್ಲಿ ಕ್ರಾಂತಿಕಾರಕ ಬದಲಾವಣೆಯ ಅನಿವಾರ್ಯತೆ ಮತ್ತು ತುರ್ತು ಅಗತ್ಯತೆಯನ್ನು ಬಲವಾಗಿ ದೇಶದ ಮುಂದಿರಿಸಿತು. ಮುಂದಿನ ಕೇಂದ್ರ ಸರಕಾರ ಹಾಗೂ ಅನೇಕ ರಾಜ್ಯ ಸರಕಾರಗಳು ಭೂ ಸುಧಾರಣೆಗಳನ್ನು ಅಂಗೀಕರಿಸಿದ್ದು, ಈ ಹೋರಾಟದ ನೇರ ಫಲ. ಅರೆಮನಸ್ಸಿನ, ತಡವರಿಕೆಯ, ಅಸಮರ್ಪಕ ಭೂ ಸುಧಾರಣೆಯ ಪ್ರಯತ್ನಗಳೆಲ್ಲಾ ಕೂಡ ತೆಲಂಗಾಣ ಹೋರಾಟದಂತಹ ವ್ಯಾಪಕ ಹೋರಾಟದ ಬೆದರಿಕೆಯಿಂದ ಆದಂತಹವು. ವಿನೋಭಭಾವೆಯಂತಹ 'ಭೂದಾನ' ಚಳುವಳಿಗಳೂ ಸಹಾ ಈ ಹೋರಾಟದ ಪ್ರತಿಫಲ.

ತೆಲಂಗಾಣ ಚಳುವಳಿಯ ಇನ್ನೊಂದು ಬಹುಮುಖ್ಯ ಪರಿಣಾಮವೆಂದರೆ ನಮ್ಮ ಭಾಷೆ, ಸಂಸ್ಕೃತಿ, ರಾಷ್ಟ್ರೀಯತೆ ಮುಂತಾದ ಪ್ರಜಾಸತ್ತಾತ್ಮಕ ವೈಜ್ಞಾನಿಕ ಆಧಾರದ ಮೇಲೆ ರಾಜ್ಯಗಳ ಪುನರ್‌ವಿಂಗಡಣೆ ಅದು ತಂದ ಬಲವಾದ ಒತ್ತಾಯ. ಚಳುವಳಿಯುದ್ದಕ್ಕೂ ಹೈದ್ರಾಬಾದ್ ರಾಜ್ಯವನ್ನು ವಿಸರ್ಜಿಸಿ, ತೆಲುಗು ಮಾತನಾಡುವ ಎಲ್ಲಾ ಪ್ರದೇಶಗಳನ್ನು ಸೇರಿಸಿ ಆಂಧ್ರಪ್ರದೇಶ ರಚಿಸಬೇಕು ಎಂಬ ಬೇಡಿಕೆ ಬಂದಿತು. ೧೯೫೨ ರಲ್ಲಿ ಪೈಟ್ಟಿ ಸೀತಾರಾಮುಲು ರವರು ಹುತಾತ್ಮರಾಗಿ ಆಂಧ್ರ ಪ್ರದೇಶದ ಜನನಕ್ಕೆ ಕಾರಣವಾದ ಚಳುವಳಿ ಸಹಾ ತೆಲಂಗಣ ಚಳುವಳಿಯ ಮೇಲೆಯೇ ಆಧಾರಿತವಾದದ್ದು. ಆಂಧ್ರ ಮಾತ್ರವಲ್ಲದೆ ಇನ್ನಿತರ ಭಾಷಾವಾರು ಪ್ರಾಂತಗಳ ರಚನೆಗೂ ಈ ರೈತರ ಹೋರಾಟ ಸ್ಫೂರ್ತಿ ನೀಡಿತು.

ಹೊಸಪೇಟೆ ತಾಲೂಕಿನಲ್ಲಿ ಸ್ವಾತಂತ್ರ್ಯ ನಂತರ ಹೈದ್ರಾಬಾದ್ ಪ್ರಾಂತದಲ್ಲಿಯೇ ನಡೆದ ಈ ತೆಲಂಗಾಣ ಹೋರಾಟ ನಿಜಾಮನ ಆಡಳಿತದ ಕ್ರೂರತನವನ್ನು ಅನುಭವಿಸಿದ್ದಲ್ಲದೆ, ರಜಾಕಾರರ ಹಾವಳಿಯಿಂದ ತತ್ತರಿಸಿದ್ದು, ಆತನ ಕಾನೂನು ಬಾಹಿರ ತೆರಿಗೆಗಳಿಂದ ಕಂಗೆಟ್ಟು ಹೋಗಿದ್ದ, ಸ್ಥಳೀಯ ರೈತರು ಸೇರಿದಂತೆ ಬಹುತೇಕ ಎಲ್ಲಾ ಜನವಿಭಾಗಗಳ ಮೇಲೆ ಎಲ್ಲಾ ಆಂಧ್ರ ಸಭಾ ನೇತೃತ್ವದಲ್ಲಿ ನಡೆದ ಸ್ಪೂರ್ತಿಯುತ ಈ ಧೀರೋದಾತ್ತ ಹೋರಾಟ ಮತ್ತು ನಿಜಾಮನ ಸೈನಿಕರ ಮೇಲೆ ಸ್ವಾತಂತ್ರ್ಯ ಭಾರತದ ಮಿಲಿಟರಿ ಸೈನಿಕರು ನಡೆಸಿದ ಚಾರಿತ್ರಿಕ ಪೋಲಿಸ್ ಕಾರ್ಯಾಚರಣೆ ತಾಲೂಕಿನ ವಿವಿಧ ಭಾಗಗಳಲ್ಲಿ ಸಾಂಘಿಕ ಚಟುವಟಿಕೆಗಳು, ಚಿಗುರೊಡೆಯಲು ಆರಂಭವಾಗಲು ಕಾರಣವಾಯಿತು. ತೆಲಂಗಾಣ ಹೋರಾಟದ ಸಾವಿರಾರು ಹುತಾತ್ಮರ ಉಜ್ವಲ ಕ್ರಾಂತಿಕಾರಿ ಆದರ್ಶ ಸ್ಪೂರ್ತಿಯ ಸೆಲೆಯಿಂದ ಅನೇಕ ಜನ ವಿಭಾಗಗಳಲ್ಲಿ ತಮ್ಮ ತಮ್ಮ ಹಿತಾಸಕ್ತಿಗಳ ಈಡೇರಿಕೆಗಾಗಿ ಸಾಂಘಿಕ ಪ್ರಯತ್ನಗಳನ್ನು ನಡೆಸಲು ಸಹಾಯಕವಾಯಿತೆಂದೇ ಹೇಳಬಹುದು.

ಹೊಸಪೇಟೆ ತಾಲೂಕು ಪ್ರದೇಶ ಮೂಲಭೂತವಾಗಿ ಕೃಷಿಯನ್ನೇ ನಂಬಿದೆ. ಇತಿಹಾಸ ಕಾಲದಿಂದಲೂ ಇದು ಫಲವತ್ತತೆಗೆ ಹೆಸರಾದ ಭೂ ಪ್ರದೇಶವಾಗಿದೆ. ಸುತ್ತಲಿನ ಬಯಲು ಪ್ರದೇಶಗಳಿಗೆ ನೀರುಣಿಸುತ್ತಾ ಹರಿಯುವ ತುಂಗಾಭದ್ರಾ ನದಿಯೇ ಇದಕ್ಕೆ ಕಾರಣವಾಗಿದೆ. ಫಲವತ್ತಾದ ಮಣ್ಣನ್ನು ಹೊಂದಿರುವ ಈ ಪ್ರದೇಶ ಇದಕ್ಕೆ ಕಾರಣೀಭೂತವಾಗಿರುವುದು ಸುತ್ತಲೂ ಗುಡ್ಡ ಬೆಟ್ಟಗಳನ್ನು ಹೊಂದಿರುವುದರಿಂದ ಭೂಮಿ ಯಾವಾಗಲು ತಂಪಾಗಿರುತ್ತದೆ. ಮಳೆಗಾಲದಲ್ಲಿ ಗುಡ್ಡದ ಮೇಲೆ ಬೀಳುವ ಮಳೆಯಿಂದ ಗುಡ್ಡ ಫಲವತ್ತಾದ ಮಣ್ಣನ್ನು ಕೃಷಿ ಭೂಮಿಗೆ ನೀರಿನೊಂದಿಗೆ ತರುತ್ತಿರುವುದರಿಂದ ಈ ಪ್ರದೇಶದ ಭೂಮಿಗಳು ಹೆಚ್ಚು ಫಲವತ್ತಾಗಿದೆ ಎಂದರೆ ತಪ್ಪಾಗಲಾರದು. ಹೊಸಪೇಟೆ ತಾಲೂಕಿನಲ್ಲಿ ಶೇ ೮ ರಷ್ಟು ಕಪ್ಪು ಮಣ್ಣಿನಿಂದ ಕೂಡಿದ್ದರೆ, ಶೇ ೨ ರಷ್ಟು ಕೆಂಪು ಮಣ್ಣಿನಿಂದ ಕೂಡಿದೆ. ಉಳಿದ ಶೇ. ೯೦ ರಷ್ಟು ಕೃಷಿ ಮಣ್ಣು ಮರಳು ಮಿಶ್ರಿತ ಭೂಮಿಯಿದೆ. ಇದು ಭತ್ತ, ಕಬ್ಬು, ಬಾಳೆ, ಜೋಳ, ಹತ್ತಿ, ಶೇಂಗಾ, ಈರುಳ್ಳಿ, ಟೊಮಟೋ, ತೊಗರಿ, ಅಲಸಂದಿ, ಹುರುಳಿ ಮುಂತಾದ ಬೆಳೆಗಳಿಗೆ ಅತ್ಯಂತ ಸೂಕ್ತವಾದ ಭೂಮಿಯಾಗಿರುತ್ತದೆ.

ವಿಜಯನಗರ ಕಾಲದಿಂದಲೂ ಈ ಪ್ರದೇಶದಲ್ಲಿ ಮಳೆಯ ಅಭಾವದ ಕಾರಣಕ್ಕಾಗಿ ಕೆರೆ ಕಟ್ಟೆಗಳನ್ನು ನಿರ್ಮಿಸಿ, ಕೃಷಿಕರಿಗೆ, ಜನಜೀವನಕ್ಕೆ ವಿಜಯನಗರ ರಾಜರು ಅನುಕೂಲ ಕಲ್ಪಿಸಿದ್ದರು. ಈ ಪ್ರದೇಶದ ಕೃಷಿಕರು ಮಳೆಗಿಂತಲೂ ಹೆಚ್ಚಾಗಿ ನದಿ - ನಾಲಾ, ಹಳ್ಳ, ಕೆರೆ ಬಾವಿಗಳ ನೀರನ್ನೇ ಅವಲಂಬಿಸಿದ್ದಾರೆ. ಮಳೆ ಮತ್ತು ಇತರೆ ನೈಸರ್ಗಿಕ ಅನುಕೂಲತೆ, ಪ್ರತಿಕೂಲತೆಗಳನ್ನವಲಂಬಿಸಿಕೊಂಡು ಈ ಪ್ರದೇಶದ ಬಿತ್ತನೆಯ ಕಾಲವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ೧ ಮುಂಗಾರು (ಜೂನ್-ಸೆಪ್ಟೆಂಬರ್) ೨ ಹಿಂಗಾರು (ಅಕ್ಟೋಬರ್-ಜನವರಿ) ೩ ಬೇಸಿಗೆ (ಫೆಬ್ರವರಿ-ಮೇ) ಇವುಗಳಲ್ಲಿ ಮುಂಗಾರಿನಲ್ಲಿ ಭತ್ತ, ಕಬ್ಬು, ಬಾಳೆ, ಜೋಳ ಮುಂತಾದ ಬೆಳೆಗಳಿಗೆ, ಪ್ರಾಶಸ್ತವಾದ ಕಾಲ. ಕಾಲುವೆ,

ನೀರಾವರಿ ಸೌಲಭ್ಯವಿರುವ ಕೃಷಿ ಪ್ರದೇಶಗಳಲ್ಲಿ ಹಿಂಗಾರಿನಲ್ಲೂ ಈ ಬೆಳೆಗಳನ್ನು ಬೆಳೆಯಲಾಗುತ್ತದೆ. ಕಾಲುವೆಗಳಲ್ಲಿ ನೀರು ಹರಿದು ಬಂದರೆ ಬಯಲು ಪ್ರದೇಶಗಳಲ್ಲಿ, ಅದೇ ರೀತಿ ಕೆರೆಬಾವಿಗಳಲ್ಲಿ ನೀರು ಬತ್ತದೇ ಹೋದರೆ ಮೇಲ್ಮಟ್ಟದ ಪ್ರದೇಶಗಳಲ್ಲಿ ಬೇಸಿಗೆಯಲ್ಲೂ ಅಲ್ಪಸ್ವಲ್ಪ ಕೃಷಿ ನಡೆಯುತ್ತಿರುತ್ತದೆ. ಇಲ್ಲಿನ ಜನರ ಮುಖ್ಯವಾದ ಆಹಾರ ಬೆಳೆಗಳೆಂದರೆ ಭತ್ತ ಮತ್ತು ಜೋಳ, ನವಣೆ ಸಜ್ಜೆ ಮುಂತಾದವುಗಳನ್ನು ಬೆಳೆಯುತ್ತಾರೆ. ತಗ್ಗಿನ ಬಯಲು ಪ್ರದೇಶಗಳಲ್ಲಿ ಅರ್ಥಾತ್ ಕಾಲುವೆ ನೀರಾವರಿ ಪ್ರದೇಶಗಳಲ್ಲಿ ಭತ್ತವನ್ನು, ಬಾಳೆ, ಕಬ್ಬನ್ನು, ತೆಂಗು, ಶೇಂಗಾ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ಭತ್ತ, ಕಬ್ಬು, ಬಾಳೆ ಈ ಪ್ರದೇಶದ ನೀರಾವರಿ ಬೆಳೆಗಳು. ತುಂಗಾಭದ್ರಾ ಬಲ ದಂಡೆಯಲ್ಲಿರುವ ಹೊಸಪೇಟೆ, ಕಮಲಾಪುರ ಮತ್ತು ಕಂಪ್ಲಿ ಹೋಬಳಿಗಳ ಕೆಲ ಗ್ರಾಮಗಳಲ್ಲಿ ಇವು ಮೂರನ್ನು ವಿಶೇಷವಾಗಿ ಬೆಳೆಯುತ್ತಾರೆ.

ವಿಜಯ ನಗರದ ಪ್ರೌಢರಾಯನ ಕಾಲದಲ್ಲಿ ಎರಡು ಶಾಸನಗಳ ಪದ್ಯಗಳು ಅರಸರು ಕೃಷಿ ನೀರಾವರಿಗೆ ಯಾವ ರೀತಿಯ ಪ್ರೋತ್ಸಾಹ ನೀಡಿದ್ದರು ಎಂಬುದು ತಿಳಿದು ಬರುತ್ತದೆ.

''ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರವತಿಮಾಡಿಸು
ಜರೆಯೊಳ್ ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಕೆಯ್, ನಂಬಿದ
ರ್ಗೆರೆವಟ್ಟಾಗಿರು ಶಿಷ್ಯರಂ ಪೊರೆಯೆನ್ನುತ್ತಿಂತೆಲ್ಲವಂ ಪಿಂದೆ ತಾ
ಯೆರೆವಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರ ಮಾತ್ಯನಾ''

(ವಿಜಯ ಕಲ್ಯಾ : ಪು ೨೨೩)

''ವೀರ ಭಗೀರಥಂ ಗಗನ ಗಂಗೆಯ ನುರ್ವಿಗೆ ತಂದನಂತದೋಂ
ಪೌರುಷ ಮಲ್ತು ಕೇಳ್, ಗಗನದಿಂ ಕೆಳಗಿರ್ದು ಹರಿದ್ರೆಯೆತ್ತಲುಂ
ಬಾರದಿರಲ್ಕೆ, ಕಟ್ಟಿ, ಪಿಡಿದಿಟ್ಟ ಹರೀಶಪುರಕ್ಕೆ ಕೊಂಡು ಬಂ
ದೀರಸೆಯೊಳ್ ಪೆಸರ್ವಡೆದ ಬುಳ್ಳ ಚಮೂಪನಿದೇಂ ಸಭ್ಯಾಗ್ಯನೋ''

(ವಿಜಯ ಕಲ್ಯಾಣ : ೨೨೩)

ವಿಜಯ ನಗರ ಕಾಲಕ್ಕಿಂತ ಪೂರ್ವದಲ್ಲಿಯೇ ಈ ಪ್ರದೇಶದಲ್ಲಿ ಕೃಷಿಗಾಗಿ ನೀರಾವರಿ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟ ಬಗೆಗೆ ನಮಗೆ ಶಾಸನಗಳಿಂದ ಉಲ್ಲೇಖ ಸಿಗುತ್ತವೆ. ಕೃಷಿಯ ಕುರಿತು ತಿಳಿಯುವಾಗ ಕಲ್ಯಾಣ ಚಾಲುಕ್ಯರ ಕಾಲದ (ಕ್ರಿ.ಶ.೧೧೯೯) ಶಾಸನದಲ್ಲಿ ಭೂಮಿಗೆ ನೀರುಣಿಸುವ ಹಂಪಿಯ ಕಟ್ಟೆ, ಹೆಸರಿನ ಕೆರೆ, ಒಡ್ಡಿನ ಕಲ್ಲು, ಬಾಯಾಲು ಮುಂತಾದ ಅಂದಿನ ನೀರಾವರಿ ಸೌಲಭ್ಯಗಳಿಗೆ ಸಂಬಂಧಿಸಿದ ಉಲ್ಲೇಖಗಳಾಗಿವೆ. ಈ ಅರಸರು ತಾಲೂಕಿನ ವಿವಿಧ ಕಡೆ ತುಂಗಾ ಭದ್ರಾ ನದಿಗೆ ಆಣೆಕಟ್ಟುಗಳನ್ನು ಕಟ್ಟಿಸಿ, ನೀರಾವರಿ ಸೌಲಭ್ಯ ಒದಗಿಸಿದ್ದನ್ನು ಕಾಣಬಹುದು. ಅಂದಿನ ಹೊಸೂರು, ತುರ್ತಾಕಾಲುವೆ, ರಾಮಸಾಗರ, ಕಂಪ್ಲಿಗಳಲ್ಲಿ ಸಣ್ಣ ಆಣೆಕಟ್ಟುಗಳನ್ನು ಅವುಗಳಿಂದ ಹೊರಡುವ

ಕಾಲುವೆಗಳನ್ನು ಇಂದಿಗೂ ಕಾಣಬಹುದಾಗಿದೆ. ಹೊಸೂರು ಆಣೆಕಟ್ಟಿನಿಂದ ಹೊರಡುವ ಬಲದಂಡೆಯ ಕಾಲಘಟ್ಟ ಕಾಲುವೆ ಆರೂವರೆ ಕಿ.ಮೀ ಉದ್ದವಿದ್ದು, ತಾಲೂಕಿನ ಕೃಷಿ ವಲಯಕ್ಕೆ ನೀರುಣಿಸುತ್ತಿದೆ. ಇದೇ ಆಣೆಕಟ್ಟಿನಿಂದ ಎಡದಂಡೆಯ ಹುಲುಗಿ ನಾಲೆಯು ಐದು ಕಿ.ಮೀ ದೂರದವರೆಗೂ ಹರಿಯುತ್ತಿದ್ದು, ಈಗಿನ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಸ್ವಲ್ಪ ಭಾಗಕ್ಕೆ ನೀರೊದಗಿಸುತ್ತದೆ. ಹಂಪಿಯಿಂದ ಸುಮಾರು ಮೂರು ಕಿ.ಮೀ ಪಶ್ಚಿಮಕ್ಕಿರುವ ತುರ್ತಾ ಆಣೆಕಟ್ಟಿನಿಂದ ಹೊರಡುವ ತುರ್ತಾ ಬಲದಂಡೆ ನಾಲೆಯು ೧೬ ಕಿ.ಮೀ ಉದ್ದವಿದ್ದು, ಹಂಪೆ, ಕಡ್ಡಿರಾಂಪುರ, ಕೃಷ್ಣಾಪುರ, ವೆಂಕಟಾಪುರಗಳಂತಹ ಗ್ರಾಮಗಳಿಗೆ ಉಪಯುಕ್ತವಾಗಿದೆ. ಇದೇ ಆಣೆಕಟ್ಟಿನಿಂದ ಹೊರಡುವ ಎಡದಂಡೆಯ ಆನೆಗೊಂದಿರು ನಾಲೆಯು ಗಂಗಾವತಿ ತಾಲೂಕಿನ ಆನೆಗೊಂದಿಯ ಭೂಮಿಗೆ ನೀರುಣಿಸುತ್ತಿದೆ. ಹಂಪೆಯಿಂದ ಕೆಳಗೆ ಸು. ೨ ಕಿ.ಮೀ ದೂರದಲ್ಲಿರುವ ರಾಮಸಾಗರ ಆಣೆಕಟ್ಟಿನಿಂದ ಹೊರಡುವ ರಾಮಸಾಗರ ನಾಲೆಯು ೧೬ ಕಿ.ಮೀ ಉದ್ದವಿದ್ದು, ಆ ಗ್ರಾಮದ ಸುತ್ತಲೂ ಕೃಷಿಗೆ ನೀರುಣಿಸುತ್ತಿದೆ. ಎಡದಂಡೆ ನಾಲೆಯ ಮೇಲೂ ಮತ್ತು ಕೆಳಗೂ ಗಂಗಾವತಿಯ ನಾಲೆಗಳಾಗಿ ಕವಲೊಡೆದು ಗಂಗಾವತಿ, ಹೊಸಹಳ್ಳಿಗಳಿಗೆ ನೀರೊದಗಿಸುತ್ತದೆ. ರಾಮಸಾಗರದಿಂದ ಸುಮಾರು ೨ ಕಿ.ಮೀ. ದೂರದಲ್ಲಿರುವ ಕಂಪ್ಲಿ ನಾಲೆಯೂ (ಸು. ೨೩ ಕಿ.ಮೀ) ಬೆಳಗೆ ನಾಲೆಯಾಗಿಯೂ ಹರಿದು ಸುತ್ತಲ ಪ್ರದೇಶಕ್ಕೆ ನೀರು ಒದಗಿಸುತ್ತದೆ. ಆ ಕಾಲದ ಇನ್ನೆರಡು ಆಣೆಕಟ್ಟುಗಳು ಈಗ ನಿರ್ಮಾಣವಾಗಿರುವ ತುಂಗಾಭದ್ರಾ ಜಲಾಶಯದಲ್ಲಿ (ವಲ್ಲಭಾಪುರ, ಹೊಸಪೇಟೆ) ಮುಳುಗಿವೆ.

ಈ ಭಾಗದ ನೀರಾವರಿ ನೆಲೆಗಳಲ್ಲಿ ಕೆರೆಗೂ ಮಹತ್ವದ ಸ್ಥಾನವಿದೆ. ಮೇಲೆ ಸೂಚಿಸಿರುವ ಶಾಸನದ ಪದ್ಯಗಳಲ್ಲಿ ಕೆರೆಗಳಿಗೆ ಐತಿಹಾಸಿಕ ಮಹತ್ವದ ಸ್ಥಾನವನ್ನು ನೀಡಿದೆ. ಹಿಂದೆ ಹೊಸಪೇಟೆ ತಾಲೂಕಿನ ಹಲವು ಹಳ್ಳಿಗಳಲ್ಲಿ ನಿರ್ಮಾಣವಾದ ಹಲವಾರು ಕೆರೆಗಳು ಇಂದು ಮುಚ್ಚಿ ಹೋಗಿವೆ. ಇನ್ನೂ ಕೆಲವು ಕೆರೆಗಳು ಹೊಲ, ಗದ್ದೆಗಳಾಗಿ ಪರಿವರ್ತನೆ ಆಗಿವೆ. ಹೊಸಪೇಟೆಯಿಂದ ರಾಷ್ಟ್ರೀಯ ಹೆದ್ದಾರಿ ೧೩ ಕ್ಕೆ ಹೋಗುವ ಮಧ್ಯದಲ್ಲಿ ಬರುವ ರಾಯರಕೆರೆ ಇದಕ್ಕೊಂದು ಉತ್ತಮ ಉದಾಹರಣೆ ಎಂದರೆ ತಪ್ಪಾಗದು. ಈ ಕೆರೆಯ ನೀರಿನಿಂದ ಭತ್ತದ ಮತ್ತು ಕಬ್ಬಿನ ಗದ್ದೆಗಳಿಗೆ ನೀರು ಪೂರೈಸುವ ಉಪಕಾಲುವೆಗಳಿದ್ದವೆಂದು ರಾಬರ್ಟ್ ಸಿವೆಲ್ ಅಭಿಪ್ರಾಯ ಪಡುತ್ತಾರೆ. ಡಣಾಯಕನಕೆರೆ, ಕಮಲಾಪುರಕೆರೆ, ಜಂಬಯ್ಯನಕೆರೆ, ಪೋತಲಕಟ್ಟಿ ಕೆರೆ, ನಂದಿಬಂಡೆಕೆರೆ, ರಾಮಲಿಂಗಕೆರೆ (ರಾಮಸಾಗರ) ಮುಂತಾದವು ಈಗಲೂ ಅಸ್ಥಿತ್ವ ದಲ್ಲಿರುವ ಪ್ರಮುಖ ಕೆರೆಗಳು. ಡಣಾಯಕನಕೆರೆ ಬಳ್ಳಾರಿ ಜಿಲ್ಲೆಯಲ್ಲಿಯೇ ವಿಸ್ತೀರ್ಣದಲ್ಲಿ 2ನೇ ಸ್ಥಾನದಲ್ಲಿದೆ. ಅಂದರೆ ಈ ಕೆರೆ ಹೊಸಪೇಟೆ ತಾಲೂಕಿನಲ್ಲಿಯೇ ಅತ್ಯಂತ ದೊಡ್ಡ ಕೆರೆ ಎಂದೇ ಕರೆಯಲಾಗಿದೆ. ಗ್ರಾಮಗಳಲ್ಲಿ ಮಳೆಗಾಲದಲ್ಲಿ ಹರಿಯುವ ಹಳ್ಳಗಳಿಂದ ಕೆರೆಗೆ ನೀರನ್ನು ಸಂಗ್ರಹಿಸ ಲಾಗುತ್ತಿತ್ತು. ವಿಜಯನಗರ ಅರಸರ ಕಾಲದಲ್ಲಿ ಕಾಲುವೆಗಳಿಂದ ಕೆರೆಗಳಿಗೆ ನೀರು ಬಿಡಲಾಗುತ್ತಿತ್ತು. ಬಸವಣ್ಣ ಕಾಲುವೆ, ರಾಯರ ಕಾಲುವೆಯಿಂದ ಈಗಲೂ ಕಮಲಾಪುರ ಕೆರೆಗೆ ನೀರನ್ನು ಬಿಡಲಾಗುತ್ತಿದೆ.

ನೈಸರ್ಗಿಕ ನೀರಿನ ನೆಲೆಗಳಲ್ಲಿ (ಜಲ ಸಂಪನ್ಮೂಲ) ನದಿಗಳನ್ನು ಬಿಟ್ಟರೆ ಹಳ್ಳಗಳು ಪ್ರಮುಖವಾಗಿವೆ. ಹೆಚ್ಚಿನ ಹಳ್ಳಗಳು ಮಳೆಗಾಲದಲ್ಲಿ ಮಾತ್ರ ಹರಿಯುತ್ತಿದ್ದು, ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ನಾರೀಹಳ್ಳ (ಹೊನ್ನಹಳ್ಳಿ, ಮಾವಿನಹಳ್ಳಿ, ನಂ.೨ ಮುದ್ದಾಪುರ, ಸುಗ್ಗೇನಹಳ್ಳಿ ಜೀರಿಗನೂರು, ಹಿರೇಜಾಯ್ಗನೂರು ಹಂಪಾದೇವನಹಳ್ಳಿ, ಇಟಿಗೆ, ಗೋನಾಳ್) ತಾಯಮ್ಮನಹಳ್ಳಿ (೧೧೨ ವೆಂಕಟಾಪುರ) ಅಗಸರ ಹಳ್ಳ (ಹೊಸೂರು) ಹಿರೇಹಳ್ಳ (ಗರಗ, ಬ್ಯಾಲಸುಂದಿ) ಗೂಗಿಯರ ಹಳ್ಳಿ (ನಂ.೮೨ ಮುದ್ದಾಪುರ), ಕಾಸೀಹಳ್ಳ, ಚಿನ್ನಾಪುರ ಹಳ್ಳ (ಮೆಟ್ರಿ) ಜಾಲಿಕೆರೆ ಹಳ್ಳ ( ಇಂಗಳಿಗಿ) ಕೆರೆಹಳ್ಳಿ , ಕಾಟ್ಲೂನಹಳ್ಳಿ (ಗರಗ, ನಾಗಲಾಪುರ) ಉಡೆಲಗಿನ ಹಳ್ಳಿ (ಜವುಕು) ನೂಲಿಕುಂಟೆ ಹಳ್ಳ (ಉಪ್ಪಾರ ಹಳ್ಳಿ) ಉದ್ನಳ್ಳಿ (ನಂ.೨೧ ದೇವಲಾಪುರ) ಅಡ್ಡಹಳ್ಳ (ಬೆಳಗೋಡು) ಗುಡಿ ಓಬಳಾಪುರ ಸಿದ್ದೇಶ್ವರ ಹಳ್ಳಿ (ಗಾದಿಗನೂರು) ಕಲ್ಲಹಳ್ಳಿ ಹಳ್ಳ (ರಾಮಸಾಗರ) ಮೆಟ್ರಿ ಹಳ್ಳ (ಅರಳಿಹಳ್ಳ) ಮುಂತಾದ ಹಳ್ಳಗಳು ತಾಲೂಕಿನಲ್ಲಿ ವಿಶೇಷವಾಗಿ ಕೃಷಿಗೆ ನೀರುಣಿಸುವ ಹಳ್ಳಗಳಾಗಿವೆ. ನದಿ ನಾಲಾ, ಕೆರೆ ಇತ್ಯಾದಿಗಳ ಸೌಲಭ್ಯವಿಲ್ಲದ ಗ್ರಾಮಸ್ಥರು ಕೃಷಿಗೆ ಬಾವಿ, ಪಂಪ್‌ಸೆಟ್‌ಗಳನ್ನು ಅವಲಂಬಿಸಿದ್ದಾರೆ. ಕಮಲಾಪುರ ಮತ್ತು ಮರಿಯಮ್ಮನಹಳ್ಳಿ, ಹೋಬಳಿಗಳ ಗ್ರಾಮಗಳಲ್ಲಿ ಬಾವಿಗಳೇ ನೀರಿನ ಮೂಲ ಜಲ ಸಂಪನ್ಮೂಲಗಳಾಗಿವೆ. ಇವುಗಳಲ್ಲಿ ಬಾವಿ ಕೊಳವೆ (ಇತ್ತೀಚೆಗೆ) ಬಾವಿಗಳನ್ನು ಕಾಣಬಹುದು.

## ಜಲಸಂಬಂಧಿ ಚಳುವಳಿ :

### ತುಂಗಾಭದ್ರಾ ಜಲಾಶಯ ನಿರ್ಮಾಣ

೧೮೫೫ ಸರ್ ಅರ್ಥರ್ ಕಾಟನ್‌ರಿಂದ ಸೂಚಿತವಾದ ಯೋಜನೆಯನ್ವಯ ೧೯೪೫ ರಲ್ಲಿ ನಿರ್ವಹಣಾ ಕಾರ್ಯ ಪ್ರಾರಂಭವಾಗಿ ೧೯೫೩ ರಲ್ಲಿ ಪೂರ್ಣಗೊಂಡ ಆಣೆಕಟ್ಟು ಈ ಪ್ರದೇಶದ ನೀರಾವರಿ ಮತ್ತು ಕೃಷಿ ಕ್ಷೇತ್ರದಲ್ಲಿ ಒಂದು ಹೊಸ ಯುಗವನ್ನೇ, ತೆರೆಯಿತೆಂದು ಹೇಳಬಹುದು. ಹೊಸಪೇಟೆಯ ಸಮೀಪ 2 ಕಿ.ಮೀ ದೂರದ ಮಲ್ಲಾಪುರದಲ್ಲಿ ಆಣೆಕಟ್ಟು ನಿರ್ಮಾಣವಾಗಿದೆ. ಬಲದಂಡೆ ಕಾಲುವೆ ಮೂಲಕ ನೀರಾವರಿಯನ್ನು ಪ್ರಾರಂಭಿಸಲಾಯಿತು. ಆಣೆಕಟ್ಟು ೨೪೪೦ ಮೀ ಉದ್ದವಿದ್ದು, ಅತಿ ಆಳದ ಅಸ್ಥಿಭಾರದಿಂದ ೪೬ ಮೀಟರ್ ಎತ್ತರದಲ್ಲಿದೆ. ೩೭೬೬ ದ. ಲೀ. ನೀರನ್ನು ಶೇಖರಿಸುತ್ತದೆ. ಎಡದಂಡೆ ಕಾಲುವೆ ೨೨೬ ಕಿ.ಮೀ ದೂರ ಕೊಪ್ಪಳ, ರಾಯಚೂರು ಜಿಲ್ಲೆಗಳಲ್ಲಿ ಹರಿಯುತ್ತಿದ್ದು, ಮೊದಲಿನ 20 ಕಿ.ಮೀ ಗುಡ್ಡಗಾಡು ಮತ್ತು ವಿಜಯನಗರದ ಅವಶೇಷಗಳಿರುವ ಪ್ರದೇಶದಲ್ಲಿ ನಿರ್ಮಾಣಗೊಂಡಿದೆ ಕಾಲುವೆಯು ಸಾಣಾಪುರ ಮತ್ತು ಶಿವಪುರದ ಎರಡು ಉಪ ಜಲಾಶಯಗಳ ಮೂಲಕ ಹರಿದು ೧೦೮೪ ಮೀಟರ್ ಉದ್ದದ ಸುರಂಗದ ಮೂಲಕ ಹರಿಯುತ್ತದೆ. ವಿದ್ಯುಚ್ಛಕ್ತಿಗಾಗಿ ೨೪ ಕಿ.ಮೀ. ದೂರದವರೆಗೆ ಎತ್ತರ ಪ್ರದೇಶಕ್ಕೆ ಈ ಕಾಲುವೆ ನೀರನ್ನು ಒಯ್ದು ೧೯೮ ಕ್ಯೂಸೆಕ್ಸ್ ನೀರನ್ನು ಬಿಡುಗಡೆ ಮಾಡುವಂತೆ ರಚಿಸಿರುವರು. ನಂತರ ೮೮ ಕ್ಯೂಸೆಕ್ಸ್ ನೀರನ್ನು ನೀರಾವರಿಗಾಗಿ ಬಳಸಲಾಗುತ್ತದೆ. ಈ

ಕಾಲುವೆಯುದ್ದಕ್ಕೂ ಅಂಚು ಕಟ್ಟಲಾಗಿದ್ದು, ೨.೪ ಲಕ್ಷ ಹೆಕ್ಟೇರು ಜಮೀನಿಗೆ ನೀರು ಒದಗಿಸಬಹುದಾಗಿರುತ್ತದೆ. ಹಂಪಿ ಹತ್ತಿರ ೩೩.೪ ಮೀಟರ್ ಎತ್ತರ ಜಲಪಾತವಿದ್ದು, ವಿದ್ಯುಚ್ಛಕ್ತಿ ಉತ್ಪಾದಿಸಲಾಗುತ್ತಿದೆ. ಒಟ್ಟು ಕರ್ನಾಟಕದಲ್ಲಿ ೮೧,೦೦೦ ಹೆಕ್ಟೇರ್ ಪ್ರದೇಶಕ್ಕೆ ನೀರುಣಿಸುತ್ತದೆ. ೧,೭೨,೫೦೦ ಕಿ. ವ್ಯಾ. ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡುತ್ತದೆ.

ಭಾರತ ಸರ್ಕಾರ ನೇಮಿಸಿರುವಂತೆ ತುಂಗಾಭದ್ರಾ ಮಂಡಳಿಯು ಆಣೆಕಟ್ಟಿನ ಬಲಗಡೆಯ ಅರ್ಧಭಾಗದ ಆಡಳಿತ ಮತ್ತು ನಿಯಂತ್ರಣವನ್ನು ನೋಡಿಕೊಳ್ಳುತ್ತದೆ. ಮಂಡಳಿಗೆ ಕೇಂದ್ರ ನೀರಾವರಿ ಮಂತ್ರಿಗಳು ನೇಮಿಸಿದ ಒಬ್ಬ ಅಧ್ಯಕ್ಷ ಹಾಗೂ ಭಾರತ ಸರ್ಕಾರ, ಆಂಧ್ರಪ್ರದೇಶ ಮತ್ತು ಕರ್ನಾಟಕ ಸರಕಾರಗಳು ನೇಮಿಸಿದ ೩ ಜನ ಸದಸ್ಯರು ಇರುತ್ತಾರೆ. ನೀರಾವತಿ ಅನುಕೂಲ ಕಲ್ಪಿಸುವುದು. ಕಾಲುವೆಗಳ ದುರಸ್ಥಿ ಕಾರ್ಯನಿರ್ವಹಿಸುವುದು. ಈ ಮಂಡಳಿಯ ಕರ್ತವ್ಯವಾಗಿದೆ. ಹೈದ್ರಾಬಾದ್ ಮತ್ತು ಮದ್ರಾಸ್ ಪ್ರಾಂತೀಯ ಸರಕಾರಗಳು ಕೂಡಿ ರೂಪಿಸಿರುವ ಯೋಜನೆಯ ಒಪ್ಪಂದದಂತೆ ಕಾರ್ಯನಿರ್ವಹಿಸುವುದು ಮಂಡಳಿಯ ಜವಾಬ್ದಾರಿಯಾಗಿದ್ದರೂ ಈ ಮಂಡಳಿಯು ಪಕ್ಷಪಾತದಿಂದ ವರ್ತಿಸುತ್ತದೆ. ಆಂಧ್ರಪ್ರದೇಶಕ್ಕೆ ಹೆಚ್ಚಿಗೆ ನೀರು ಬಿಟ್ಟು ಸದಾ ಸ್ಥಳೀಯ ರೈತರ ಕೆಂಗಣ್ಣಿಗೆ ಗುರಿಯಾಗಿರುತ್ತದೆ.

ಹೊಸಪೇಟೆ ತಾಲೂಕಿನ ರೈತರ ಚಳುವಳಿಯ ಸಾಂಘಿಕ ನೆಲೆ, ಸಾಂಘಿಕ ಪ್ರಯತ್ನಗಳು ಅದರಿಂದಾದ ಚಳುವಳಿಯ ಫಲಿತಗಳನ್ನು ತಿಳಿದುಕೊಳ್ಳಲು ಮೇಲಿನ ತಾಲೂಕಿನ ಚಿತ್ರಣ ಸಹಾಯ ಮಾಡುವುದು.

ಸ್ವಾತಂತ್ರ್ಯ ನಂತರದ ಪ್ರಾರಂಭಿಕ ವರ್ಷಗಳಲ್ಲಿ ಹೊಸಪೇಟೆ ತಾಲೂಕಿನ ರೈತ ಚಳುವಳಿ ಅದು ಕಬ್ಬು ಬೆಳೆಗಾರರ ಸಂಘಟನೆಯಾಗಿತ್ತು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯೇ ೧೯೩೦ ರಲ್ಲಿಯೇ ಕಬ್ಬು ಬೆಳೆಗಾರರ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ರೈತರನ್ನು ಸಂಘಟಿಸುವ ಪ್ರಯತ್ನಗಳು ನಡೆದಿದ್ದವು. ಸ್ವಾತಂತ್ರ್ಯಕ್ಕೆ ರೈತ ಸಂಘಟನೆಗಳು ತಲೆ ಎತ್ತುವಂತಹ ಪರಿಸ್ಥಿತಿ ಇರಲಿಲ್ಲ. ಇಡೀ ದೇಶವೇ ಸ್ವಾತಂತ್ರ್ಯ ಹೋರಾಟದಲ್ಲಿ ಮುಳುಗಿದ್ದರಿಂದ ರೈತ ಸಂಘಟನೆಗೆ ಸಹಜವಾಗಿ ಜನರ ಆಸಕ್ತಿ ಸೆಳೆಯಲಿಲ್ಲ. ಆದರೂ ಹೊಸಪೇಟೆಯಲ್ಲಿ ರೈತ ಸಂಘಟನೆಯ ಪ್ರಯತ್ನ ನಡೆಯಿತು. ಮಾಜಿ ಮಂತ್ರಿಗಳು, ಸ್ವಾತಂತ್ರ್ಯ ಹೋರಾಟಗಾರರೂ ಆದಂತಹ ದಿವಂಗತ ಡಾ|| ಆರ್. ನಾಗನಗೌಡರವರ ನೇತೃತ್ವದಲ್ಲಿ ಕಬ್ಬು ಬೆಳೆಗಾರರ ಸಂಘಟನೆ ಹೊಸಪೇಟೆ ಪ್ರದೇಶದಲ್ಲಿ ರೂಪುಗೊಂಡಿತು. ಇವರ ಜೊತೆ ಮತ್ತೊಬ್ಬ ಸಮಕಾಲೀನ ಸ್ವಾತಂತ್ರ್ಯ ಹೋರಾಟಗಾರರೂ, ಕಬ್ಬು ಬೆಳೆಗಾರರಾಗಿದ್ದ ಬೆಲ್ಲದ ಚೆನ್ನಪ್ಪರವರೂ ಕೈ ಜೋಡಿಸಿದರು. ಹಾಗೆಯೇ ಇವರೊಂದಿಗೆ ರಾಮಲಿಂಗ ಮೊದಲಿಯಾರ್, ತಾಂಡವ ಮೊದಲಿಯಾರ್, ಮತ್ತು ರಂಗನಾಥ ಮೊದಲಿಯಾರ್ ರವರು ಕಬ್ಬು ಬೆಳೆಗಾರರ ಸಮಸ್ಯೆಯನ್ನು ಮುಂದಿಟ್ಟುಕೊಂಡು ರೈತರ ಸಂಘಟನೆ ಮಾಡಲು ಪ್ರಯತ್ನ ಪಟ್ಟರು. ಕಬ್ಬನ್ನು ಮಾರಾಟ ಮಾಡುವ ದೃಷ್ಠಿಯಿಂದ ರೈತರಿಗೆ

ಸಕ್ಕರೆ ಉದ್ಯಮ ತುಂಬಾ ಮುಖ್ಯವಾಗಿರುತ್ತದೆ. ಸಕ್ಕರೆ ಉದ್ಯಮದಿಂದ ವಿಶೇಷವಾಗಿ ರೈತರು ಮೊದಲಿನಿಂದಲೂ ಹತ್ತಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಸಕ್ಕರೆ ಉದ್ಯಮದ ಬೆಳವಣಿಗೆಯೊಂದಿಗೆ ಕಬ್ಬು ಬೆಳೆಯುವ ರೈತರ ಸಮಸ್ಯೆಗಳೂ ಬೆಳೆಯುತ್ತಾ ಬಂದಿವೆ. ಈ ಸಮಸ್ಯೆಗಳು ರೈತರಿಗೆ ತುಂಬಾ ಗಂಭೀರವಾಗಿರುವುದರಿಂದ ಕಬ್ಬು ಬೆಳೆಯುವ ರೈತರು ಚಳುವಳಿಯ ಮಾರ್ಗ ಹಿಡಿಯುವುದು ಅನಿವಾರ್ಯವಾಗುತ್ತದೆ.

ಹೊಸಪೇಟೆ ಕಬ್ಬು ಬೆಳೆಗಾರರ ರೈತರ ಸಂಘಟನೆ, ಹೋರಾಟವು ಸ್ವಾತಂತ್ರ್ಯ ಪೂರ್ವದಿಂದಲೂ ಕರ್ನಾಟಕ ರೈತರ ಹೋರಾಟದ ಬಹುಮುಖ್ಯವಾದ ಅಂಗವಾಗಿರುತ್ತದೆ. ಕಬ್ಬು ಬೆಳೆಯುವ ರೈತರ ಸಮಸ್ಯೆಗಳು ಭಾರತದ ಎಲ್ಲಾ ಭಾಗದಲ್ಲೂ ಒಂದೇ ತೆರನಾಗಿಲ್ಲ. ಅವರ ಹೋರಾಟದ ಸ್ವರೂಪವೂ ಒಂದೇ ತೆರನಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಹೊಸಪೇಟೆಯ ಸಕ್ಕರೆ ಕಾರ್ಖಾನೆ ಮತ್ತು ಕಬ್ಬು ಬೆಳೆಯುವ ರೈತರ ಹೋರಾಟವನ್ನು ಗಮನಿಸುವುದು ಸೂಕ್ತವಾಗಿರುತ್ತದೆ. ೧೯೩೨ ರಲ್ಲಿ ಭಾರತ ಸರಕಾರವು ದೇಶಿಯ ಸಕ್ಕರೆ ಉದ್ಯಮವನ್ನು ವಿದೇಶಿ ಕಂಪನಿಗಳ ಪೈಪೋಟಿಯಿಂದ ರಕ್ಷಿಸಲು ಸಕ್ಕರೆ ಉದ್ಯಮ ರಕ್ಷಣಾ ಕಾನೂನನ್ನು ಜಾರಿಗೆ ತಂದಿತು. ಈ ಹಿನ್ನೆಲೆಯಲ್ಲಿ ಸಾರ್ವಜನಿಕರೇ ಮುಂದೆ ಬಂದು ಅನೇಕ ಕಾರ್ಖಾನೆಗಳನ್ನು ಪ್ರಾರಂಭಿಸಿದರು. ಇದೇ ಸಂದರ್ಭದಲ್ಲಿ ಹೊಸಪೇಟೆಯಲ್ಲಿಯೂ ದಿವಂಗತ ಡಾ॥ ಆರ್. ನಾಗನಗೌಡರವರ ನೇತೃತ್ವದಲ್ಲಿ ಸಕ್ಕರೆ ಕಾರ್ಖಾನೆ ಆರಂಭಿಸಲು ಪ್ರಯತ್ನಿಸಿದರು. ಇವರೆಲ್ಲರ ಪರಿಶ್ರಮದಿಂದ ಮದರಾಸ ಪ್ರಾಂತ್ಯದ ಪ್ರಭಾವಶಾಲಿ ಕಂಟ್ರಾಕ್ಟರುಗಳೊಂದಿಗೆ ಆರ್ಥಿಕ ಸಹಾಯಕ್ಕಾಗಿ ಶೇರು ಬಂಡವಾಳವನ್ನು ಸಂಗ್ರಹಿಸಲಾಯಿತು. ಆ ಕಾಲದಲ್ಲಿ ೧೦ ಲಕ್ಷ ರೂಪಾಯಿಗಳ ಬಂಡವಾಳ ಸಂಗ್ರಹಿಸಲಾಯಿತು. ೧೯೩೪ ರಲ್ಲಿ ಹೊಸಪೇಟೆಯ ಚಿತ್ತವಾಡ್ಗಿಯಲ್ಲಿ ಸಕ್ಕರೆ ಕಾರ್ಖಾನೆ ಪ್ರಾರಂಭವಾಯಿತು.

ಬಂಡವಾಳಗಾರರು ಸಕ್ಕರೆ ಕಾರ್ಖಾನೆ ತಮ್ಮ ಕೈಗೆ ಬಂದ ಮೇಲೆ ರೈತರನ್ನು ಶೋಷಣೆ ಮಾಡಲು ಆರಂಭಿಸಿಯೇ ಬಿಟ್ಟರು. ಕಬ್ಬು ಬೆಳೆಗಾರರ ಉತ್ಸಾಹವನ್ನು ಕುಂದಿಸಿಬಿಟ್ಟರು. ಕಬ್ಬಿಗೆ ಯೋಗ್ಯ ಬೆಲೆ ಕೊಡುವಲ್ಲಿ ಕಾರ್ಖಾನೆ ವಿಫಲವಾಯಿತು. ಬೆಲೆ ನಿಗಧಿ ಮಾಡುವಾಗಲೂ ಕೂಡ ಸರಿಯಾದ ರೀತಿಯಲ್ಲಿ ಬೆಲೆ ನಿಗಧಿಮಾಡುತ್ತಿರಲಿಲ್ಲ. ತೂಕದಲ್ಲಿ ಮೋಸ ಮಾಡಲು ಆರಂಭಿಸಿದರು. ಪ್ರಾರಂಭದಲ್ಲಿ ಕಂಪನಿಯ ಆಡಳಿತ ಮಂಡಳಿಯಲ್ಲಿದ್ದ ಡಾ॥ ಆರ್. ನಾಗನ ಗೌಡರು ರೈತರಿಗಾಗುತ್ತಿದ್ದ ಈ ಅನ್ಯಾಯವನ್ನು ತಡೆಯಲು ಬಹಳಷ್ಟು ಪ್ರಯತ್ನಿಸಿದರು. ಆದರೆ ಆ ಸಕ್ಕರೆ ಕಂಪನಿಗೆ ಸ್ವಂತ ಬಂಡವಾಳವನ್ನೇನೂ ಹಾಕದಿದ್ದ ಡಾ॥ ಗೌಡರ ಮಾತಿಗೆ ಆಡಳಿತ ಮಂಡಳಿಯಲ್ಲಿ ಬೆಲೆ ಸಿಗಲಿಲ್ಲ. ತುಂಬಾ ಶ್ರಮಪಟ್ಟು ಸಕ್ಕರೆ ಕಾರ್ಖಾನೆ ಪ್ರಾರಂಭಕ್ಕೆ ಕಾರಣವಾಗಿದ್ದ. ಡಾ॥ ಗೌಡರು ಹೊರಬಂದರು. ತೂಕ-ಬೆಲೆ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದ ರೈತರ, ರೈತ ಮುಖಂಡರ ಕಬ್ಬನ್ನೇ ಖರೀದಿಸುವುದನ್ನು ಕಾರ್ಖಾನೆ ನಿಲ್ಲಿಸುತ್ತಿತ್ತು. ಈ ರೀತಿಯ ಅನ್ಯಾಯ, ಅಪಮಾನ ಮತ್ತು ಅನಾನುಕೂಲಕ್ಕೆ ಸಿಲುಕಿದ ಕಬ್ಬು ಬೆಳೆಗಾರರು ರೈತ ಸಂಘಟನೆಯನ್ನು ಬೆಳೆಸಲು, ಆ ಮೂಲಕ ಅನ್ಯಾಯದ ವಿರುದ್ಧ ಹೋರಾಟ ಮಾಡುವುದನ್ನು ಒಂದು ಪರಂಪರೆಯಂತೆ ಮುಂದುವರೆಸಿದರು.

ಕೈಗಾರಿಕೆ, ಗಣಿಗಾರಿಕೆ ಮತ್ತು ವ್ಯಾಪಾರ ತೀವ್ರವಾಗಿ ಬೆಳೆಯುತ್ತಿದ್ದರೂ ಹೊಸಪೇಟೆ ತಾಲೂಕಿನ ಜನರ ಮುಖ್ಯ ಕಸಬು ಕೃಷಿಯೇ ಆಗಿದೆ. ಕೃಷಿಯೇತರ ಕಸಬುಗಳು ಎಷ್ಟೇ ಬೆಳೆದರೂ ಕೃಷಿಯ ಪ್ರಾಮುಖ್ಯತೆಯನ್ನು ಕಡಿಮೆ ಮಾಡುವುದರಲ್ಲಿ ಯಶಸ್ವಿಯಾಗಿಲ್ಲ. ಕರ್ನಾಟಕ ರಾಜ್ಯ ಪುನರ್ ವಿಂಗಡಣೆಯಾದ ನಂತರ ಹೊಸಪೇಟೆ ಹಳೆ ಮದರಾಸು ಪ್ರಾಂತದಿಂದ ಮೈಸೂರು ರಾಜ್ಯ (ಹಳೆಯ) ಕ್ಕೆ ಸೇರ್ಪಡೆಯಾಗಿತ್ತು. ಇದೇ ಅವಧಿಯಲ್ಲಿ ನಿರ್ಮಾಣಗೊಂಡ ತುಂಗಾಭದ್ರಾ ಜಲಾಶಯ ಹೊಸಪೇಟೆ ತಾಲ್ಲೂಕಿನ ಆರ್ಥಿಕ ಪರಿಸ್ಥಿತಿಯನ್ನೇ ಬದಲಾಯಿಸಿತು. ಪ್ರಾರಂಭದಲ್ಲಿ ಕೇವಲ ೫೦೦೦ ಎಕರೆ ಪ್ರದೇಶದಲ್ಲಿ ಕಬ್ಬು ಬೆಳೆಯುತ್ತಿದ್ದ ರೈತರು ಕ್ರಮೇಣ ೧೩ ಸಾವಿರ ಎಕರೆವರೆಗೆ ಕಬ್ಬನ್ನು ಬೆಳೆಯಲು ಆರಂಭಿಸಿದರು. ನೀರಾವರಿ ಸೌಲಭ್ಯ ಪಡೆಯುತ್ತಿರುವ ಪ್ರದೇಶ ವಿಸ್ತಾರಗೊಂಡಿತು. ಕೃಷಿ ಆಧುನೀಕರಣಗೊಂಡಿತು. ವಾಣಿಜ್ಯ ಬೆಳೆಗಳನ್ನು ಬೆಳೆಯುವ ಪ್ರದೇಶವೂ ವಿಸ್ತಾರಗೊಂಡಿದ್ದು, ಈ ಪ್ರದೇಶದ ಕೃಷಿ ಬೆಳವಣಿಗೆಯೊಂದಿಗೆ ಕೈಗಾರಿಕೆಗಳೂ ಈ ನಗರದ ಸುತ್ತಾ ಬೆಳೆಯಲು ಪ್ರಾರಂಭಿಸಿದವು.

ಹೊಸಪೇಟೆ ತಾಲೂಕಿನ ರೈತರಿಗೆ ನೀರಾವರಿಯಾಗಲೀ ಅಥವಾ ಕಬ್ಬಿನ ಕೃಷಿ ಹೊಸತೇನೂ ಅಲ್ಲ. ವಿಜಯನಗರ ಕಾಲದಿಂದಲೂ ನೀರಾವರಿಗೆ ಮತ್ತು ಕಬ್ಬು, ಭತ್ತ ಮೊದಲಾದ ಕೃಷಿ ಬೆಳೆಗಳಿಗೆ ಈ ಪ್ರದೇಶ ಬಹುಪ್ರಸಿದ್ಧಿ ಪಡೆದಿತ್ತು. ಸಕ್ಕರೆ ಕಾರ್ಖಾನೆಯ ಮಾಲೀಕರ ರೈತರ ಶೋಷಣೆಯ ನೀತಿಯಿಂದಾಗಿ ೧೯೪೦ ರ ನಂತರ ಕಬ್ಬು ಬೆಳೆಗಾರರ ಸಂಘಟನೆ ಅನಿವಾರ್ಯವಾಯಿತು. ಅವತ್ತಿನ ಸರಕಾರವೂ ಕಾರ್ಖಾನೆಯ ಮಾಲೀಕರ ಪರವಾಗಿಯೇ ಇತ್ತು. ಕಾರ್ಖಾನೆಯ ಮಾಲೀಕರನ್ನು ಒಲೈಸುವ ಸರಕಾರದ ನೀತಿಗೆ ರೈತರು ಬಲಿಯಾಗುವಂತಹ ಪರಿಸ್ಥಿತಿ ನಿರ್ಮಾಣವಾಗಿತ್ತು. ೧೯೫೦ ರ ಹೊತ್ತಿಗೆ ರೈತ ಸಂಘಟನೆಗೆ ಒಂದು ನಿಶ್ಚಿತರೂಪ ಮೂಡತೊಡಗಿತು. ಕಾರ್ಖಾನೆಯವರು ರೈತರಿಗೆ ಮಾಡುವ ವಂಚನೆ, ಮೋಸ ಇವುಗಳಿಗೆ ಕೊನೆಯೇ ಇಲ್ಲ ಎಂಬಂತೆ ಪರಿಸ್ಥಿತಿ ಬಿಗಡಾಯಿಸಿತು. ರೈತ ಸಂಘಟನೆ ಮೂಲಕ ಅನ್ಯಾಯಗಳ ವಿರುದ್ಧ ಹೋರಾಡುವ ಸಾಮರ್ಥ್ಯವನ್ನು ಸಂಘಟನೆ ಪಡೆದುಕೊಂಡಿತು. ಹಲವಾರು ಆ ತಕ್ಷಣದ ಸಮಸ್ಯೆಗಳ ವಿರುದ್ಧದ ಹೋರಾಟದಲ್ಲಿ ರೈತ ಸಂಘ ಜಯವನ್ನೇ ಪಡೆಯಿತು. ಕಮಲಾಪುರ, ಚಿತ್ತವಾಡ್ಗಿ ಮತ್ತು ಹೊಸಪೇಟೆಗಳಲ್ಲಿ ನೋಂದಾಯಿಸಲ್ಪಟ್ಟ ರೈತ ಸಂಘಗಳು ಡಾ॥ ನಾಗನಗೌಡರ ಮಾರ್ಗದರ್ಶನದಲ್ಲಿ ಕೆಲಸ ನಿರ್ವಹಿಸುತ್ತಿದ್ದವು. ಮಾಲೀಕತ್ವದ ಬದಲಾವಣೆಯಿಂದಾಗಿ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯ ವರ್ಷದಿಂದ ವರ್ಷಕ್ಕೆ ಹೆಚ್ಚಾಗ ತೊಡಗಿತು. ಕಬ್ಬಿನ ಬೆಲೆ ನಿಗದಿ, ಅದರ ಹಣ ಪಾವತಿ, ಮತ್ತು ಸರಿಯಾದ ತೂಕ ಈ ವಿಷಯಗಳಿಗೆ ಸಂಬಂಧಿಸಿದಂತೆ ರೈತ ಸಂಘಗಳು ಕಾರ್ಖಾನೆಯವರ ಜೊತೆ ಸೌಹಾರ್ದಯುತವಾದ ಒಪ್ಪಂದಕ್ಕೆ ಬರುವಂತಹ ವಾತಾವರಣ ಸೃಷ್ಠಿಸುವುದರಲ್ಲಿ ಯಶಸ್ವಿಯಾಯಿತು. ಕಾರ್ಖಾನೆಯವರು ಹೆಚ್ಚು ಬೆಲೆ ಕೊಡದಿದ್ದಾಗೆಲ್ಲಾ ರೈತಸಂಘವು ಸರಕಾರಕ್ಕೆ ಮನವಿ ಸಲ್ಲಿಸಿ ಹೆಚ್ಚು, ಬೆಲೆ ಪಡೆಯುವಲ್ಲಿ ಕೂಡ ಯಶಸ್ವಿಯಾಗಿದೆ. ಇಂತಹ ಸಂದರ್ಭದಲ್ಲಿ ರೈತಸಂಘ, ಕಾರ್ಖಾನೆ ಮತ್ತು ಸರ್ಕಾರಗಳ ಪ್ರತಿನಿಧಿಗಳಿಂದ ಕೂಡಿದ ತ್ರಿಪಕ್ಷೀಯ ಸಭೆಯ ಮೂಲಕ ಸಮಸ್ಯೆಗಳು ಇತ್ಯರ್ಥವಾಗುವಂತಹ ವ್ಯವಸ್ಥೆಯೊಂದನ್ನು ರೂಪುಗೊಳಿಸುವುದರಲ್ಲಿ ರೈತ ಸಂಘ ಯಶಸ್ವಿಯಾಯಿತು.

ಕಬ್ಬಿನ ಬೆಲೆ ನಿಗಧಿ ಪಡಿಸುವಾಗ ರೈತರು ಹಮ್ಮಿಕೊಳ್ಳುವ ಸಂದರ್ಭದಲ್ಲಿ ಕಬ್ಬು ಬೆಳೆಯುವ ಪ್ರದೇಶದ ಎಲ್ಲಾ ರೈತರಲ್ಲಿ ಒಗ್ಗಟ್ಟಿರುವುದನ್ನು ಕಾಣಬಹುದು. ಪ್ರತಿವರ್ಷ ರೈತ ಸಂಘದಿಂದ ಕಾರ್ಖಾನೆ, ಸರಕಾರದೊಂದಿಗೆ ಚರ್ಚೆ ಮಾಡಿ ಕಬ್ಬು ಬೆಲೆ ನಿಗಧಿಮಾಡುವವರೆಗೂ ಯಾವುದೇ ರೈತ ಕಬ್ಬನ್ನು ಕಾರ್ಖಾನೆಗೆ ಒಂದು ಟನ್ ಕಬ್ಬನ್ನು ಮಾರಾಟ ಮಾಡುವುದಿಲ್ಲ. ಇದರಿಂದ ಈವರೆಗೂ ಕಬ್ಬು ಬೆಳೆಗಾರರ ಸಂಘದಲ್ಲಿ ಯಾವುದೇ ಒಡಕು ಮೂಡಲು ಸಾಧ್ಯವಾಗಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಧರ್ಮ, ಜಾತಿ, ರಾಜಕೀಯ, ಮುಂತಾದ ವಿಷಯಗಳಿಗೆ ಯಾವುದೇ ಪ್ರಾಮುಖ್ಯತೆ ನೀಡದೆ ರೈತರ ಹಿತಾಸಕ್ತಿಯನ್ನು ಕಾಪಾಡಿಕೊಂಡು ಬರಲು ಸಾಧ್ಯವಾಗಿದೆ. ರಾಜಕೀಯ ಭಿನ್ನಾಭಿಪ್ರಾಯಗಳು ರೈತ ಸಂಘದ ಕಾರ್ಯಕ್ಕೆ ಅಡ್ಡಿಯಾಗಿರುವುದಿಲ್ಲ. ಇದೊಂದು ರೈತ ಸಂಘದ ಸಾಧನೆಯಾಗಿದೆ. ಸಕ್ಕರೆ ಕಾರ್ಖಾನೆಯವರು ರೈತರಿಗೆ ತೊಂದರೆ ಕೊಟ್ಟಾಗಲೆಲ್ಲಾ ರೈತ ಸಂಘ ರೈತರ ಬೆಂಬಲದಿಂದ ಸತ್ಯಾಗ್ರಹ ಧರಣಿ, ಮುಷ್ಕರ, ಹೊಸಪೇಟೆ ಬಂದ್ ನಂತಹ ಕಾರ್ಯಕ್ರಮಗಳನ್ನು ನಡೆಸಿ ಆ ತೊಂದರೆಗಳನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿದೆ. ೧೯೮೦-೮೧ ರ ಸಂದರ್ಭದಲ್ಲಿ ರೈತರು ಬೆಲ್ಲದ ಗಾಣ ನಡೆಸಬಾರದು ಎಂದು ಸರಕಾರಿ ಅಧಿಕಾರಿಗಳ ನೆರವಿನಿಂದ ನಿರ್ಬಂಧ ಹೇರಲಾಗಿತ್ತು. ಆ ಸಮಯದಲ್ಲಿ ರೈತ ಸಂಘ ಬೆಲ್ಲದ ಗಾಣ ನಡೆಸುವ ರೈತರ ಹಕ್ಕಿಗಾಗಿ ಯಶಸ್ವಿ ಹೋರಾಟ ನಡೆಸಿತು. ಕಾರ್ಖಾನೆ ಕಬ್ಬನ್ನು ಅರೆಯದ ಕಾಲದಲ್ಲಿ ಪಕ್ವವಾದ ಕಬ್ಬನ್ನು ಬೆಲ್ಲಮಾಡಲು ಗಾಣಗಳಿಗೆ ಸರಬರಾಜು ಮಾಡುವ ಹಕ್ಕು ರೈತನಿಗಿರಬೇಕು ಎಂಬುದನ್ನು ಸರಕಾರಿ ಅಧಿಕಾರಿಗಳಿಗೆ ಮನದಟ್ಟು ಮಾಡಿಕೊಡಲಾಯಿತು. ರೈತ ಸಂಘದಲ್ಲಿರುವ ಶಕ್ತಿ ಮತ್ತು ಏಕತೆಯನ್ನು ಮನಗಂಡ ಸರ್ಕಾರಿ ಅಧಿಕಾರಿಗಳು ಕಾರ್ಖಾನೆ ಚಾಲೂ ಇಲ್ಲದ ಕಾಲದಲ್ಲಿ ಬೆಲ್ಲದ ಗಾಣ ನಡೆಸಬಹುದು. ಬೆಲ್ಲದ ಗಾಣಗಳಿಗೆ ಯಾವುದೇ ರೈತ ತನ್ನ ಪಕ್ವವಾದ ಕಬ್ಬನ್ನು ಸರಬರಾಜು ಮಾಡಲು ಹಕ್ಕುದಾರನೆಂದು ಬರಹದ ಮೂಲಕ ಅನುಮತಿ ನೀಡಿದರು.

ಹೊಸಪೇಟೆ ರೈತ ಸಂಘವು ಕಬ್ಬು ಬೆಳೆಗಾರರ ಈ ಕೆಳಗಿನ ಸಮಸ್ಯೆಗಳ ಈಡೇರಿಕೆಗಾಗಿ ಹಲವು ಬಾರಿ ಹೋರಾಟ ರೂಪಿಸಿದೆ.

೧. **ನೀರಾವರಿ ಸಮಸ್ಯೆ :** ಕಬ್ಬು ಬೆಳೆಯಲು ಅವಶ್ಯಕವಾಗಿ ನೀರಾವರಿ ಅನುಕೂಲ ಬೇಕಾಗುತ್ತದೆ. ತುಂಗಾಭದ್ರಾ ಜಲಾಶಯ ಆರಂಭದಿಂದಲೂ ಸ್ಥಳೀಯ ರೈತರು ನೀರಾವರಿ ಸಮಸ್ಯೆಗಳನ್ನು ಒಂದಿಲ್ಲೊಂದು ರೀತಿಯಲ್ಲಿ ಅನುಭವಿಸುತ್ತಿದ್ದಾರೆ. ಅಚ್ಚುಕಟ್ಟು ಪ್ರದೇಶಕ್ಕೆ ನೀರಿನ ಸಮರ್ಪಕ ವಿತರಣೆ ಆಗುತ್ತಿಲ್ಲ. ನೀರಾವರಿ ಅಧಿಕಾರಿಗಳಲ್ಲಿ ಅಧಕ್ಷತೆ ಮತ್ತು ಲಂಚಗುಳಿತನ ತುಂಬಿದೆ. ತುಂಗಾಭದ್ರಾ ಅಚ್ಚುಕಟ್ಟು ಪ್ರದೇಶಗಳಲ್ಲಿರುವ ಕಾಲುವೆಗಳ ಅಕ್ಕಪಕ್ಕದಲ್ಲಿರುವ ಕೆಲವು ರೈತರ ಜಮೀನುಗಳು ಇವತ್ತಿಗೂ ಖುಷ್ಕಿ ಜಮೀನುಗಳಾಗಿವೆ. ಈ ಜಮೀನುಗಳಿಗೆ ನೀರಿನ ಅನುಕೂಲಬೇಕೆಂದರೆ ಪ್ರತಿ ವರ್ಷವು ನೀರಾವರಿ ಇಲಾಖೆಯ ಅನುಮತಿಯನ್ನು ಪಡೆಯಬೇಕಾಗಿದೆ. ಈ ವ್ಯವಸ್ಥೆ ಅಧಿಕಾರಿಗಳ ಹಲವಾರು ಅವ್ಯವಹಾರಗಳಿಗೆ ಕಾರಣವಾಗಿರುತ್ತದೆ. ಈ ಪದ್ಧತಿಯನ್ನು ರದ್ದುಗೊಳಿಸುವುದು ರೈತರ ಬೇಡಿಕೆಯಾಗಿದೆ.

೧೯೬೫ರ ಮೈಸೂರು ಇಂಗೇಷನ್ ಆ್ಯಕ್ಟ್ - ೨೮ (೨) ರ ಪ್ರಕಾರ ಖುಷ್ಕಿ ಜಮೀನುಗಳು ಸರ್ಕಾರದ ಅನುಮತಿ ಪಡೆದು ಸತತ ೬ ವರ್ಷ ನೀರಾವರಿ ಸೌಲಭ್ಯ ಪಡೆದ ಪಕ್ಷದಲ್ಲಿ ಆ ಜಮೀನುಗಳನ್ನು ಖಾಯಂ ತರಿ ಎಂದು ಘೋಷಿಸಬೇಕು. ಆದರೆ ಇದು ಜಾರಿಗೆ ಬಂದಿಲ್ಲ. ತುಂಗಾಭದ್ರಾ ಜಲಾಶಯದ ನೀರಿನ ಪ್ರಮಾಣದಲ್ಲಿ ಕೋಟಾ ಪದ್ಧತಿ ಇದ್ದು, ಇದನ್ನು ಸ್ಥಳೀಯ ರೈತರಿಗೆ ಅನ್ವಯಿಸದೇ, ವರ್ಷಪೂರ್ತಿ ನಿರಂತರ ನೀರೊದಗಿಸುವ ರೈತರ ಬೇಡಿಕೆ ಇದ್ದು, ಇದಕ್ಕಾಗಿ ಈಗಲೂ ನೀರಾವರಿ ಇಲಾಖೆಯೊಂದಿಗೆ ಸ್ಥಳೀಯ ರೈತ ಸಂಘ ಹೋರಾಟ ನಡೆಸುತ್ತಲೇ ಇದೆ.

**೨. ಕಬ್ಬಿನ ಸರಬರಾಜು :** ಸಕ್ಕರೆ ಕಾರ್ಖಾನೆಗೆ ಅವಶ್ಯವಿರುವಷ್ಟು ಕಬ್ಬು ಬೆಳೆಯುವ ನಿರ್ದಿಷ್ಠ ಪ್ರದೇಶವನ್ನು ''ಮೀಸಲು ಪ್ರದೇಶ'' ವೆಂದು ನಿಗಧಿ ಮಾಡುತ್ತಾರೆ. ಈ ಪ್ರದೇಶದ ರೈತರು ಕಬ್ಬನ್ನು ಕಡ್ಡಾಯವಾಗಿ ಕಾರ್ಖಾನೆಗೆ ಕೊಡಲೇಬೇಕು ಕಬ್ಬನ್ನು ಕಾರ್ಖಾನೆಗೆ ಕೊಡದೇ ಇದ್ದರೇ ಅಂಥಹ ರೈತರಿಗೆ ದಂಡ ವಿಧಿಸುವ ಪದ್ದತಿ ಇದೆ. ಆದರೆ ಅದೇ ಕಾರ್ಖಾನೆಯವರು ಮೀಸಲು ಪ್ರದೇಶದ ರೈತರ ಕಬ್ಬನ್ನು ಕಡ್ಡಾಯವಾಗಿ ಖರೀದಿಸಬೇಕೆಂದೇನೂ ಇಲ್ಲ. ಈ ತಾರತಮ್ಯತೆಯ ಬಗ್ಗೆ ಇಲ್ಲಿಯ ರೈತ ಸಂಘ ಸಾಕಷ್ಟು ಪ್ರತಿಭಟನೆ ಮಾಡಿದರೂ ಈ ಸಮಸ್ಯೆ ಶಾಶ್ವತವಾಗಿ ಪರಿಹಾರವಾಗಿಲ್ಲ. ಕಾರ್ಖಾನೆ ಕಬ್ಬು ಅರೆಯುವ ಕಾಲ ಮುಗಿದ ಮೇಲೆ ರೈತರು ಬೆಲ್ಲದ ಗಾಣಕ್ಕೆ ಕಬ್ಬನ್ನು ಸರಬರಾಜು ಮಾಡಬಹುದು. ಆದರೆ ಪಕ್ವವಾಗಿಲ್ಲದ ಸಂದರ್ಭದಲ್ಲಿ ಗಾಣಕ್ಕೆ ಕಬ್ಬು, ಪೂರೈಸಿದರೂ ನಿರೀಕ್ಷಿತ ಪ್ರಮಾಣದ ಬೆಲ್ಲದ ಇಳುವರಿ ಬಾರದೇ ಹಲವಾರು ರೈತರು ನಷ್ಟ ಅನುಭವಿಸಿದ್ದಾರೆ. ಆದ್ದರಿಂದ ರೈತರ ಕಬ್ಬನ್ನು ಕಡ್ಡಾಯವಾಗಿ ಕಾರ್ಖಾನೆಯವರು ಖರೀದಿಸುವಂತೆ ಕಾನೂನು ರೂಪಿಸುವಂತೆ ಇಲ್ಲಿಯ ರೈತ ಸಂಘದ ಪ್ರಮುಖ ಬೇಡಿಕೆಯಾಗಿದೆ.

**೩. ಕಬ್ಬಿನ ಬೆಲೆ ನಿಗಧಿ ಮತ್ತು ಹಣಸಂದಾಯ :** ಆಯಾ ಸಂದರ್ಭದಲ್ಲಿ ಕಬ್ಬಿನ ಬೆಲೆಯಲ್ಲಿ ಏರಿಳಿತಗಳಾಗಿರುವುದು ಸಹಜವಾಗಿ ಕಂಡು ಬಂದಿದೆ. ಪ್ರತಿ ಬಾರಿಯೂ ರೈತ ಸಂಘ ಕಬ್ಬಿನ ಬೆಲೆ ನಿಗಧಿಗಾಗಿ ಹೋರಾಟ ಮಾಡುತ್ತಲೇ ಬಂದಿದೆ. ಕೆಲವು ಬಾರಿ ಅನಿರ್ಧಿಷ್ಟ ಮುಷ್ಕರ ಹೊಸಪೇಟೆ ಬಂದಿನಂತಹ ಉಗ್ರರೂಪದ ಚಳುವಳಿಗಳನ್ನು ಮಾಡಿಕೊಂಡು ಬಂದಿದೆ. ಕಾರ್ಖಾನೆಗೆ ಬೀಗ ಜಡಿದು ಪ್ರತಿಭಟನೆ ಮಾಡಿರುವ ಸಂದರ್ಭಗಳೂ ಇಲ್ಲದಿಲ್ಲ, ಸರಕಾರದ ಪ್ರತಿನಿಧಿ, ಕಾರ್ಖಾನೆ ಆಡಳಿತ ವರ್ಗ ಮತ್ತು ರೈತ ಸಂಘದ ಪದಾಧಿಕಾರಿಗಳು ಸೇರಿ ತ್ರಿಪಕ್ಷೀಯ ಸಭೆಗಳನ್ನು ಮಾಡಿ ಎಲ್ಲರಿಗೂ ಒಪ್ಪಿಗೆಯಾಗುವಂತಹ ಬೆಲೆ ನಿಗದಿ ಪಡಿಸಿರುವ ನಿದರ್ಶನಗಳು ಇವೆ. ಆದರೆ ಈ ರೀತಿ ನಿಗದಿಯಾದ ಬೆಲೆಗೆ ಹಲವು ಬಾರಿ ಕಾರ್ಖಾನೆಯ ಆಡಳಿತ ಮಂಡಳಿ ಬದ್ಧವಾಗಿರದೇ ಕಡಿಮೆ ಮಾಡಿರುವ ಉದಾಹರಣೆಗಳನ್ನು ನೋಡಬಹುದು. ಜಿಲ್ಲೆಯ ಉಸ್ತುವಾರಿ ಮಂತ್ರಿಗಳ ಸಮಕ್ಷಮ, ಸ್ಥಳೀಯ ಶಾಸಕರ ಸಮಕ್ಷಮದಲ್ಲಿ ನಿಗಧಿಪಡಿಸಿದ ಬೆಲೆಯನ್ನೇ ಧಿಕ್ಕರಿಸಿರುವ ಉದಾಹರಣೆಗಳಿವೆ ಎಂಬುದು ಸ್ಥಳೀಯರ ಅನುಭವವಾಗಿದೆ. ಬೆಲೆಯ ನೀತಿ ಈ ರೀತಿಯಾದರೆ ಕಬ್ಬು ಮಾರಾಟವಾದರೂ ಸರಿಯಾದ ಸಮಯದಲ್ಲಿ ಹಣ ಸಂದಾಯ

ಮಾಡುವುದರಲ್ಲೂ ಕಾರ್ಖಾನೆ ವಿಫಲವಾಗಿದೆ ಎಂದು ರೈತರು ಹೇಳುತ್ತಾರೆ. ಕಾನೂನಿನ ಪ್ರಕಾರ ಕಬ್ಬು ಮಾರಾಟವಾದ ೧೪ ದಿನಗಳ ಒಳಗೆ ಹಣ ಸಂದಾಯ ಮಾಡಬೇಕೆಂದಿದೆ. ಆದರೆ ಈ ಕಾನೂನು ಕೇವಲ ಕಾಗದದ ಮೇಲೆ ಮಾತ್ರ ಇದ್ದು, ಈವರೆಗೂ ಜಾರಿಯಾಗಿಲ್ಲ. ಹಣ ಸಂದಾಯಕ್ಕಾಗಿಯೂ ರೈತ ಸಂಘ ಹಲವು ಬಾರಿ ಚಳುವಳಿಯ ಮಾರ್ಗ ಹಿಡಿದು ಹಣ ವಸೂಲಿ ಮಾಡಿರುವುದು ಕಂಡು ಬರುತ್ತದೆ.

**೪. ಕಬ್ಬಿನ ಕಟಾವು ಮತ್ತು ಸಾಗಾಣಿಕೆ :** ಪಕ್ವವಾದ ಕಬ್ಬನ್ನು ಕಡಿದು ವಿಳಂಬ ಮಾಡದೆ ಕಾರ್ಖಾನೆಗೆ ಸರಬರಾಜು ಮಾಡುವುದರಿಂದ ಸಕ್ಕರೆ ಇಳುವರಿಗೆ ಅಗತ್ಯ 'ರಿಕವರಿ' ಮಟ್ಟವನ್ನು ಉತ್ತಮ ಪಡಿಸುವುದು ಸಾಧ್ಯ. ಆದರೆ ರೈತರಿಂದ ಈ ಕೆಲಸ ಸಮರ್ಪಕ ರೀತಿಯಲ್ಲಿ ಆಗಬೇಕಾದರೆ ಕಟಾವಿಗೆ ಅನುಮತಿ ಬೇಡಿ ಪಡೆಯುವಲ್ಲಿ ಆಗುವ ತೊಂದರೆ ಅಡ್ಡಿಯಾಗಿರುತ್ತದೆ. ಈ ಅನುಮತಿ ಪತ್ರ ವಿತರಣೆಯ ದೋಷವನ್ನು ನಿವಾರಿಸಿದರೆ ಸಕಾಲದಲ್ಲಿ ಕಬ್ಬನ್ನು ಪೂರೈಸಿ 'ರಿಕವರಿ' ಮಟ್ಟ ಸುಧಾರಣೆಗೆ ಸಾಧ್ಯವೆಂದು ರೈತರು ಹೇಳುತ್ತಾರೆ. ಆದ್ದರಿಂದ ಈ ಕಾರ್ಖಾನೆ, ಸರಕಾರ ಇತ್ತ ಕಡೆ ಗಮನ ಹರಿಸಿ ಸಕಾಲಿಕ ಸರಬರಾಜಿನ ಸಮಸ್ಯೆ ಬಗೆ ಹರಿಸಬೇಕೆಂದು ರೈತ ಸಂಘ ಹಲವು ಬಾರಿ ಒತ್ತಡ ಹೇರಿದರೂ ಈ ಸಮಸ್ಯೆ ಪರಿಣಾಮಕಾರಿಯಾಗಿ ಬಗೆಹರಿದಿಲ್ಲವೆಂದು ಹೇಳಬಹುದು.

**೫. ಕಬ್ಬಿನ ಸಾಗಾಣಿಕೆಗೆ ರಸ್ತೆಗಳ ಅಭಿವೃದ್ಧಿ :** ಕಬ್ಬು ಸರಬರಾಜು ಮಾಡುವ ರೈತರಿಗೆ ಸೂಕ್ತ ರಸ್ತೆಗಳಿಲ್ಲ. ಕಬ್ಬು ಬೆಳೆಯುವ ಗದ್ದೆಗಳಿಗೆ ವಾಹನಗಳು ಹೋಗಲು ಸಾಧ್ಯವಾಗುತ್ತಿಲ್ಲ. ಕಬ್ಬು ಕಟಾವು ಮಾಡಿ ಎರಡು, ಮೂರು ಕಡೆ ಸಂಗ್ರಹಿಸಿ ಆ ನಂತರ ಕಾರ್ಖಾನೆಗೆ ಸಾಗಾಣಿಕೆ ಮಾಡುವುದರಿಂದ ಕಬ್ಬಿನ ನೀರಿನಾಂಶ ಆವಿಯಾಗಿ ಹೋಗಿ ಇಳುವರಿಯ ಹಿನ್ನಡೆಗೆ ಕಾರಣವಾಗಿದ್ದು, ಮಾಗಾಣಿ ರಸ್ತೆಗಳನ್ನು ಉತ್ತಮ ಪಡಿಸಿದರೆ ಸಕಾಲದಲ್ಲಿ ಪಕ್ವವಾದ ಕಬ್ಬನ್ನು ಕಾರ್ಖಾನೆಗೆ ಸರಬರಾಜು ಮಾಡಲು ಸಾಧ್ಯವಾಗುತ್ತದೆ ಎಂಬುದು ರೈತರ ಬೇಡಿಕೆಯಾಗಿದೆ. ಈ ಸಮಸ್ಯೆಯ ಬಗ್ಗೆಯೂ ರೈತ ಸಂಘ ಹಲವು ಬಾರಿ ಮನವಿ ಪತ್ರ ಸಲ್ಲಿಸಿ ಹೋರಾಟಗಳನ್ನು ಮಾಡಿದೆ.

ಕರ್ನಾಟಕ ರಾಜ್ಯ ಸರಕಾರ, ಕೇಂದ್ರ ಸರಕಾರದ ಸಕ್ಕರೆ ನೀತಿಯ ವಿರುದ್ಧವೂ ಸ್ಥಳೀಯ ರೈತ ಸಂಘ ಹಲವು ಬಾರಿ ಪ್ರತ್ಯೇಕವಾಗಿಯೂ, ಇನ್ನಿತರ ರಾಜ್ಯಮಟ್ಟದ ರೈತ ಸಂಘಟನೆಗಳಾದ ಕರ್ನಾಟಕ ಪ್ರಾಂತ ರೈತ ಸಂಘ, ಕರ್ನಾಟಕ ರಾಜ್ಯ ರೈತ ಸಂಘದ ಸಹ ಭಾಗಿತ್ವದಲ್ಲಿ ಅನೇಕ ಹೋರಾಟಗಳನ್ನು ನಡೆಸಿದೆ. ಸಕ್ಕರೆ ಉತ್ಪಾದನೆ ಬೆಲೆ ನಿಗಧಿ, ವಿತರಣೆ ನಿಯಂತ್ರಣಕ್ಕಾಗಿ ಕೇಂದ್ರ ಸರಕಾರ, ರಾಜ್ಯ ಸರಕಾರಗಳು ೧೯೪೭ ರಿಂದ ಇಲ್ಲಿಯವರೆಗೂ ಹಲವಾರು ಶಾಸನಗಳನ್ನು ಜಾರಿಗೊಳಿಸಿದರೂ ಸರಕಾರದ ನೀತಿಯಿಂದ ಕಬ್ಬು ಬೆಳೆಗಾರ ರೈತರಿಗೆ ಸಂಪೂರ್ಣವಾದ ನ್ಯಾಯ ಸಿಕ್ಕಿಲ್ಲವೆಂದೇ ಹೇಳಬೇಕು. ಸರಕಾರದ, ಕಾರ್ಖಾನೆಯ ನೀತಿಯ ವಿರುದ್ದ ರೈತ ಸಂಘ ಹಲವು ಬಾರಿ ನ್ಯಾಯಾಲಯಗಳಲ್ಲಿ ನ್ಯಾಯಕ್ಕಾಗಿ ಮೊಕದ್ದಮೆಗಳನ್ನು ಹೂಡಿರುವುದನ್ನು ನಾವು ಕಾಣಬಹುದು.

## ೪.೨ : ಭಾಷಾ ಸಾಂಘಿಕ ನೆಲೆ

ಉದಯವಾಗಲಿ ನಮ್ಮ ಚಲುವ ಕನ್ನಡನಾಡು ಎಂದು ಹಾಡಿ - ಕಾದಾಡಿದ್ದು ನಮ್ಮ ಇತಿಹಾಸದ ಭಾಗ ಈ ಚಳುವಳಿ ಸ್ವಾತಂತ್ರ ಹೋರಾಟದ ಜೊತೆ ಜೊತೆಯಾಗಿಯೇ ನಡಿದಿರುವುದು ಸ್ವಾತಂತ್ರ್ಯ ಹೋರಾಟದ ಭಾಗವಾಗಿ ನಡೆದಿರುವುದು ಹಲವಾರು ಘಟನೆಗಳಿಂದ ತಿಳಿದು ಬರುತ್ತದೆ. ೧೯೪೬ರ ಅಕ್ಟೋಬರ್ ೧೩, ೧೪ ಮತ್ತು ೧೫ ರಂದು ಮೂರು ದಿನಗಳ ಕಾಲ ಆಂದ್ರ ಪ್ರದೇಶದ ರಾಜ ಮಂತ್ರಿಯ 'ಆಂದ್ರ ಇತಿಹಾಸ ಸಂಶೋಧನಾ ಸಂಸ್ಥೆಯು ಹಂಪಿಯಲ್ಲಿ ''ವಿಜಯನಗರ ಸಾಮ್ರಾಜ್ಯ ದಿನಾಚರಣೆ'' ಸಮಾವೇಶವನ್ನು ಸಂಘಟಿಸುತ್ತಾ ಕರ್ನಾಟಕದ ಭೂಮಿಯ ಮೇಲೆ ಆಂದ್ರದವರ ಆಕ್ರಮಣವನ್ನು ಪ್ರತಿಭಟಿಸಿ ಬಳ್ಳಾರಿಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಬಿ. ಎಂ. ಮರುಳ ಸಿದ್ದಯ್ಯನವರು ಕಪ್ಪು ಬಾವುಟ ಪ್ರದರ್ಶನ ನಡೆಸಿದ್ದರು. ಸಮ್ಮೇಳನದ ಕಾರ್ಯದರ್ಶಿಗಳು ಈ ಬಗ್ಗೆ ಸಮಜಾಯಿಸಿ ನೀಡಿದ ಮೇಲೆ ಮರುಳಸಿದ್ದಯ್ಯನವರು ತಮ್ಮ ಪ್ರತಿಭಟನೆ ನಿಲ್ಲಿಸಿದರು.

ಚಲೇಜಾವ್ ಚಳುವಳಿ ಬಳ್ಳಾರಿ ಜಿಲ್ಲೆ ಗ್ರಾಮಾಂತರ ಪ್ರದೇಶವನ್ನು ವ್ಯಾಪಿಸಿತ್ತು. ಈ ಚಳುವಳಿಯಲ್ಲಿ ಶಾಲಾ ವಿದ್ಯಾರ್ಥಿಗಳು ಅತ್ಯಂತ ಸಾಹಸದಿಂದ ಪಾಲ್ಗೊಂಡರು ಬಳ್ಳಾರಿಯ ವಿದ್ಯಾರ್ಥಿಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಅತ್ಯಂತ ಧೈರ್ಯದಿಂದ ಭಾಗವಹಿಸಿ ತಮ್ಮದೇ ಆದಕಾಣಿಕೆ ಸಲ್ಲಿಸಿದ್ದಾರೆ. ಇವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಸುಮಾರು ಮೂರು ತಿಂಗಳ ಜೈಲುವಾಸ ಅನುಭವಿಸಿದರು. ಸ್ವಾತಂತ್ರ್ಯ ಚಳುವಳಿಯ ಜೊತೆಗೆ ಕನ್ನಡದ ಭಾಷೆ ಮತ್ತು ಏಕೀಕರಣದ ಚಳುಚಳಿಯ ಬಗ್ಗೆಯೂ ಹೆಚ್ಚು ಆಸಕ್ತರಾಗಿದ್ದು ಇವರು ಅಲ್ಲೀಪುರದ ಜೈಲಿನಲ್ಲಿದ್ದಾಗ ಅನೇಕ ಕನ್ನಡ ಪರವಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಇವರೆಲ್ಲರ ಪರಿಶ್ರಮದಿಂದಾಗಿ ಅಲ್ಲೀಪುರದ ಜೈಲಿನ ಗ್ರಂಥಾಲಯಕ್ಕೆ ಅನೇಕ ಕನ್ನಡ ಜಾಗೃತಿ ಪರವಾದ ಪುಸ್ತಕಗಳು ಹರಿದು ಬರುತ್ತಿದ್ದವು. ಇದೇ ಸಂದರ್ಭದಲ್ಲಿ ಜೈಲಿನಲ್ಲಿ 'ಗೆಳೆಯರ ಗುಂಪು' ಎಂಬ ಕನ್ನಡ ಪರವಾದ ಸಂಘವನ್ನು ಕಟ್ಟಿದ್ದರು. ನಾಡ ಹಬ್ಬದಲ್ಲಿ ಕನ್ನಡದ ಹಾಡುಗಳನ್ನು ತಾವೇ ರಚಿಸಿ ಹಾಡುತ್ತಿದ್ದರು ೧೯೨೬ರಲ್ಲಿ 'ಗೆಳೆಯರ ಗುಂಪು' ಸಂಘದ ನೈತೃತ್ವದಲ್ಲಿ ಆಲ್ ಇಂಡಿಯಾ ರೇಡಿಯೋ ಕೇಂದ್ರದಿಂದ ಕನ್ನಡ ವಾರ್ತೆಗಳು ಬಿತ್ತರಿಸುವದಕ್ಕಾಗಿ ಜೈಲಿನಲ್ಲಿಯೇ ಚಳುವಳಿ ನಡೆಸಲಾಯಿತು. ಪ್ರಮುಖ ರಸ್ತೆಗಳಿಗೆ ಕನ್ನಡದ ನಾಮ ಫಲಕಗಳನ್ನು ಹಾಕುವುದಕ್ಕಾಗಿಯೂ ಹೋರಾಟ ಮಾಡಲಾಗಿತ್ತು. ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿಯೇ ಬಳ್ಳಾರಿ ಜಿಲ್ಲೆಯಾದ್ಯಂತ ಕನ್ನಡದ ಏಕೀಕರಣಕ್ಕಾಗಿ ನಡೆದ ಸಾಂಘಿಕ ಪ್ರಯತ್ನಗಳನ್ನು ನೋಡಬಹುದಾಗಿದೆ.

ಹರಿದು ಹಂಚಿ ಹೋಗಿದ್ದ ಕನ್ನಡ ನಾಡನ್ನು ಅಪಾರ ತ್ಯಾಗ ಬಲಿದಾನಗಳ ಮೂಲಕ ಒಂದು ಗೂಡಿಸಲಾಗಿತ್ತು. ಒಂದೇ ದೇಶೀಯತೆಯನ್ನು ಹೊಂದಿರುವ ಕನ್ನಡಗರೆಲ್ಲರೂ ಒಂದಾಗಿ ಸಮಸ್ತ ಕನ್ನಡಿಗರ ಅಭಿವೃದ್ಧಿಗೆ ಶ್ರಮಿಸುವಂತಾಗಲಿ ಎಂಬುದು ಏಕೀಕರಣದ ಚಳುವಳಿಯಾಗಿತ್ತು. ಒಂದೆಡೆ

ನವಾಬರು, ಇನ್ನೊಂದೆಡೆ ಸಂಸ್ಥಾನಿಕರು, ಮತ್ತೊಂದೆಡೆ ಬ್ರಿಟೀಷರು ಕನ್ನಡದ ನೆಲವನ್ನು ಹಂಚಿಕೊಂಡಿದ್ದಾಗ ಕನ್ನಡಿಗರ ದೇಶೀಯತೆ ಛಿದ್ರವಾಗಿತ್ತು. ಆಳರಸರ ನಿರ್ಲಕ್ಷ್ಯಕ್ಕೆ ಒಳಗಾಗಿತ್ತು. ವೈವಿಧ್ಯಮಯವಾದ ಕನ್ನಡಿಗರ ಸಂಸ್ಕೃತಿಯನ್ನು ಬೆಳೆಸಿ ಪೋಷಿಸುವುದು ಅವರಿಗೆ ಬೇಕಾಗಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕನ್ನಡಿಗರು ತಾವೆಲ್ಲಾ ಒಂದಾಗಬೇಕೆಂಬ ಕನಸು ಕಂಡಿದ್ದರು.

ಆಂಗ್ಲರ ವಸಾಹತು ಧೋರಣೆಗಳು ಕನ್ನಡ ಮಾತನಾಡುವ ಭೂ ಪ್ರದೇಶಗಳನ್ನು ಇಪ್ಪತ್ತೆರಡು ವಿಭಾಗಗಳಲ್ಲಿ ವಿಭಜಿಸಿದ್ದವು. ಹೀಗೆ ವಿಭಜಿತವಾಗಿದ್ದ ಕನ್ನಡ ಭೂ ನೆಲೆಗಳಲ್ಲಿನ ಕನ್ನಡಿಗರು ವಿಭಿನ್ನ ಭಾಷಿಕ ಸಮುದಾಯಗಳ ಒತ್ತಡ, ಪ್ರಭಾವಗಳಿಂದ ಬಾಳ್ವೆ ನಡೆಸುವಂತೆ ಆಗಿತ್ತು. ಈ ನಿಟ್ಟಿನಲ್ಲಿ ಕನ್ನಡಿಗರು ಒಂದೇ ಪರಿಧಿಯಲ್ಲಿ ಬರಲು ಹಾತೊರೆದಿದ್ದು ಸಹಜವಾದುದು. ಸ್ಥಳೀಯ ಅವಮಾನ, ಆತಂಕಗಳನ್ನು ತಮ್ಮದೇ ಆದ ರೀತಿಯಲ್ಲಿ ಪ್ರತಿ ರೋಧಗಳಿಗೆ ಒಳಪಡಿಸಿದ ಕನ್ನಡಿಗರು ಆ ಮೂಲಕ ಕನ್ನಡದ ಅನನ್ಯತೆಯನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಿದರು. 'ಏಕತ್ರ' ಗೊಳ್ಳುವುದರೊಂದಿಗೆ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ನೆಲೆಗಳಲ್ಲಿ ಹಲವು ಸಾಧನೆಗಳನ್ನು ಕಂಡುಕೊಳ್ಳಲು ಹಾತೊರೆದಿದ್ದರು. ಹೀಗಾಗಿ ಭಾಷಿಕವಾಗಿ ಒಂದು ಗೂಡುವುದು ಮುಖ್ಯ ಆಗಿತ್ತು. ಏಕೆಂದರೆ ಮುಂಬಯಿ, ಮದರಾಸು, ಮೈಸೂರು, ಹೈದ್ರಾಬಾದ್ ಮತ್ತು ಕೊಡಗು ಆಡಳಿತ ಘಟಕಗಳಲ್ಲಿ ಹರಿದು ಹಂಚಿ ಹೋಗಿದ್ದ ಕನ್ನಡಿಗರು ಭಾಷಿಕವಾಗಿ ಅಷ್ಟೇ ಅಲ್ಲದೆ ಸಾಂಸ್ಕೃತಿಕವಾಗಿಯೂ ಆಘಾತಕ್ಕೆ ಒಳಗಾಗಿದ್ದರು. ಮರಾಠಿ, ತಮಿಳು, ತೆಲುಗು, ಉರ್ದು, ಮಲೆಯಾಳಂ, ಗುಜರಾತಿ, ಬಂಗಾಳಿ, ಹಿಂದಿ, ಇಂಗ್ಲೀಷ್ ಮೊದಲಾದ ಭಾಷೆ - ಭಾಷಿಕರ ನಡುವೆ ಕನ್ನಡದ ಪ್ರಜ್ಞೆ ಒಡ ಮೂಡುವುದು ಸುಲಭದ ಮಾತಾಗಿರಲಿಲ್ಲ. ಕನ್ನಡ ನಾಡು, ನುಡಿ, ಸಾಹಿತ್ಯ, ಚರಿತ್ರೆ, ಸಂಸ್ಕೃತಿಗಳು ಭಿನ್ನ ಭಾಷಿಕರ ಒತ್ತಡಗಳಿಂದಾಗಿ ವಿಭಿನ್ನ ಅವಸ್ಥಾಂತರಗಳಿಗೆ ಗುರಿಯಾಗಿದ್ದವು.

ಒಂದು ಭಾಷೆಯನ್ನು ಆಡುವ ಜನರು ನಿಗದಿತ ಭೂ ಪ್ರದೇಶದಲ್ಲಿ ಒಂದು ಗೂಡುವುದರೊಂದಿಗೆ ಕನ್ನಡ ಭಾಷೆ, ಕನ್ನಡ ಜನ, ಕರ್ನಾಟಕ ಪ್ರದೇಶಗಳ ಸಾಕ್ಷರತೆ ಏಕೀಕರಣ ಚಳುವಳಿಯೊಂದಿಗೆ ರೂಪುಗೊಂಡಿತು. ಕರ್ನಾಟಕ ಏಕೀಕರಣಗೊಂಡ ಸಂದರ್ಭ ಹಾಗೂ ಆನಂತರದ ಸ್ಥಿತಿಗತಿಗಳು ಕನ್ನಡ ಚಳುವಳಿಯ ಚರಿತ್ರೆಯಲ್ಲಿ ತುಂಬಾ ಮಹತ್ವದ ಘಟ್ಟಗಳು.

ವಿಭಜಿತ ಕನ್ನಡ ಪ್ರದೇಶಗಳಲ್ಲಿನ ಕನ್ನಡದ ಹಿತ ಚಿಂತಕರು ತಮ್ಮ ತಮ್ಮ ಪರಿಧಿಗಳಲ್ಲಿಯೇ ಕನ್ನಡ ಕಳಕಳಿಯನ್ನು ಅಭಿವ್ಯಕ್ತಿಸಿದ್ದರು. ಈ ಕಳಕಳಿ ಕನ್ನಡ ಪ್ರದೇಶಗಳನ್ನು ಕನ್ನಡಿಗರನ್ನು ರಾಜಕೀಯವಾಗಿ ಒಂದು ಗೂಡಿಸುವುದೇ ಆಗಿತ್ತು. ಸ್ಥಳೀಯವಾಗಿ ಪರಕೀಯರೆನ್ನಿಸಿಕೊಂಡಿದ್ದ ಕನ್ನಡಿಗರ ಅಂದಿನ ಸನ್ನಿವೇಶ ಅನೇಕ ಸವಾಲುಗಳನ್ನು ಎದುರಿಸಿದ್ದು ಗಮನಾರ್ಹ. ಕನ್ನಡೇತರ ಭಾಷಿಕ ಒತ್ತಡಗಳನ್ನು ಹತ್ತಿಕ್ಕಲು 'ಕನ್ನಡ ಕರ್ನಾಟಕತ್ವ'ವನ್ನು ಮೂಡಿಸುವುದು ಅನಿವಾರ್ಯವಾಯಿತು. ಈ

ದಿಕ್ಕಿನಲ್ಲಿ ಹಲವು ಕನ್ನಡ ಸಾಹಿತ್ಯಕ ಸಂಘ ಸಂಸ್ಥೆಗಳ ಚಾಲ್ತಿಗೆ ಬಂದಿದ್ದವು. ಅವುಗಳಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘ ಹಾಗೂ ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತು ಪ್ರಧಾನವಾದಂತಹವು. ಇವುಗಳಿಗೆ ಪೂರಕವಾಗಿ ಅನೇಕ ಸಂಘ ಸಂಸ್ಥೆಗಳು ಏಕೀಕರಣದ ಆಶಯಕ್ಕೆ ಹಾಗೂ ಆನಂತರದ ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸಿದ್ದು ಉಲ್ಲೇಖಾರ್ಹ. ಇವುಗಳು ನಾಡು ನುಡಿ ಅರಿವು ಮೂಡಿಸುವ ಚಟುವಟಿಕೆಗಳು ಮುಂದಿನ ಕನ್ನಡ ಚಳುವಳಿಗಳಿಗೆ ತಾತ್ವಿಕ ಭೂಮಿಕೆಯನ್ನು ನಿರ್ಮಾಣ ಮಾಡಿದವು. ಈ ನಿಟ್ಟಿನಲ್ಲಿ ಶಾಂತಕವಿ, ಹುಯಿಲಗೋಳ ನಾರಾಯಣ ರಾಯರು, ಶಂ.ಭಾ.ಜೋಶಿ, ಆಲೂರು ವೆಂಕಟರಾಯರು, ಬಿ. ಎಂ.ಶ್ರೀಕಂಠಯ್ಯ, ಬೇಂದ್ರೆ, ಕುವೆಂಪು ಮೊದಲಾದವರು ಪ್ರಮುಖರು. ಇವರ ಸಾಹಿತ್ಯ ಸೃಷ್ಠಿ, ಚಟುವಟಿಕೆಗಳ ಜೊತೆಗೆ ಅಂದಿನ ಕಲಾವಿದರು, ಗಮಕಿಗಳು, ಸಂಗೀತಕಾರರು ಪಿ.ಕಾಳಿಂಗರಾಯರಂಥಹ ಗಾಯಕರು ಹೀಗೆ ಮೊದಲಾದವರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಶ್ರಮಿಸಿದ್ದಾರೆ.

೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಹರಿದು ಹಂಚಿ ಹೋಗಿದ್ದ ಕನ್ನಡಿಗರೆಲ್ಲಾ ಒಂದು ಗೂಡಿದಾಗ ನಮ್ಮ ಚೆಲುವ ಕನ್ನಡ ನಾಡು ಉದಯವಾಗಿತ್ತು. ಹೈದ್ರಾಬಾದ್, ಮುಂಬೈ ಮತ್ತು ಮದ್ರಾಸ್ ಪ್ರಾಂತ್ಯಗಳಿಂದ ಹೊರಬಂದ ಕನ್ನಡಿಗರು ಅಂದಿನ ಮೈಸೂರು ರಾಜ್ಯವನ್ನು ಸೇರಿದಾಗ ಏಕೀಕೃತ ಕರ್ನಾಟಕವೆಂತಲೂ, ಮಂಗಳೂರು ಕೊಡಗು ಮತ್ತು ಹಳೆಯ ಮೈಸೂರಿನ ಒಂಬತ್ತು ಜಿಲ್ಲೆಗಳು ಸೇರಿ ದಕ್ಷಿಣ ಕರ್ನಾಟಕವೆಂದು ಗುರುತಿಸಲಾಯಿತು. ಅಂದು ತಾಯ್ನಾಡಿನ ಮಡಿಲಿಗೆ ಬಂದು ಸೇರಿದ ಎಲ್ಲಾ ಪ್ರಾಂತಗಳ ಜನರು ಬಹಳ ನಿರೀಕ್ಷೆ ಹೊಂದಿದ್ದರು. ಅಂದು ಕರ್ನಾಟಕದ ಅಭಿವೃದ್ಧಿಗಾಗಿ ಹೋರಾಡಿದ ಜನರು ಇಂದು ತಮ್ಮ ಅಭಿವೃದ್ಧಿಗಾಗಿ ಹೋರಾಟ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಭಾಷಾವಾರು ಪ್ರಾಂತ ರಚನೆಗಾಗಿ ಕರ್ನಾಟಕದ ಏಕೀಕರಣ ಹೋರಾಟದಲ್ಲಿ ಈ ನಾಡಿನ ಜನತೆ ಭಾಗವಹಿಸಿದ್ದಾರೆ. ಹೈದ್ರಾಬಾದ್ ಪ್ರಾಂತದ ಕನ್ನಡಿಗರೂ ಚಳುಚಳಿಯಲ್ಲಿ ಭಾಗವಹಿಸಿದ್ದಾರೆ. ಹೈದ್ರಾಬಾದ್ ಪ್ರಾಂತದ ಕನ್ನಡಿಗರೂ ಚಳುವಳಿಯಲ್ಲಿ ಭಾಗವಹಿಸಿದ್ದರಿಂದ ಹೈದ್ರಾಬಾದ್ ಕರ್ನಾಟಕ ಒಳಗೊಂಡ ಕರ್ನಾಟಕ ರಚನೆಯಾದದ್ದು ಕರ್ನಾಟಕದ ಸಮಗ್ರತೆಯ ಸಂಕೇತವಾಗಿ ಅಭಿವೃದ್ಧಿಗಾಗಿ ಕೆಲಸ ಮಾಡುವುದನ್ನು ಆಳುವ ಸರಕಾರಗಳು ಮಾಡಬೇಕದ್ದು ಇನ್ನೂ ಆಗಬೇಕಿದೆ.

ಮುಷ್ಕರ ಚಳುವಳಿ, ಕ್ರಾಂತಿ ಇವು ಬೇರೆ ಬೇರೆಯಾಗಿರುತ್ತವೆ. ಕ್ರಾಂತಿಯಲ್ಲಿ ಅಂದಿನ ಸಮಾಜ ತನ್ನ ಹಳೆಯ ವ್ಯವಸ್ಥೆಯನ್ನು ಕಿತ್ತೊಗೆದು ಹೊಸ ವ್ಯವಸ್ಥೆಗಾಗಿ ಹಾತೊರೆಯುತ್ತದೆ. ಈ ಸಂದರ್ಭದಲ್ಲಿ ಸಮಾಜ ವ್ಯವಸ್ಥೆ ಅಮೂಲಾಗ್ರ ಬದಲಾವಣೆಯಾಗಿ ಆರೋಗ್ಯಕರವಾಗಿ ಬೆಳೆದು ನಿಲ್ಲುತ್ತದೆ. ಇಂತಹ ಅಮೂಲಾಗ್ರ ಬದಲಾವಣೆಯನ್ನು ತಂದ ಸಾಮಾಜಿಕ, ಆರ್ಥಿಕ ಕ್ರಾಂತಿ ಭಾರತದಲ್ಲಿ ಇದುವರೆಗೂ ನಡೆದಿಲ್ಲ. ಆದರೆ ಅನೇಕ ಮಹತ್ವದ ಚಳುವಳಿಗಳು ಈ ನಾಡಿನಲ್ಲಿ ಯಶಸ್ಸು ಕಂಡಿವೆ. ಚಳುವಳಿ ಒಂದು ಭಾಗದ ಪ್ರದೇಶದ ಅಥವಾ ಒಂದು ಘಟ್ಟದ ಸಂದರ್ಭದ ಬದಲಾವಣೆಯನ್ನು ತಂದು ಅಲ್ಲಿ

ಸುಧಾರಣೆಯುಂಟಾಗಲು ಸಹಾಯಕವಾಗುತ್ತದೆ. ಆದರೆ 'ಕ್ರಾಂತಿ' ಈ ಸುಧಾರಣೆಯ ಹಂತವನ್ನು ಮೀರಿ ನಾಡಿನ ಪ್ರಮುಖ ಆಶಯಗಳ ದಿಕ್ಕನ್ನೇ ಬದಲಿಸಿ, ಅಮೂಲಾಗ್ರ ಬದಲಾವಣೆ ಜೊತೆಗೆ ಹೊಸ ಮೌಲ್ಯಗಳನ್ನು ಸೃಷ್ಟಿಸುತ್ತದೆ. ಇನ್ನು ಮುಷ್ಕರದ ವ್ಯಾಪ್ತಿ ಚಳುವಳಿಗಿಂತಲೂ ಸೀಮಿತವಾದ ಅರ್ಥವನ್ನು ಪಡೆದದ್ದಾಗಿರುತ್ತದೆ. ಆದ್ದರಿಂದ ಈ ಮುಷ್ಕರ, ಚಳುವಳಿಗಳನ್ನು ಕ್ರಾಂತಿಯ ಮಟ್ಟಕ್ಕೆ ಒಯ್ಯುವ ಕಾರ್ಯವನ್ನು ಜನಪರ ಆಶಯ ಹೊಂದಿದ ಎಲ್ಲರೂ ಮಾಡಬೇಕಾಗಿದೆ.

ಚಳುವಳಿಗಳು ಹೆಚ್ಚಿದಂತೆಲ್ಲಾ ಜನತೆಯಲ್ಲಿ ಜಾಗೃತಿಯುಂಟಾಗುತ್ತದೆ. ಒಂದರ್ಥದಲ್ಲಿ ಅನೇಕ ಚಳುವಳಿಗಳ ಹುಟ್ಟು ಸಾವುಗಳ ನಂತರವೇ ಕ್ರಾಂತಿಯ ಸಾಧ್ಯತೆಯುಂಟು. ಇನ್ನೊಂದರ್ಥದಲ್ಲಿ ಸುಧಾರಣೆಯ ಗುಣ ಈ ಚಳುವಳಿಗಳಲ್ಲಿರುವುದರಿಂದ ಹೆಚ್ಚು ಚಳುವಳಿಗಳು ನಡೆಯುವ ಈ ನಾಡಿನಲ್ಲಿ ಕ್ರಾಂತಿಯಾಗುವುದಿಲ್ಲವೆಂದೂ ಹೇಳಲಾಗುತ್ತದೆ. ದೇಶದ, ನಾಡಿನ ಜನತೆ ಸಂಪೂರ್ಣ ಅತೃಪ್ತಗೊಂಡು ಜಾಗೃತರಾದಾಗ ಮಾತ್ರ ಕ್ರಾಂತಿಯ ಸಾಧ್ಯತೆ ಇರುತ್ತದೆ. ಈ ಚಳುವಳಿಗಳು ಅಲ್ಪತೃಪ್ತಿ ತರುವ ಸಾಧನೆ ಮಾಡುವುದರಿಂದ ಕ್ರಾಂತಿಯ ಕನಸು ಮುಂದೆ ಮುಂದೆ ಸಾಗುತ್ತಿರುತ್ತದೆ. ವ್ಯಕ್ತಿಗಳಿಗೆ ಮೀರಿದ ಪ್ರಭುತ್ವ ಈ ನೆಲದಲ್ಲಿ ಹುಟ್ಟಿದಾಗ, ಚಳುವಳಿಗಳು ಹಿಂದೆ ಸರಿದು ಕ್ರಾಂತಿಯುಂಟಾಗಲು ಸಾಧ್ಯವಾಗುತ್ತದೆ. ಯಾವುದೇ ಚಳುವಳಿಗಳಿಗೆ ಅನೇಕ ಇತಿಮಿತಿಗಳಿರುತ್ತವೆ. ಅದರ ಸ್ವರೂಪ ಕೂಡ ತುಂಬಾ ಸೀಮಿತವಾದದ್ದು. ಈ ಮಿತಿಗಳನ್ನು ಮೀರಿದ ಕ್ರಿಯೆ ಪ್ರಾರಂಭವಾದಾಗ ಮಾತ್ರ ವ್ಯವಸ್ಥೆಯಲ್ಲಿ ನಿರ್ಣಾಯಕ ಬದಲಾವಣೆಗಳನ್ನು ನಿರೀಕ್ಷಿಸಲು ಸಾಧ್ಯ.

ಕನ್ನಡ ಭಾಷೆ ಮತ್ತು ಕನ್ನಡಿಗರು ಸಂಸ್ಕೃತ ಭಾಷೆಯ ಸೆಳೆತಕ್ಕೆ ಸಿಲುಕಿ ನರಳುತ್ತಿದ್ದ ಕಾಲಘಟ್ಟದಲ್ಲಿ ಈ ಅವಲಂಬನೆಯನ್ನು ಹುನ್ನಾರಗಳನ್ನು ಮೊಟ್ಟ ಮೊದಲಿಗೆ ಛಿದ್ರಗೊಳಿಸಿದವರು ವಚನಕಾರರು. ನಮ್ಮ ಮನೋಚಿಂತನೆಗಳನ್ನು ಸಂಸ್ಕೃತದಿಂದ ಬಿಡುಗಡೆ ಗೊಳಿಸಿ ಅಚ್ಚ ಕನ್ನಡದಲ್ಲಿ ಸರಳವಾಗಿ ಮನ ಮುಟ್ಟುವಂತೆ ಮಾಡಿದ್ದು ೧೨ನೇ ಶತಮಾನದ ವಚನಗಳೇ ಆಗಿವೆ. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿಯರಾದಿಯಾಗಿ ಸಮಾಜದ ವಿಭಿನ್ನ ವರ್ಗಗಳ ವಚನಕಾರರು ಕನ್ನಡದಲ್ಲಿಯೇ ಚಿಂತನೆ ನಡೆಸಿ ಸಹಜ ಸರಳವಾದ ಭಾಷಿಕ ಮಾಧ್ಯಮದ ಮೂಲಕ ಎಲ್ಲ ಜನರನ್ನು ತಲುಪಿದ ವಚನ ಚಳುವಳಿ ಒಂದು ರೀತಿಯಲ್ಲಿ ಮೊಟ್ಟ ಮೊದಲ ಕನ್ನಡ ಚಳುವಳಿಯೆಂದೇ ಹೇಳಬಹುದು.

ಕರ್ನಾಟಕದಲ್ಲಿ ವಚನ ಚಳುವಳಿಯ ನಂತರ ನಡೆದ ಅನೇಕ ಚಳುವಳಿಗಳ ನಡುವೆ ಕನ್ನಡದ ಚಳುವಳಿ ತುಂಬಾ ಮಹತ್ವದ ಸ್ಥಾನವನ್ನು ಪಡೆದಿದೆ. ಭಾರತದ ಸ್ವಾತಂತ್ರ್ಯ ಚಳುವಳಿಯ ನಂತರ ಕನ್ನಡ ನಾಡಿನ ಸಮಗ್ರ ಕನ್ನಡಿಗರೆಲ್ಲಾ ತಮ್ಮನ್ನು ಹೋರಾಟದಲ್ಲಿ ಕಂಡು ಕೊಂಡದ್ದು ಭಾಷಾ ಚಳುವಳಿಯಲ್ಲಿ ಮಾತ್ರ.

## ಹೊಸಪೇಟೆ ತಾಲೂಕಿನ ಮೇಲೆ ತೆಲುಗು ಭಾಷೆಯ ಪ್ರಭಾವ

ವಿಜಯನಗರ ಸಾಮ್ರಾಜ್ಯದ ಕಾಲದಿಂದಲೂ ಹೊಸಪೇಟೆ ತಾಲೂಕಿನಲ್ಲಿ ತೆಲುಗು ಭಾಷೆಯ ಪ್ರಭಾವ ವಿರುವುದು ಕಂಡು ಬರುತ್ತದೆ. ಶ್ರೀ ಕೃಷ್ಣಾದೇವರಾಯನೇ ಸ್ವತಃ ಸಂಸ್ಕೃತ ತೆಲುಗು, ಕನ್ನಡಭಾಷೆಯ ವಿದ್ವಾಂಸನಾಗಿದ್ದನು. ಕನ್ನಡ, ತೆಲುಗು ಸಾಹಿತ್ಯಕ್ಕೆ ಎಲ್ಲಾ ರೀತಿಯ ಪ್ರೋತ್ಸಾವನ್ನು ನೀಡಿದ್ದನು. ಇವನ ಆಸ್ಥಾನದಲ್ಲಿ ಎಂಟು ಜನ ತೆಲುಗಿನ ಪ್ರಖ್ಯಾತ ವಿದ್ವಾಂಸರಿದ್ದರು. ಇದರಿಂದ ಈ ಸಾಮ್ರಾಜ್ಯದಲ್ಲಿ ತೆಲುಗು ಭಾಷೆಗಿದ್ದ ಪ್ರಾಮುಖ್ಯತೆಯನ್ನು ಗಮನಿಸಬಹುದು. ವಿಜಯನಗರ ಪತನದ ನಂತರ ಅನೇಕ ಪಾಳೆಯಗಾರರು ಸ್ವತಂತ್ರರಾಗಿ ಆಡಳಿತ ನಡೆಸಿದ ನಂತರ ಬ್ರಿಟೀಷರ ವಸಾಹತು ಶಾಹಿ ಆಡಳಿತದಲ್ಲಿ ಹೈದ್ರಾಬಾದ್ ಸಂಸ್ಥಾನದ ಪ್ರಭಾವ ಈ ಪ್ರದೇಶದಲ್ಲಿ ತೆಲುಗು ಭಾಷೆ, ಉರ್ದು ಭಾಷೆಯ ಪ್ರಭಾವ ದಟ್ಟವಾಗಿ ಹರಡಲು ಕಾರಣವಾಯಿತು. ಹೈದ್ರಾಬಾದ್ ನಿಜಾಮನ ಕಾಲದ ರಜಾಕಾರರ ಹಾವಳಿಯಿಂದ ತತ್ತರಿಸಿದ ಗಡಿ ಜಿಲ್ಲೆಯಾದ ರಾಯಚೂರು ಗುಲ್ಬರ್ಗಾ ಜಿಲ್ಲೆಗಳಿಂದ ಹಲವು ಹಿಂದೂ ಕುಟುಂಬಗಳು ಬಳ್ಳಾರಿ ಜಿಲ್ಲೆಯ ಈ ಪ್ರದೇಶಗಳಿಗೆ ವಲಸೆ ಬಂದರು. ಇದಲ್ಲದೆ ತುಂಗಾಭದ್ರಾ ಜಲಾಶಯದ ನಿರ್ಮಾಣ ಕಾರ್ಯದಲ್ಲಿ ದೊರೆತ ಕೂಲಿ ಕೆಲಸಕ್ಕೆ ಆನಂತರದಲ್ಲಿ ಈ ಪ್ರದೇಶದ ನೀರಾವರಿ ಅನುಕೂಲದಿಂದಲೂ ತೆಲುಗರು ಈ ಪ್ರದೇಶದಲ್ಲಿ ನೆಲೆಸಲು ಕಾರಣವಾಯಿತು. ಹೊಸಪೇಟೆ ತಾಲೂಕಿನ ಕೃಷಿಯೋಗ್ಯ ಭೂಮಿಯ ಪ್ರಭಾವ ಮತ್ತು ಯಥೇಚ್ಯವಾಗಿ ಕಡಿಮೆ ದರದಲ್ಲಿ ಸಿಗುತ್ತಿರುವುದೂ ಕೂಡ ಈ ಪ್ರದೇಶದಲ್ಲಿ ತೆಲುಗು ಮಾತೃಭಾಷೆಯ ಕುಟುಂಬಗಳು ವಲಸೆ ಬರಲು ಮತ್ತೊಂದು ಕಾರಣವಾಯಿತು. ಹಾಗೆಯೇ ವಲಸೆ ಬಂದ ತೆಲುಗರ ಆರ್ಥಿಕ ಅಭಿವೃದ್ಧಿಯಿಂದಲೂ ತಮ್ಮವರ ಸೆಳೆತಕ್ಕೆ ಕಾರಣವಾಗಿ ಹೊಸಪೇಟೆ ಪ್ರದೇಶದಲ್ಲಿ ತೆಲುಗು ಭಾಷೆಯ ಪ್ರಭಾವವನ್ನು ದಟ್ಟವಾಗಿ ಹಬ್ಬಿಸಿದೆ. ತೆಲುಗು ಭಾಷಿಕರ ಪ್ರಭಾವವು ಹೊಸಪೇಟೆ ತಾಲೂಕಿನ ಪೂರ್ವದ ದಕ್ಷಿಣೋತ್ತರವಾಗಿ ಹಬ್ಬಿರುವುದು ಕಂಡು ಬರುತ್ತದೆ.

ಮನುಷ್ಯ ಸಂಘ ಜೀವಿಯಾಗಿರುವುದರಿಂದ, ಸಮಾಜದಿಂದ ವ್ಯಕ್ತಿಯನ್ನು, ವ್ಯಕ್ತಿಯಿಂದ ಭಾಷೆಯನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಭಾಷೆ ಸಮಾಜದ ಬೆಳವಣಿಗೆಗೆ ಬಹು ಸಹಾಯಕವಾಗಿದೆ. ಸಮಾಜದ ಎಲ್ಲಾ ಅಂಶಗಳೊಡನೆ ಭಾಷೆಯು ಬೆರೆತು ಹೋಗಿರುತ್ತದೆ. ಹೀಗಾಗಿ ವಲಸಿಗರು ತಾವು ಎಲ್ಲೇ ನೆಲೆಸಿರಲಿ ಅವರು ತಮ್ಮದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಸಮುದಾಯಗಳು ತಮ್ಮದೇ ಆದ ಭಾಷೆಯನ್ನು ಬಳಸುವುದು ಸಹಜವಾದುದು. ತೆಲುಗು ಮಾತೃಭಾಷೆಯ ಜನರಿಂದ ಕನ್ನಡಿಗರ ನಡುವಿನ ಸಂಘರ್ಷ ಸ್ವಾತಂತ್ರ ನಂತರದಲ್ಲಿ ಏಕೀಕರಣದ ನಂತರ ಹೊಸಪೇಟೆ ತಾಲೂಕಿನಲ್ಲಿ ಕನ್ನಡಿಗರ ಮೇಲೆ ಇತ್ತ ತೆಲುಗರ ಒತ್ತಡಗಳು ಕಡಿಮೆಯಾಗಲಿಲ್ಲ. ಏಕೀಕರಣ ಕನ್ನಡಿಗರ ಆತಂಕಗಳು ಕಡಿಮೆಯಾಗದೇ ಇದ್ದದ್ದು ಇಲ್ಲಿನ ಕನ್ನಡ ಪರವಾದ ಚಳುವಳಿಗೆ ಪ್ರೇರಣೆ ನೀಡಿತು.

ಭಾಷಾವಾರು ಪ್ರಾಂತ ರಚನೆಯಾದ ನಂತರವೂ ಕನ್ನಡಿಗರು ಕನ್ನಡಕ್ಕಾಗಿ ಚಳುವಳಿ ಮಾಡುವುದು ಎಂತಹ ವಿಪರ್ಯಾಸ. ಆದರೆ ಅದು ಕರ್ನಾಟಕದಲ್ಲಿ ಅನಿವಾರ್ಯವಾಗಿದೆ. ಕನ್ನಡ ಕಾಯಲು ಇಂದಿಗೂ ಕನ್ನಡ ಕಾವಲು ಸಮಿತಿ ಅಥವಾ ಕನ್ನಡ ಅಭಿವೃದ್ಧಿ ಪ್ರಾಧಿಕಾರವನ್ನು ಅವಲಂಬಿಸಬೇಕಾಗಿದೆ. ಕನ್ನಡ ಜನತೆಯ ನಿರ್ಲಕ್ಷ್ಯತನದಿಂದಾಗಿ ಕನ್ನಡ ಭಾಷೆಗಾಗಿ ಸ್ವಾತಂತ್ರ್ಯ ನಂತರದಲ್ಲಿ ಸಮಸ್ತ ಕನ್ನಡಿಗರು ಚಳುವಳಿ ಮಾಡಬೇಕಾದ ಪ್ರಸಂಗ ಬಂದದ್ದಂತೂ ಸತ್ಯಸಂಗತಿ. ಭಾಷೆ ಬದುಕುಗಳ ನಡುವಿನ ನೇರ ಸಂಬಂಧ ಈ ನಾಡಿನಲ್ಲಿ ಭಾಷಾ ಚಳುವಳಿಯ ಧ್ವನಿ ಸಾರ್ವತ್ರಿಕವಾಯಿತು. ಕನ್ನಡ ಪರವಿದ್ದ ಸಾಹಿತಿಗಳು, ಕಲಾವಿದರು, ಪತ್ರಕರ್ತರು, ವಿದ್ಯಾರ್ಥಿಗಳು, ಯುವಜನರು, ಮಹಿಳೆಯರು ಬೀದಿಗಿಳಿದರು. ಬದುಕಿನಷ್ಟೇ ಭಾಷೆ ಮಹತ್ವವಾದುದ್ದೆಂದು ಜನತೆಗೆ ಸಾರಿ ಹೇಳಿದರು - ಕನ್ನಡ ಚಳುವಳಿಯ ಹೋರಾಟ ಹತ್ತಾರು ದಿಕ್ಕುಗಳಲ್ಲಿ ಹಬ್ಬಿ ಆಳುವ ಸರಕಾರವನ್ನೇ ಉರುಳಿಸಿ ಹಾಕುವ ಶಕ್ತಿಯನ್ನು ಚಳುವಳಿ ಪಡೆದುಕೊಂಡಿತು. ಒಂದು ಚಳುವಳಿ ಸೈದ್ಧಾಂತಿಕವಾಗಿ, ಗಟ್ಟಿಯಾಗಿ, ಸಂಘಟನಾತ್ಮಕವಾಗಿ ಬೆಳೆದು ನಿಂತರೆ ಏನೆಲ್ಲಾ ಬದಲಾವಣೆಗಳು ಸಾಧ್ಯವೆಂಬುದನ್ನು ಕನ್ನಡ ಚಳುವಳಿ ತೋರಿಸಿಕೊಟ್ಟಿತು.

ಕನ್ನಡ ಚಳುವಳಿಯನ್ನು ಪ್ರಮುಖವಾಗಿ ಎರಡು ಘಟ್ಟಗಳಲ್ಲಿ ಗುರುತಿಸಬಹುದಾಗಿದೆ. ೧೯೬೦-೬೧ ರಲ್ಲಿ ಅನಕೃ ಮತ್ತು ತ.ರಾ.ಸು ಅವರ ನೇತೃತ್ವದಲ್ಲಿ ನಡೆದ ಕನ್ನಡ ಚಳುವಳಿ ಪ್ರಾರಂಭದ ಘಟ್ಟವಾದರೆ, ೧೯೮೨ ರಲ್ಲಿ ಗೋಕಾಕ್ ವರದಿ ಜಾರಿಗೆ ತರುವ ಸಂದರ್ಭದಲ್ಲಿ ನಡೆದ ಕನ್ನಡ ಚಳುವಳಿ ಎರಡನೆ ಘಟ್ಟದ್ದಾಗಿರುತ್ತದೆ. ಅಂದು ಅ.ನ.ಕೃ. ಅವರ ನೇತೃತ್ವದಲ್ಲಿ ನಡೆದ ಚಳುವಳಿ ಹಲವಾರು ಕಾರಣಗಳಿಂದ, ಅನೇಕ ಮಿತಿಗಳಿಂದ ಅಷ್ಟು ಪ್ರಬಲವಾಗಲಿಲ್ಲ. ನಾಡ ಹಬ್ಬದ ಆಚರಣೆಯ ಸಂದರ್ಭದಲ್ಲಿ ಕನ್ನಡಿಗರಿಂದ ಸಂಗ್ರಹಿಸಿದ ಹಣದಲ್ಲಿ ಅವ್ಯವಹಾರ ವಾಗಿದೆಯೆಂಬ ದೂರುಗಳು ಈ ಸಂದರ್ಭದಲ್ಲಿ ಕೇಳಿಬಂದವು. ಆದರೆ ಆಗ ಅದಿನ್ನು ಮುಷ್ಕರದ ಹಂತದಲ್ಲಿಯೇ ಇತ್ತು. ಚಳುವಳಿಯ ಹಂತಕ್ಕೆ ಇನ್ನು ತಲುಪಿರಲಿಲ್ಲ. ಆದಾಗ್ಯೂ ಆ ಸಂದರ್ಭದಲ್ಲಿ ಕನ್ನಡಕ್ಕಾಗಿ ಹೋರಾಡಿ ಶ್ರಮಿಸಿದ ಹೋರಾಟಗಾರರನ್ನು ಮರೆಯುವಂತಿಲ್ಲ. ಕನ್ನಡ ಬೋರ್ಡುಗಳಿಗಾಗಿ ಕನ್ನಡ ಶಾಲೆಗಳಿಗಾಗಿ ನಡೆದ ಆ ಹೋರಾಟದ ಉತ್ಸಾಹ ಸಾಧನೆಗಳನ್ನು ಅಲ್ಲಗಳೆಯುವಂತಿಲ್ಲ.

೧೯೮೨ ರಲ್ಲಿ ಪ್ರಾರಂಭವಾದ ಕನ್ನಡ ಚಳುವಳಿ ಕರ್ನಾಟಕದ ಭಾಷಾ ಚಳುವಳಿಯ ಇತಿಹಾಸದಲ್ಲಿ ನಿಜವಾದ ಕನ್ನಡ ಚಳುವಳಿಯಾಗಿ ರೂಪುಗೊಂಡಿತು. ಒಟ್ಟು ಮೂರು ಹಂತ ಬೆಳೆದು ನಿಂತ ಈ ಚಳುವಳಿ ಯಶಸ್ಸು ಪಡೆಯಿತು. ಭಾಷೆ, ಬದುಕು, ಸಾಹಿತ್ಯ ಸಿದ್ಧಾಂತ ಎಲ್ಲವೂ ಈ ಚಳುವಳಿಯಲ್ಲಿ ಬಯಲಿಗೆ ಬಂದು ಕನ್ನಡಿಗನಿಗೆ ಅಂತಃಸತ್ವದ ನಿಜಸ್ವರೂಪವನ್ನು ತೋರಿಸಿದವು. ಕನ್ನಡದ ಬಹುತೇಕ ಬರಹಗಾರರು, ಸಾಹಿತಿಗಳು, ಚಿತ್ರ ನಟರು ಸೇರಿದಂತೆ ಸಮಸ್ತ ನಾಡಿನ ಕನ್ನಡಿಗರು ಭಾಗವಹಿಸಿದ ಚಳುವಳಿ ಇದು.

ಒಂದು ಚಳುವಳಿ ತಾತ್ವಿಕವಾಗಿ ಗಟ್ಟಿ ಗೊಂಡಾಗ ಮಾತ್ರ ಅದು ಎಲ್ಲಾ ಅಪಾಯಗಳನ್ನು ದಾಟಿ ಮುಂದೆ ಸಾಗಬಲ್ಲದು. ಇಲ್ಲದಿದ್ದರೆ ಚಳುವಳಿಯ ಮುಂಚೂಣಿಯಲ್ಲಿರುವ ನಾಯಕರೇ ಚಳುವಳಿಯನ್ನು ನುಂಗಿ ಹಾಕಬಹುದು. ಪ್ರೌಢ ಶಾಲೆಗಳಲ್ಲಿ ಭಾಷಾ ಸಮಸ್ಯೆಯೊಂದನ್ನೇ ಮುಖ್ಯವಾಗಿಟ್ಟುಕೊಳ್ಳದೇ ಕನ್ನಡಿಗರ ಅನಂತ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಹೋರಾಡಿದ್ದರೆ ಈ ಚಳುವಳಿಯ ವ್ಯಾಪ್ತಿ ಇನ್ನು ಹೆಚ್ಚು ವಿಸ್ತರಿಸುತ್ತಿತ್ತು. ಆಗ ಆಡಳಿತ, ಕೈಗಾರಿಕೆ, ವ್ಯವಹಾರಗಳಲ್ಲಿ ಕನ್ನಡ ಅನಿವಾರ್ಯವಾಗುತ್ತಿತ್ತು.

## ಚಳುವಳಿಯ ಹಿನ್ನೆಲೆ

ಪ್ರೌಢಶಾಲೆಗಳಲ್ಲಿ ಕಲಿಸುತ್ತಿದ್ದ ಅನೇಕ ಭಾಷೆಗಳ ವಿಷಯದಲ್ಲಿ ಒಂದು ವಿವಾದವೆದ್ದಿತು. ಬೇರೆ ಬೇರೆ ಭಾಷಾ ಮಾಧ್ಯಮದ ಪ್ರೌಢ ಶಾಲೆಗಳಲ್ಲಿ ಕನ್ನಡ ಇಂಗ್ಲೀಷ್, ತಮಿಳು, ತೆಲುಗು, ಮರಾಠಿ, ಉರ್ದು ಭಾಷೆಗಳ ಜೊತೆಗೆ ಸಂಸ್ಕೃತವೂ ಪ್ರಮಥ ಭಾಷೆಯಾಗಿತ್ತು, ಪ್ರಾಥಮಿಕ ಶಾಲೆಯ ಹಂತದಲ್ಲಿದ್ದ ಸಂಸ್ಕೃತ ಭಾಷೆ, ಪ್ರೌಢ ಶಾಲೆಯ ಹಂತದಲ್ಲಿ ಒಮ್ಮಿಂದೊಮ್ಮಲೆ ಪೀಠವನ್ನಲಂಕರಿಸಿ ವಿಜೃಂಬಿಸತೊಡಗಿತು. ಸಂಸ್ಕೃತ ಪ್ರಥಮ ಭಾಷೆಯನ್ನಾಗಿ ಆರಿಸಿಕೊಂಡ ವಿದ್ಯಾರ್ಥಿಗಳಿಗೆ ಸಂಸ್ಕೃತದ ಅಕ್ಷರ ಜ್ಞಾನ ಗೊತ್ತಿರದಿದ್ದರೂ, ಸಂಸ್ಕೃತ ಪಂಡಿತರು ತಮ್ಮ ಸತ್ತ ಭಾಷೆಗಾಗಿ ಜೀವ ತುಂಬಲು ಹೆಚ್ಚೆಚ್ಚು ಅಂಕಗಳನ್ನು ನೀಡಿ ವಿದ್ಯಾರ್ಥಿಗಳನ್ನು ಆಕರ್ಷಿಸತೊಡಗಿದರು. ವಿದ್ಯಾರ್ಥಿಗಳು ರ್‍ಯಾಂಕ್ ಪಡೆಯುವ ಆಸೆಯಿಂದ ಸಂಸ್ಕೃತವನ್ನು ಪ್ರಥಮಭಾಷೆಯನ್ನಾಗಿ ತೆಗೆದುಕೊಳ್ಳತೊಡಗಿದರು. ಮಾತೃಭಾಷೆಯನ್ನು ತೆಗೆದುಕೊಂಡು ಕಷ್ಟಪಟ್ಟು ಓದಿದ ವಿದ್ಯಾರ್ಥಿ ಮೂಲೆ ಗುಂಪಾಗಿ ಸಂಸ್ಕೃತ ಪ್ರಥಮ ಭಾಷೆಯಾಗಿ ಮಾಡಿದ ವಿದ್ಯಾರ್ಥಿ ರ್‍ಯಾಂಕ್ ಬರುವುದು ಸಹಜವಾಗಿತ್ತು. ಅಂಕಗಳಿಗಾಗಿಯೇ ಅಭ್ಯಾಸ ಮಾಡುವ ಸಂಸ್ಕೃತವನ್ನು ಪ್ರಥಮಭಾಷೆಯನ್ನಾಗಿ ಆರಿಸಿಕೊಂಡರು. ಹೀಗಾಗಿ ಮಾತೃ ಭಾಷೆಗಳೆಲ್ಲಾ ಮೂಲೆ ಗುಂಪಾಗಿ ಸತ್ತ ಭಾಷೆಗೆ ಶೃಂಗಾರ ಪ್ರಾರಂಭವಾಯಿತು.

ಹೆಣಕ್ಕೆ ಶೃಂಗಾರ ಮಾಡುವುದು ಸಂಸ್ಕೃತಕ್ಕೆ ಪ್ರಚಾರ ನೀಡುವುದು ಒಂದೇ ಎಂದನ್ನರಿತ ಕನ್ನಡದ ವಿಚಾರವಂತರು, ಬುದ್ಧಿಜೀವಿಗಳು, ಸಾಹಿತಿಗಳು ಸರಕಾರಕ್ಕೆ ಒಂದು ಮನವಿ ನೀಡಿ ಸಂಸ್ಕೃತ ಭಾಷೆಯನ್ನು ಮೊದಲನೆಯ ಸ್ಥಾನದಿಂದ ಕಿತ್ತೊಗೆಯಬೇಕೆಂದು ಆಗ್ರಹಿಸಿದರು. ಅನೇಕ ಮಾತೃ ಭಾಷೆಗಳೊಡನೆ ಸಂಸ್ಕೃತವು ಪ್ರಥಮ ಭಾಷೆಯಾಗಿ ಸ್ಪರ್ಧಿಸುವುದು ಅವೈಜ್ಞಾನಿಕವಾದುದೆಂಬ ಸತ್ಯವನ್ನು ತಡವಾಗಿ ಯಾದರೂ ತಿಳಿದುಕೊಂಡು ಸರಕಾರ ೧೯೭೯ರ ಅಕ್ಟೋಬರ್‌ನಲ್ಲಿ ಒಂದು ಆಜ್ಞೆಯನ್ನು ಹೊರಡಿಸಿ ಸಂಸ್ಕೃತವನ್ನು ತೃತೀಯ ಭಾಷೆಯಾಗಿ ಓದಲು ಅವಕಾಶಕೊಟ್ಟಿತು. ಸಂಸ್ಕೃತದ ಬಗೆಗಿನ ಸರಕಾರದ ಈ ಆಜ್ಞೆಯಿಂದ ಸಂಸ್ಕೃತ ಪಂಡಿತರಿಗೆ ತಲೆನೋವು ಪ್ರಾರಂಭವಾಯಿತು. ಇದು ದೊಡ್ಡ ವಿವಾದವಾಗಿ ವಿಧಾನ ಮಂಡಲದ ಎರಡೂ ಸಭೆಗಳಲ್ಲಿ ಚರ್ಚೆಯಾಯಿತು. ಸಂಸ್ಕೃತದ ವಾರಸುದಾರರಲ್ಲಿ ಕೆಲವರು ಉಚ್ಚ ನ್ಯಾಯಾಲಯದ ಮೊರೆ ಹೊಕ್ಕರು ಈ ಸಂದರ್ಭದಲ್ಲಿ ಸರಕಾರ ಈ ವಿವಾಧಕ್ಕೆ ಸಂಬಂಧಿಸಿದಂತೆ ತಜ್ಞರ ಸಮಿತಿಯನ್ನು ನೇಮಿಸಲು ನಿರ್ಧರಿಸಿತು. ಜುಲೈ-೫ರ ೧೯೮೦ ರಂದು ಕರ್ನಾಟಕ ಸರಕಾರ ತಜ್ಞರ

ಸಮಿತಿಯನ್ನು ರಚಿಸಿ ಆದೇಶ ಹೊರಡಿಸಿತು. ಡಾ॥ ವಿ.ಕೃ.ಗೋಕಾಕರು ಅಧ್ಯಕ್ಷರಾಗಿ, ಜಿ.ನಾರಾಯಣ, ತ.ಸು.ಶ್ಯಾಮರಾವ್, ಕೆ.ರಾಮಚಂದ್ರರಾವ್ ಕೃಷ್ಣಮೂರ್ತಿ, ಹೆಚ್.ಪಿ. ಮಲ್ಲೇದೇವರು ಸಮಿತಿಯ ಸದಸ್ಯರಾಗಿ ನೇಮಕಗೊಂಡರು.

ಸಂಸ್ಕೃತವು ಶಾಲಾ ಪಠ್ಯ ವಿಷಯಗಳಲ್ಲಿ ಒಂದು ವಿಷಯವಾಗಿ ಉಳಿಯಬೇಕೋ? ಬೇಡವೋ? ಎಂದು ತೀರ್ಮಾನಿಸಲು ಸಿದ್ಧವಾದ ಈ ಸಮಿತಿ ರಾಜ್ಯದ ವಿವಿಧಕಡೆ ಸಂಚಾರ ಮಾಡಿ ಜನಾಭಿಪ್ರಾಯ ಸಂಗ್ರಹಿಸಿತು. ಇದೇ ಸಂದರ್ಭದಲ್ಲಿ ಸಮಿತಿಯ ಬಗೆಗೆ ಕೆಲವೊಂದು ಅನುಮಾನಗಳು ಹುಟ್ಟಿಕೊಂಡವು. ಸಮಿತಿ ಕನ್ನಡಕ್ಕೆ ವಿರೋಧವಾದ ಶಿಫಾರಸ್ಸು ಮಾಡಬಹುದೆಂದು ಕೆಲವರು ಹೆದರಿದರೆ, ಇದರಿಂದ ಸಂಸ್ಕೃತಕ್ಕೆ ಹಾನಿಯಾಗಬಹುದೆಂದು ಹಲವರು ಭಯಪಟ್ಟರು. ಕೆಲವು ಕಡೆ ಸಮಿತಿಯ ವಿರುದ್ಧ ಪ್ರದರ್ಶನಗಳೂ ನಡೆದವು. ಹಲವುಕಡೆ ಕನ್ನಡ ಪರವಾದ ಪ್ರತಿಭಟನೆಗಳು ನಡೆದವು. ಹೊಸಪೇಟೆಯ ತಾಲೂಕಿನ ಕೇಂದ್ರ ಸ್ಥಾನದಲ್ಲಿಯೂ ಗೋಕಾಕ್ ಸಮಿತಿಯನ್ನು ವಿರೋಧಿಸಲು ಮೆರವಣಿಗೆ ನಡೆದಿತ್ತು. ಕನ್ನಡ ಹೋರಾಟಗಾರರಾದ ಚಿದಾನಂದ, ತಾಯಪ್ಪನಾಯಕ ಮತ್ತು ಶೌಕತ್‌ಅಲಿಯವರು ವಹಿಸಿದ್ದರು. ಸಂಸ್ಕೃತಕ್ಕೆ ಆದ್ಯತೆ ನೀಡುವ ದೃಷ್ಟಿಯಿಂದಲೇ ಗೋಕಾಕ್ ಸಮಿತಿ ರಚಿಸಲಾಗಿದೆ ಎಂಬ ಆತಂಕ ರಾಜ್ಯದೆಲ್ಲಡೆ ಪ್ರಾರಂಭದಲ್ಲಿ ವ್ಯಾಪಾರವಾಗಿತ್ತು.

ಕರ್ನಾಟಕದ ಪ್ರಮುಖ ಸ್ಥಳಗಳಾದ ಮೈಸೂರು, ಧಾರವಾಡ, ಬೆಳಗಾವಿಗಳಲ್ಲಿ ಗೋಕಾಕ್ ಸಮಿತಿ ಜನಾಭಿಪ್ರಾಯಗಳನ್ನು ಸಂಗ್ರಹಿಸಲು ಪ್ರವಾಸ ಹೋದೆಡೆಯಲ್ಲಿ ಅನೇಕ ಬುದ್ಧಿ ಜೀವಿಗಳು, ಸಾಹಿತಿಗಳು, ಕನ್ನಡ ಪರ ಹೋರಾಟಗಾರರು ಗೋಕಾಕ್ ಗೋಬ್ಯಾಕ್, ಘೋಷಣೆಯೊಂದಿಗೆ ಪ್ರತಿಭಟನೆ ನಡೆಯುತ್ತಿದ್ದವು. ಆಯಾ ಪ್ರದೇಶದಲ್ಲಿ ನಡೆಯುತ್ತಿದ್ದ ಪ್ರತಿಭಟನೆಯ ನೇತೃತ್ವವನ್ನು ಸ್ಥಳೀಯ ಖ್ಯಾತ ಸಾಹಿತಿಗಳು, ಕಲಾವಿದರು ವಹಿಸುತ್ತಿದ್ದುದು, ವಿಶೇಷವಾಗಿತ್ತು. ಇಂಥಹ ಅನೇಕ ಪ್ರತಿರೋಧಗಳ ನಡುವೆಯೂ ಈ ಭಾಷಾ ತಜ್ಞರ ಸಮಿತಿ ತನ್ನ ನಿಗದಿತ ಸಮಯಕ್ಕಿಂತ ಮುಂಚಿತವಾಗಿಯೇ ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿತು. ಈ ಭಾಷಾ ವರದಿಯೇ ಗೋಕಾಕ್ ವರದಿ. ಕನ್ನಡ ಪರವಾದಿಗಳು ಗುಮಾನಿ ಶಂಕೆಯಿಂದ ನಿರೀಕ್ಷಿಸಿದ್ದ ಗೋಕಾಕ್ ವರದಿಯು ಕನ್ನಡಕ್ಕೆ ಮೊದಲ ಸ್ಥಾನವನ್ನು ಕೊಟ್ಟು ಸಂಸ್ಕೃತಕ್ಕೆ ಮೂರನೆಯ ಸ್ಥಾನವನ್ನು ನೀಡಿದ್ದು ಸಮಾಧಾನವನ್ನು ತಂದಿತು.

ಗೋಕಾಕ್ ವರದಿ ಪ್ರಕಟವಾದ ಕೂಡಲೇ ಅಂದಿನ ಸರಕಾರ ಅದನ್ನು ಅನುಷ್ಠಾನಗೊಳಿಸಲು ಹಿಂದೇಟು ಹಾಕಲು ಆರಂಬಿಸಿತು. ಇದಕ್ಕೆ ಮುಖ್ಯ ಕಾರಣ ಭಾಷ ಅಲ್ಪ ಸಂಖ್ಯಾತರು ತಮ್ಮ ಹಿತಾಸಕ್ತಿಗೆ ಈ ವರದಿ ಧಕ್ಕೆ ತರುತ್ತದೆಂಬ ತಕರಾರುಗಳನ್ನು ಒಡ್ಡಿದ್ದರಿಂದ ಸರಕಾರ ವಿಳಂಬ ನೀತಿಯನ್ನು ಅನುಸರಿಸಿತು. ಅಂತೆಯೇ ಈ ವರದಿಯನ್ನು ವಿರೋಧಿಸಿ ವಿಧಾನ ಸೌದದ ಎದುರು ಪ್ರತಿಭಟನೆ, ಪ್ರದರ್ಶನಗಳು ಅಂದಿನ ಅಲ್ಪ ಸಂಖ್ಯಾತ ಮುಖಂಡರಾಗಿದ್ದ ಎಫ್. ಎಂ. ಖಾನ್‌ರ ನೇತೃತ್ವದಲ್ಲಿ ನಡೆದವು. ಸರಕಾರ ನಡೆಸುತ್ತಿದ್ದ

ಪಕ್ಷಕ್ಕೆ ಬೆಂಬಲಿಸುವ ಬಹುಮುಖ್ಯವಾದ ವರ್ಗವನ್ನು ಎದುರು ಹಾಕಿಕೊಳ್ಳುವ ಭೀತಿ ಸರಕಾರಕ್ಕೆ ಇದ್ದುದು ಅದರ ವರ್ತನೆಯಿಂದ ತಿಳಿಯುತ್ತಿತ್ತು. ಸರಕಾರದ ಈ ವಿಳಂಬ ನೀತಿಯನ್ನು ಕರ್ನಾಟಕ ರಾಜ್ಯದಾದ್ಯಂತ ಕನ್ನಡ ಪರವಾದಿಗಳು, ಸಾಹಿತಿ ಕಲಾವಿದರೂ, ಮಾದ್ಯಮಗಳ ಮೂಲಕವೂ ಒತ್ತಾಯಿಸಿ ಸರ್ಕಾರದ ಮೇಲೆ ಒತ್ತಡಗಳನ್ನು ಹೇರಿದರು. ಗೋಕಾಕ್ ವರದಿ ಜಾರಿಗಾಗಿ ನಾಡಿನಾದ್ಯಂತ ಚಳುವಳಿಗಳು, ಪ್ರತಿಭಟನೆಗಳು ನಡೆದವು. ಈ ಚಳುವಳಿಯನ್ನೇ ಗೋಕಾಕ್ ಚಳುವಳಿ ಯೆಂದು ಕರೆಯಲಾಯಿತು.

ಇದರ ಪರಿಣಾಮವಾಗಿ ೧೯೮೨ ಮಾರ್ಚ್ ೧೩ ರಂದು ಬೆಂಗಳೂರಿನಲ್ಲಿ ವಿಧಾನ ಸೌಧದ ಮುಂಭಾಗದಲ್ಲಿ ನಡೆದ ಅಮರಣಾಂತರ ಸತ್ಯಾಗ್ರಹ ಅತ್ಯಂತ ಪ್ರಮುಖವಾದುದು. ಈ ಅಮರಣಾಂತರ ಸತ್ಯಾಗ್ರಹದಲ್ಲಿ ರಹಿಮಾನ್ ಖಾನ್‌ರ ಸ್ಥಿತಿ ಗಂಭೀರವಾಗಿತ್ತು. ಇವರ ಈ ಹೋರಾಟವನ್ನು ಬೆಂಬಲಿಸಿ ರಾಜ್ಯದಾದ್ಯಂತ ಧರಣಿ ಸತ್ಯಾಗ್ರಹಗಳು ನಡೆದವು. ಹೊಸಪೇಟೆ ತಾಲೂಕು ಕೇಂದ್ರದಲ್ಲಿ ಮುನ್ಸಿಪಲ್ ಗರ್ಲ್ಸ್ ಜೂನಿಯರ್ ಕಾಲೇಜಿನ ಪಕ್ಕದ ಬಯಲು ಪ್ರದೇಶದಲ್ಲಿ ಮಾರ್ಚ್ ೧೮ ರಿಂದ ಧರಣಿ ಸತ್ಯಾಗ್ರಹ ನಡೆಯಿತು. ಸತ್ಯಾಗ್ರಹದಲ್ಲಿ ಡಾ॥ ಚಿದಾನಂದ ನೇತೃತ್ವದ ಕರ್ನಾಟಕ ಪ್ರಗತಿಪರ ಯುವಜನ ವೇದಿಕೆ, ಡಾ॥ ರಾಜ್‌ಕುಮಾರ್ ಅಭಿಮಾನಿಗಳ ಸಂಘ, ಅನೇಕ ಎಡ ಪಂಥೀಯ ಸಂಘಟನೆಗಳ ಮುಖಂಡರು ಭಾಗವಹಿಸಿದ್ದರು. ಧರಣಿ ಸತ್ಯಾಗ್ರಹದ ನೇತೃತ್ವವನ್ನು ರಾಜ್ ಅಭಿಮಾನಿಗಳ ಸಂಘದ ಮಾಜಿ ಕೌನ್ಸಿಲರ್ ಚಿದಾನಂದ, ತಾಯಪ್ಪ ನಾಯಕ, ಜಂಬಯ್ಯ ನಾಯಕ, ಡಾ॥ ಬಸವರಾಜ ಮಲಶೆಟ್ಟಿ, ಸಮುದಾಯ ಸಂಘಟನೆಯ ಮಲ್ಹಾರಿ ದೀಕ್ಷಿತ್, ಬಿ.ವೆಂಕೋಬ ನಾಯಕ, ವಿದ್ಯಾರ್ಥಿ ಸಂಘಟನೆಯ ಮುಖಂಡರಾದ ಸಿದ್ದಲಿಂಗಪ್ಪ, ಗುರುಶಾಂತ್, ಶಾಂತಕುಮಾರಿ, ಅಂಬಿಕಾ ಜಾಲಿಗಾರ್, ವಿರುಪಾಕ್ಷನಾಯಕ ಮೊದಲಾದವರು ಭಾಗವಹಿಸಿದ್ದರು. ಈ ಸತ್ಯಾಗ್ರಹ ಸುಮಾರು ೧೫ ದಿನಗಳ ಕಾಲ ನಡೆಯಿತು.

ಈ ಧರಣಿ ಸತ್ಯಾಗ್ರಹದಲ್ಲಿ ಶಿಕ್ಷಕರು, ಕಲಾವಿದರು, ಸಾಹಿತಿಗಳು, ವಿದ್ಯಾರ್ಥಿಗಳು ಭಾಗವಹಿಸಿ ಚಳುವಳಿಗೆ ಹುರುಪನ್ನು ತಂದು ಕೊಟ್ಟಿದ್ದರು. ಈ ಚಳುವಳಿಯ ರೂಪ ರೇಷೆಗಳು ಬೆಂಗಳೂರಿನಲ್ಲಿ ನಡೆಯುತ್ತಿದ್ದ ಚಳುವಳಿಯ ಬೆಳವಣಿಗೆಗಳಿಗೆ ಅನುಗುಣವಾಗಿ ಬದಲಾಗುತ್ತಿತ್ತು. ಡಾ। ರಾಜ್‌ಕುಮಾರ್ ರವರ ಪ್ರವೇಶದಿಂದಂತೂ ಈ ಹೋರಾಟ ಇನ್ನಷ್ಟು ತೀವ್ರಗತಿಯನ್ನು ಪಡೆದುಕೊಂಡಿತು. ಎಪ್ರೀಲ್-೧೩ ರಂದು ಅವರು ಕನ್ನಡಕ್ಕಾಗಿ ತಾವು ಎಂಥಹ ತ್ಯಾಗಕ್ಕೂ ಸಿದ್ಧವಿರುವುದಾಗಿ ಘೋಷಿಸಿದ್ದು ಕನ್ನಡಿಗರನ್ನು ಪ್ರೇರೇಪಿಸಿತ್ತು. ರಾಜಕುಮಾರರವರ ಚಳುವಳಿ ಪ್ರವೇಶದಿಂದ ಚಿತ್ರದುರ್ಗದಲ್ಲಿ ನಡೆದ ಪರ, ವಿರೋಧ ಗುಂಪುಗಲಭೆಯಲ್ಲಿ ಇಬ್ಬರು ಪೊಲೀಸರ ಗುಂಡಿಗೆ ಬಲಿಯಾದರು. ಧಾರವಾಡದಲ್ಲಿ ಕೇಂದ್ರ ಕನ್ನಡ ಕ್ರಿಯಾ ಸಮಿತಿಯವರು ಏಪ್ರೀಲ್ ೧೮ ರಂದು ತಮ್ಮ ಮನೆಗಳ ಮುಂದೆ ಗಂಗಳಗಳನ್ನು ಬಡಿದು ಪ್ರತಿಭಟಿಸಿದ್ದು ವಿಶೇಷವಾಗಿತ್ತು.

ಹೊಸಪೇಟೆಯಲ್ಲಿ ನಡೆದ ಪ್ರತಿಭಟನಾ ಚಳುವಳಿಯಲ್ಲಿ ಎಡಪಂಥೀಯ ಸಂಘಟನೆಗಳ ಮುಖಾಂತರ ವಿಶೇಷವಾಗಿ ಸಮುದಾಯ ಸಾಂಸ್ಕೃತಿಕ ಸಂಘಟನೆಯ ಕಲಾವಿದರು ಕ್ರಾಂತಿಕಾರಿ ಹಾಡುಗಳ ಮುಖಾಂತರ ಚಳುವಳಿಗೆ ಹೊಸ ಉತ್ಸಾಹ, ಹುರುಪು ತುಂಬುತ್ತಿದ್ದರು. ಒಟ್ಟು ಎರಡು ಹಂತಗಳಲ್ಲಿ ಈ ಚಳುವಳಿ ನಡೆದದ್ದು ವಿಶೇಷವಾಗಿತ್ತು.

ಗೋಕಾಕ್ ಸಮಿತಿ ರಚನೆ ಯಾದಾಗ ಅದು ಸಂಸ್ಕೃತಕ್ಕೆ ಆದ್ಯತೆ ನೀಡುವ ಉದ್ದೇಶದಿಂದ ರಚಿಸಲಾಗಿದ್ದ ಸಮಿತಿಯೆಂಬ ಗುಮಾನಿಗೆ ಒಳಗಾದ ಸಂದರ್ಭದಲ್ಲಿ ನಡೆದ ಪ್ರತಿಭಟನೆ ಇದು ಮೊದಲನೆ ಹಂತದ ಚಳುವಳಿಯಾದರೆ, ಎರಡನೆಯ ಹಂತದ್ದು ಗೋಕಾಕ್ ವರದಿಯ ಮೊದಲನೆ ಭಾಷಾ ಸೂತ್ರವನ್ನು ಎಪ್ರೀಲ್ ೨೦ ರಂದು ಪ್ರಕಟಿಸಿದ ನಂತರ ನಡೆದ ಚಳುವಳಿ ಎಂದು ಹೇಳಬಹುದು. ಈ ಆದೇಶದ ಪ್ರಕಾರ ಪ್ರೌಢಶಾಲೆಯ ವಿದ್ಯಾರ್ಥಿಗಳು ತಮ್ಮ ಮಾತೃ ಭಾಷೆಯನ್ನು ಮೊದಲ ಭಾಷೆಯಾಗಿ ಆರಿಸಿಕೊಳ್ಳಬಹುದು (ಇದು ಮೊದಲ ಭಾಗ) ಎರಡನೆಯ ಭಾಗದಲ್ಲಿ ಮೊದಲ ಭಾಷೆಯಾಗಿ ಕನ್ನಡಭಾಷೆಯನ್ನು ಅಭ್ಯಾಸ ಮಾಡದಿದ್ದರೆ, ಕನ್ನಡವನ್ನು ಒಳಗೊಂಡಂತೆ ಎರಡು ಭಾಷೆಗಳನ್ನು ಆರಿಸಿಕೊಳ್ಳಬಹುದು, ಮೂರು ಭಾಷೆಗಳಿಗೆ ತಲಾ ೧೦೦ ಅಂಕಗಳು ಇರುತ್ತವೆ. ತತ್‌ಕ್ಷಣದಿಂದಲೇ ಸಂಸ್ಕೃತವನ್ನು ಮೊದಲ ಭಾಷೆ ಯಾಗಲೀ, ಪ್ರಥಮ ಭಾಷೆಯ ಸಹ ಭಾಷೆಯಾಗಿಯಾಗಲೀ ಆರಿಸಿಕೊಳ್ಳುವಂತಿಲ್ಲ ಇದು ಆಜ್ಞೆಯ ಸಾರ.

ಈ ನಿರ್ಧಾರವನ್ನು ಸರ್ಕಾರವು ಪ್ರಕಟಿಸಿದಾಗ ಕನ್ನಡವು ಎಲ್ಲಾ ವಿದ್ಯಾರ್ಥಿಗಳಿಗೆ ೧೦೦ ಅಂಕಗಳಿಗೆ ಕಡ್ಡಾಯವಾಗಿರುವುದನ್ನು ಗಮನಿಸಿ ಹಲವಾರು ಗಣ್ಯ ಸಾಹಿತಿಗಳು ಬುದ್ಧಿಜೀವಿಗಳು ಅದಕ್ಕೆ ಬೆಂಬಲ ನೀಡಿ ಬಿಟ್ಟರು. ಚಳವಳಿಗಳನ್ನು ಮೊಟಕುಗೊಳಿಸಲು ರಾಷ್ಟ್ರಕವಿ ಕುವೆಂಪು, ಹಂ.ಪ.ನಾಗರಾಜಯ್ಯ, ಹಾ.ಮಾ.ನಾಯಕ ಮೊದಲಾದ ಗಣ್ಯ ಸಾಹಿತಿಗಳು ಕರೆ ನೀಡಿದರು. ಆದರೆ ಈ ಭಾಷಾ ಸೂತ್ರದ ವಿವರಗಳು ಅದಿಕೃತವಾಗಿ ತಿಳಿದಂತೆಲ್ಲಾ ಅದರ ಕೊರತೆಗಳು ಕಂಡುಬರಲು ತೊಡಗಿದವು.

- ಕನ್ನಡವು ಗೋಕಾಕ್ ವರದಿಯು ಸ್ಪಷ್ಟ ಪಡಿಸಿದಂತೆ, ಏಕೈಕ ಪ್ರಥಮ ಭಾಷೆಯಾಗಿರಲಿಲ್ಲ.
- ವಿದ್ಯಾರ್ಥಿಗಳು ಮೂರು ಭಾಷೆಗಳನ್ನು ತಲಾ ೧೦೦ ಅಂಕಗಳಿಗೆ ನಿಗದಿಪಡಿಸಿದ್ದರಿಂದ ಕನ್ನಡಕ್ಕೆ ಅಗ್ರಸ್ಥಾನ ದೊರೆಯಲಿಲ್ಲ.
- ಮೂರನೆಯ ಭಾಷೆಯು ಪರೀಕ್ಷೆಗೆ ಕಡ್ಡಾಯವಾಗಿದ್ದರೂ, ಮುಂದೆ ಆಕಸ್ಮಾತ್ತಾಗಿ ವಿದ್ಯಾರ್ಥಿಗಳಿಂದ ಪ್ರತಿರೋದ ಬಂದರೆ, ಅದು ಈಗಿನಂತೆ ಆಟಕ್ಕುಂಟು ಲೆಕ್ಕಕ್ಕಿಲ್ಲ ವಾಗಬಹುದು. ಕನ್ನಡವನ್ನು ಮೂರನೆಯ ಭಾಷೆಯಾಗಿ ಆರಿಸಿದ್ದರೆ, ಆಗ ಕನ್ನಡ ಕಡ್ಡಾಯವಾಗುವುದು ಸಾಧ್ಯವಿರಲಿಲ್ಲ.

ಹೀಗೆ ಹೋರಾಟದ ಪ್ರಮುಖ ಉದ್ದೇಶಗಳು ಹಾಗೂ ಗೋಕಾಕ್ ವರದಿಯ ಆಶಯಗಳು ನೆರವೇರದೇ ಇದ್ದುದರಿಂದ ಕನ್ನಡಕ್ಕೆ ಪ್ರಥಮ ಸ್ಥಾನ ಸಿಕ್ಕುವವರೆಗೂ ಹೋರಾಟ ಮಾಡಬೇಕೆಂಬುದು ನಾಡಿನಾದ್ಯಂತ ಮತ್ತೆ ಮೂಡ ತೊಡಗಿತು. ಇದು ಎರಡನೇ ಹಂತದ ಹೋರಾಟಕ್ಕೆ ಪ್ರಮುಖ

ಕಾರಣವಾಯಿತು. ಕನ್ನಡಕ್ಕೆ ಅಗ್ರಸ್ಥಾನ ಎಂಬುದು ಎಲ್ಲರ ಮನದಾಸೆಯಾದುದರಿಂದ ಹೋರಾಟ ಮೊದಲ ಘಟ್ಟಕ್ಕಿಂತಲೂ ಹೆಚ್ಚು ತೀವ್ರವಾಯಿತು, ವ್ಯಾಪಕವಾಯಿತು, ಗೋಕಾಕ್ ವರದಿ ಯಥಾವತ್ತಾಗಿ ಜಾರಿಗೆ ಬರಲಿ, ಎಂಬುದು ಎಲ್ಲರ ಒಕ್ಕೂರಲಿನ ಘೋಷಣೆಯಾಯಿತು.

ಹೊಸಪೇಟೆ ತಾಲೂಕಿನಾದ್ಯಂತ ನಿರ್ಣಯಕವಾದ ಈ ಹೋರಾಟದಲ್ಲಿ ಶಿಕ್ಷಕರು, ವಕೀಲರು, ಕನ್ನಡ ಪರಹೋರಾಟಗಾರರು, ರೈತ ಮುಖಂಡರು, ಕಾರ್ಮಿಕ ಮುಖಂಡರಾದಿಯಾಗಿ ಸಮಾಜದ ಎಲ್ಲಾ ವಿಭಾಗಗಳ ಜನರು ಬೆಂಬಲ ನೀಡಿದರು. ರಾಜ್ಯದ ಹಲವು ಕಡೆ ಶಾಂತಿ ಸುವ್ಯವಸ್ಥೆಗಾಗಿ ಪ್ರತಿ ಬಂಧಕಾಜ್ಞೆಯನ್ನು ರಾಜ್ಯದ ವಿವಿಧ ಕಡೆ ವಿಧಿಸಿದ್ದರ ಹಿನ್ನೆಲೆಯಲ್ಲಿ ಸ್ಥಳೀಯವಾಗಿಯೂ ಕೆಲವು ಮುಖಂಡರನ್ನು ಬಂಧಿಸಲಾಗಿತ್ತು. ಬಂಧಿಸಿದ ನಂತರವು ಹೊಸಪೇಟೆ ನಗರ, ಅನಂತಶಯನಗುಡಿ, ಕಮಲಾಪುರ, ಕಂಪ್ಲಿ, ಮರಿಯಮ್ಮನ ಹಳ್ಳಿಗಳಲ್ಲಿ ಗೋಕಾಕ್ ವರದಿಯ ಸಂಪೂರ್ಣ ಅನುಷ್ಠಾನಕ್ಕೆ ಚಳುವಳಿಗಳ ನಡೆದವು, ಕರ್ನಾಟಕದ ಎಲ್ಲೆಡೆ ಜೈಲು ತುಂಬುವ ಕಾರ್ಯಕ್ರಮ ನಡೆಯಿತು. ಇದೇ ಸಂದರ್ಭದಲ್ಲಿ ಚಳುವಳಿಗೆ ಧುಮುಕಿ ಸಾರಥ್ಯ ವಹಿಸಿದ್ದ ಕನ್ನಡದ ಮೇರುನಟ ಡಾ॥ ರಾಜ್‌ಕುಮಾರ್ ನೇತೃತ್ವದ ಚಲನ ಚಿತ್ರ ನಟರ ತಂಡ ಇಡೀ ಕರ್ನಾಟಕದಲ್ಲಿ ಪ್ರವಾಸ ಮಾಡಿತು. ಅವರು ಪ್ರವಾಸ ಮಾಡಿದ ಊರುಗಳಲ್ಲಿ ಜನರು ತಾಂಡೋಪತಂಡವಾಗಿ ಸೇರಿದರು ಅವರ ಮನಸ್ಸಿನಲ್ಲೆಲ್ಲಾ 'ಕನ್ನಡದ ಮನೆಗೆ ಬೆಂಕಿ ಬಿದ್ದಿಗೆ' ಎಂಬ ಭಾವನೆ ಉರಿಯುತ್ತಿತ್ತು.

ಜನಮನವು ಸರಕಾರದ ವಿರುದ್ಧವಾಗಿ ತಿರುಗ ತೊಡಗಿದೆ ಎಂಬ ಗೂಡಚಾರದ ವಾರ್ತೆ ಸರ್ಕಾರದ ವರಿಷ್ಠರನ್ನು ಅಂಜಿಸಿತು. ಬಳ್ಳಾರಿ ನಗರಕ್ಕೆ ಬಂದಿದ್ದ ಈ ತಂಡ ಮೇ ೨೬ ರಂದು ಬಳ್ಳಾರಿ ನಗರದ ಭಾರೀ ಜನ ಸೇರಿದ್ದರು. ಹೊಸಪೇಟೆ ತಾಲೂಕಿನಾದ್ಯಂತ ಜನರಲ್ಲಿ ಸಂಚಲನ ಮೂಡಿಸಿತ್ತು. ಹೊಸಪೇಟೆ ತಾಲೂಕಿನಿಂದ ಸುಮಾರು ೫೦೦ ಜನರು ಭಾಗವಹಿಸಿದ್ದ ಹೊಸಪೇಟೆ, ಕಮಲಾಪುರ, ಮರಿಯಮ್ಮನಹಳ್ಳಿ, ಕಂಪ್ಲಿ ಭಾಗದಿಂದಲೂ ಬಹಳಷ್ಟು ಜನರು ಭಾಗವಹಿಸಿ ಕನ್ನಡಕ್ಕಾಗಿ ತಾವು ಯಾವುದೇ ತ್ಯಾಗಕ್ಕೂ ಸಿದ್ಧವೆಂಬುದನ್ನು ರಾಜಕುಮಾರ್‌ರವರ ಘೋಷಣೆಗೆ ಜನ ಬೆಂಬಲಿಸಿದರು.

ಡಾ॥ ರಾಜ್‌ಕುಮಾರ್‌ರವರೊಂದಿಗೆ ವಿಷ್ಣುವರ್ಧನ್ ಅನಂತನಾಗ್, ಲೋಕೇಶ್, ಅಶೋಕ್, ಸಾಹಿತಿಗಳಾದ ಚಿದಾನಂದಮೂರ್ತಿ, ನಿರ್ದೇಶಕರಾದ ಎಂ.ಎಂ. ಸತ್ಯ, ಪಿ.ವಿ.ನಾರಾಯಣ, ಪಾಟೀಲಿ ಪುಟ್ಟಪ್ಪ, ಚಂದ್ರಶೇಖರಪಾಟೀಲ ಮೊದಲಾದವರು ಭಾಗವಹಿಸಿದ್ದರು. ಸುಮಾರು ೧೦ ದಿನಗಳ ಕಾಲ ರಾಜ್ಯದಾದ್ಯಂತ ಪ್ರವಾಸ ಮಾಡಿದ ಈ ಕಲಾವಿದರ ತಂಡದ ಕೊನೆಯ ಕಾರ್ಯಕ್ರಮ ಮೇ ೧೫ ರಂದು ಬೆಂಗಳೂರಿನಲ್ಲಿ 'ಕನ್ನಡದ ಪಂಜು' ಬೆಳಗಿಸುವ ಕಾರ್ಯಕ್ರಮವನ್ನು ಹಾಕಿಕೊಂಡಿತು. ಪೊಲೀಸರ ತಡೆಗಳ ನಡುವೆ ಪಂಜು ಬೆಳಗಿಸಲು ಹೋದ ಅನೇಕ ಕಾರ್ಯಕರ್ತರು ಬಂಧನಕ್ಕೆ ಒಳಗಾದದ್ದು ಉಂಟು. ಬೆಂಗಳೂರಿನಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಹೊಸಪೇಟೆಯಿಂದ ಚಿದಾನಂದ, ಶೌಕತ್ ಅಲಿ, ಹುಸೇನ್ ತಂಬ್ರಳ್ಳಿ, ತಾಯಪ್ಪ ನಾಯಕ ಮೊದಲಾದವರು ಭಾಗವಹಿಸಿದ್ದರು.

## ೪.೩ : ದಲಿತ ಸಾಂಘಿಕ ನೆಲೆ

ಹೊಸಪೇಟೆ ತಾಲೂಕಿನ ಪ್ರಾದೇಶಿಕ ದಲಿತ ಸಾಂಘಿಕ ನೆಲೆಗಳು ಅದರಿಂದಾದ ಸಾಂಘಿಕ ಚಳುವಳಿಗಳು, ಚಳುವಳಿಗಳಿಂದಾದಂಥಹ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಂಸ್ಕೃತಿಕ ಬದಲಾವಣೆಗಳನ್ನು ವಿವರವಾಗಿ ಪರಿಶೀಲಿಸುವ ಮುನ್ನ ದಲಿತರ ಚಾರಿತ್ರಿಕ ಹಿನ್ನೆಲೆಯ ಮೇಲೆ ಸ್ವಲ್ಪ ಬೆಳಕು ಚೆಲ್ಲುವುದು ಅಧ್ಯಯನದ ದೃಷ್ಠಿಯಿಂದ ಅವಶ್ಯಕವಾಗಿದೆ.

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ದಲಿತರ ಏಳಿಗೆಯ ಬಗ್ಗೆ, ಹರಿಜನರ ಸರ್ವತೋಮುಖ ಬೆಳವಣಿಗೆ ಮತ್ತು ಅಸ್ಪೃಶ್ಯತೆಯಂತಹ ಅನಿಷ್ಠ ಪದ್ಧತಿಯ ವಿರುದ್ಧ ಜನಜಾಗೃತಿ ಉಂಟು ಮಾಡುವ ಪ್ರಯತ್ನಗಳು ನಡೆದಿದ್ದವು. ಅದರಲ್ಲೂ ಅಸ್ಪೃಶ್ಯತೆಯಂತ ಅನಿಷ್ಠ ಪದ್ಧತಿಯ ವಿರುದ್ಧ ಕ್ರಿ.ಪೂ. ೫೦೦ರ ಬುದ್ಧನ ಕಾಲದಿಂದಲೇ ಕಾಣಬಹುದು. ಆಧ್ಯಾತ್ಮಕ ಮತ್ತು ತಾತ್ವಿಕ ವಿರೋಧಿಗಳು ಅಸ್ಪೃಶ್ಯತೆಯನ್ನು ಶತಶತ ಮಾನಗಳಿಂದಲೂ ವಿರೋಧಿಸಿದರೂ ಅಸ್ಪೃಶ್ಯತೆಯನ್ನು ನಿಲ್ಲಿಸಲು ಈವರೆಗೂ ಸಾಧ್ಯವಾಗಲಿಲ್ಲ. ಭಾರತ ತುಂಬೆಲ್ಲ ಸ್ವಾತಂತ್ರ್ಯ ಪೂರ್ವ ಮತ್ತು ಅನಂತರ ದಲಿತರ ಮೇಲಿನ ದೌರ್ಜನ್ಯಗಳನ್ನು ಪ್ರತಿಭಟಿಸುವ ಬ್ರಿಟೀಷ್ ಆಡಳಿತದ ವಿರುದ್ಧ ದಲಿತರಲ್ಲಿ ಎಚ್ಚರ ಮೂಡಿಸಿ ದೇಶದಾದ್ಯಂತ ಚಳುವಳಿಗೆ ಶಕ್ತಿ ತುಂಬುವ ಪ್ರಯತ್ನಗಳು ನಡೆದವು. ಚಳುವಳಿಯೊಂದು ಸಶಸ್ತೀಕರಣಗೊಂಡು ಅದು ದಲಿತ ಚಳುವಳಿ ಎಂದು ಗುರುತಿಸಿಕೊಂಡಿದ್ದು ಡಾ॥ ಬಾಬಾ ಸಾಹೇಬ ಅಂಬೇಡ್ಕರ್‌ಯುಗದಲ್ಲಿ, ಸಮಾಜದಲ್ಲಿ ಅಂಟಿಕೊಂಡಿದ್ದ ಕಳಂಕವಾದ ಅಸ್ಪೃಶ್ಯತೆ ಆಚರಣೆಯ ವಿರುದ್ಧ ಸಿಡಿದೆದ್ದು, ಜನರನ್ನು ಸಂಘಟಿಸುತ್ತ ದಲಿತರ ಉದ್ಧಾರಕ್ಕಾಗಿ ದನಿ ಎತ್ತಿದ ಮಹಾ ಮಾನವತಾವಾದಿ ಡಾ॥ ಬಿ. ಆರ್. ಅಂಬೇಡ್ಕರ್ ದಲಿತರಿಗೆಲ್ಲಾ ಸ್ವಾಭಿಮಾನದ ಕಿಚ್ಚನ್ನು ಮೂಡಿಸುತ್ತಾ, ಜಾಗೃತಗೊಳಿಸಿ, ಶಿಕ್ಷಣ, ಹೋರಾಟ, ಸಂಘಟನೆಯ ಬೀಜ ಬಿತ್ತಿ ದಲಿತ ಚಳುವಳಿಗೆ ಪ್ರೇರಣೆ ನೀಡಿದರು. ಅದಕ್ಕೆ ಭದ್ರ ಬುನಾಧಿ ಹಾಕಿದರು. ಅದಕ್ಕೊಂದು ಹೊಸ ಸಾಂಘಿಕ ಆಯಾಮವನ್ನು ನೀಡಿದರು.

ಭಾರತದಲ್ಲಿ ದಲಿತ ಚಳುವಳಿ ಕಾಣಿಸಿಕೊಂಡಿದ್ದು ಕ್ರಿ.ಶ. ೧೯೨೦ರ ಸುಮಾರಿಗೆ ಪಂಜಾಬಿನ ಆಬ್‌ಧಾರ್ಮಿಕ ಚಳುವಳಿ, ಮಹಾರಾಷ್ಟ್ರದಲ್ಲಿ ಅಂಬೇಡ್ಕರ್‌ರವರ ಚಳುವಳಿ, ಬಂಗಾಲದಲ್ಲಿ ನಾಮಶೂದ್ರ ಚಳುವಳಿ, ತಮಿಳುನಾಡಿನಲ್ಲಿ ಆದಿ ದ್ರಾವಿಡ ಚಳುವಳಿ, ಆಂಧ್ರ ಚಳುವಳಿ, ಕೇರಳದಲ್ಲಿ ಪುಲಯ ಮತ್ತು ಚೆರಮಾ ಸಂಘಟನೆಗಳು ಮಾಡಿದ ಪ್ರತಿಭಟನೆಗಳು ಗಮನಾರ್ಹ ಚಳುವಳಿಗಳು.

ದಲಿತರಲ್ಲಿ ಮೂಡುತ್ತಿರುವ ಜಾಗೃತಿಯಿಂದಾಗಿ ಕಾಣದಿದ್ದ ದಲಿತ ಶೋಷಿತ, ಶೋಷಕರ ನಡುವಿನ ಹೋರಾಟಗಳು ಹೆಚ್ಚಾಗುತ್ತಿವೆ. ಅಸ್ಪಶ್ಯತೆ ಎನ್ನುವುದು ಭಾರತಕ್ಕೆ ವಿಶಿಷ್ಠವಾದ ಪಿಡುಗಾಗಿದೆ. ಬೇರೆ ದೇಶಗಳಲ್ಲಿಯೂ ಸಹ ಕೆಲವು ಗುಂಪುಗಳನ್ನು ಅಲ್ಲಿನ ಬ್ರಾಹ್ಮಣವನ್ನು ಆಳವಡಿಸಿಕೊಂಡಿರುವ ಜನರು ಹೀನಾಯವಾಗಿ ಕಂಡಿರುವುದುಂಟು. ಉದಾಹರಣೆಗೆ ಅಮೇರಿಕಾ, ಆಫ್ರಿಕಾ ದೇಶದ ಕಪ್ಪು ಜನರು ಬಿಳಿಯರಿಂದ ಪಟ್ಟ ಬವಣೆ, ಅನುಭವಿಸಿದ ದೈಹಿಕ ಯಾತನೆ, ಹರಿಸಿದ ಕಣ್ಣೀರು ಇತಿಹಾಸದಿಂದ ನಮಗೆಲ್ಲಾ

ತಿಳಿದ ವಿಷಯವೆ. ಆದರೆ ಭಾರತದ ಮೂಲ ನಿವಾಸಗಳೆಂದೇ ಹೇಳಲಾಗುವ ಅಸ್ಪೃಶ್ಯರನ್ನು ಮುಟ್ಟಲೂ ಯೋಗ್ಯರಲ್ಲವೆಂದು ಊರಿನಿಂದ ಹೊರಗೆ ಇಟ್ಟ ಉದಾಹರಣೆ ಭಾರತವನ್ನು ಬಿಟ್ಟರೆ ಬೇರೆಲ್ಲೂ ದೊರಕಲಾರದು. ಭಾರತದಲ್ಲಿ ಮುಟ್ಟಿದರೆ ಮೈಲಿಗೆಯಾಗುವ ೪೨೯ ಜಾತಿಗಳಿವೆ ಎಂದು ಡಾ। ಎಂ. ಚಿದಾನಂದ ಮೂರ್ತಿಯವರು ಬರೆದಿರುವ ಮದ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ ಕೃತಿಯಲ್ಲಿ ಹೇಳಿದ್ದಾರೆ.

ಡಾ॥ ಎಂ. ಚಿದಾನಂದ ಮೂರ್ತಿಯವರು ಹೇಳುವಂತೆ "ಅಸ್ಪೃಶ್ಯತೆ ಜಾತಿ ವ್ಯವಸ್ಥೆಯ ಒಂದು ವಿಶಿಷ್ಠ ಆಯಾಮ, ಜಾತಿ ವ್ಯವಸ್ಥೆಯ ಮೂಲದಲ್ಲಿ ಮಡಿ, ಮೈಲಿಗಳ ಕಲ್ಪನೆ, ಮೇಲು ಕೀಳುಗಳ ಕಲ್ಪನೆ, ಗೋತ್ರವಿವಾಹದ ಕಲ್ಪನೆಗಳಿವೆ. ಪ್ರತಿಯೊಂದು ಜಾತಿಯೂ ಬ್ರಾಹ್ಮಣನನ್ನು ಕೇಂದ್ರವಾಗಿಟ್ಟುಕೊಂಡು ಅಥವಾ ತೀರ ಮೇಲೆ ಇಟ್ಟು ತನ್ನ ಸ್ಥಾನವನ್ನು ನಿರ್ಣಯಿಸಿ ಕೊಳ್ಳುತ್ತದೆ. ಬ್ರಾಹ್ಮಣನಿಗೆ ತನಗಿಂತ ಕೆಳಗಿನ ಎಲ್ಲರೂ ಒಂದಲ್ಲ ಒಂದು ಪ್ರಮಾಣದಲ್ಲಿ ಮೈಲಿಗೆ ಉಂಟು ಮಾಡು ಮಾಡುವವರೆ. ಹಾಗೆ ನೋಡಿದರೆ ಮೈಲಿಗೆಯ ಕಲ್ಪನೆ ವಿಶ್ವ ಸಾಮಾನ್ಯವಾದುದು. ಹುಟ್ಟು, ಋತುಸ್ರಾವ, ಸಾವು, ಗರ್ಭಧಾರಣೆ ಇವುಗಳಿಗೆ ಸಂಬಂಧಿಸಿದಂತೆ ಅಶೌಚದ ಭಾವನೆ ಎಲ್ಲಾ ದೇಶಗಳಲ್ಲು ಕಂಡು ಬರುತ್ತದೆ. ಆದರೆ ಅಸ್ಪಶ್ಯ ಉಂಟು ಮಾಡುವ ಮೈಲಿಗೆ ತೀವ್ರ ಸ್ವರೂಪದ್ದು ಭಯಾನಕವಾದದ್ದು ಅಶೌಚ ಅಥವಾ ಮೈಲಿಗೆ ಸಾಮಾನ್ಯವಾಗಿ ತಾತ್ಕಾಲಿಕವಾದದ್ದು ಕೆಲವು ವ್ಯಕ್ತಿ ಅಥವಾ ವಸ್ತುಗಳು ಒಂದು ನಿರ್ಧಿಷ್ಟ ಅವಧಿ ಮುಗಿದರೆ ಮೈಲಿಗೆ ಕೊನೆಗೊಳ್ಳುತ್ತದೆ. ಆದರೆ ಅಸ್ಪೃಶ್ಯತೆಯು ಅಸ್ಪೃಶ್ಯರಿಗೆ ಶಾಶ್ವತವಾಗಿ ಅಂಟಿದ ಶಾಪ ಅವರನ್ನು ಹಿಂದೂಗಳು ಶುಚಿಗೊಳಿಸುವ ಕ್ರಿಯಾ ವಿಧಿಗಳ ಮೂಲಕ ಶುದ್ಧವಾಗಬಹುದು. ಆದರೆ ಆಸ್ಪೃಶ್ಯರನ್ನು ಶುದ್ಧಗೊಳಿಸುವಂತಹದ್ದು ಇಲ್ಲವೇ ಇಲ್ಲ ಎಂಬ ಮಹತ್ವದ ಹೇಳಿಕೆಯನ್ನು ದಾಖಲಿಸಿದ್ದಾರೆ.

ಅಸ್ಪಶ್ಯರ ಕುರಿತು ಡಾ॥ ಬಿ. ಆರ್. ಅಂಬೇಡ್ಕರ್‌ರವರ ಮಾತು ಈ ರೀತಿ ಇದೆ.

Deflement as observed by the primitive society was of a temporary duration which arise during particulars time such as the performance of natural functions such as eating, drinking etc., or a natural crisis in the life of the individual such as birth, death menstruation etc., After the period of defirement varished and the individual become pure and associable. But the impurity of the 50-60 millions of the untouchables of India, quite unlike the impurity arising from birth, death etc., is permanent. The Hindus who touch them and became polluted thereby become pure by under going purificatory aremonies. But there is nothing which can make the untouchable pure, they are born impure, theya re impure while they live. They die the death of the impure, and they give birth to children who are

born with the stigma of untouchability affixed by them. It in a case or permanent, hereditary stain which nothing can cleanse (B.R.Ambedakar. The vatouchables who were they and why they become untouchables Balarampur – 197 Page 26-7) ಎಂದು ಸಾವಿರಾರು ಶತಮಾನದ ಅಸ್ಪೃಶ್ಯತೆಗೆ ಉತ್ತರ ನೀಡಿರುವುದು ಕಂಡು ಬರುತ್ತದೆ. ಸಾಮಾಜಿಕ ನ್ಯಾಯದ ಪರಿಕಲ್ಪನೆ.

ಸಾಮಾಜಿಕ ನ್ಯಾಯ ಎಂಬ ಪ್ರಶ್ನೆಗೆ ಉತ್ತರ ಸಲಭವೂ ಹೌದು ಹಾಗೆಯೇ ಕಠಿಣವು ಹೌದು. ಅಲಸ್ ಡೈರ್ (Alasdyre) ಅವರ ಪ್ರಕಾರ ಸಾಮಾಜಿಕ ನ್ಯಾಯ ಎಂಬುದು ಒಳಿತು, ನಿಷ್ಪಕ್ಷಪಾತ ಎಂಬ ಪದಕ್ಕೆ ಸಮಾನವಾದ ಪದ. ಹಾಗಾದರೆ ಬೇರೆಯವರಿಗೆ ನ್ಯಾಯ ಸಲ್ಲಿಸುವುದು, ಒಳಿತು ಮಾಡುವುದು, ಅವರವರಿಗೆ ತಕ್ಕ ಸ್ಥಾನಮಾನವನ್ನು ನೀಡುವದು 'ಅರ್ಹತೆ' ಎಂಬುದು 'ನ್ಯಾಯ' ಪರಿಕಲ್ಪನೆಯ ಒಂದು ಅಂಶ. ಆದರೆ ಈ ಅರ್ಹತೆಗೆ 'ತಕ್ಕ' ಎಂಬುದು ಪರಂಪರೆಯಿಂದ ಪರಂಪರೆಗೆ ಭಿನ್ನವಾಗುತ್ತದೆ. ಉದಾಹರಣೆಗೆ ಕರ್ಮಸಿಧ್ಧಾಂತದ ಪ್ರಕಾರ ಅವರವರಿಗೆ ತಕ್ಕಸ್ಥಿತಿ ತನ್ನಿಂದ ತಾನೇ ಉಂಟಾಗುತ್ತದೆ. ಅಂದರೆ ಅವರವರ ಕರ್ಮದ ಪರಿಣಾಮವಾಗಿ ಅವರವರಿಗೆ ಸ್ಥಾನ ಲಭ್ಯವಾಗುತ್ತದೆ. ಆದರೆ ನಾವು ವ್ಯಾಖ್ಯಾನಿಸುವ ವಿಚಾರವಾದ ಈ ರೀತಿ ಈ ಬಗೆಯದಲ್ಲಿ ಎಂದು ಮೈನಲ್ ಮಿರಿ ಹೇಳುತ್ತಾರೆ (The Meaning of Justice ಪೂರ್ವೋಕ್ತ)

ಸ್ವಾತಂತ್ರ್ಯವೆನ್ನುವುದು ಮತ್ತೇನನ್ನೋ ಸೂಚಿಸಲಿ ಬಿಡಲಿ, ಹಲವರಲ್ಲಿ ಬೇಕಾದದ್ದನ್ನು ಆಯ್ಕೆ ಮಾಡಿಕೊಳ್ಳುವ ಅಧಿಕಾರವನ್ನಂತೂ ನಿಶ್ಚಿತವಾಗಿ ಸೂಚಿಸುತ್ತದೆ. ಆಯ್ಕೆಯಾದರೆ ನಿಜವಾದ ಆಯ್ಕೆ ನಾಮಮಾತ್ರವಾದುದ್ದಲ್ಲಿ. ಅಂದರೆ ವಾಸ್ತವವಾಗಿಯೂ ಹಲವಾರು ವಸ್ತುಗಳು ಎದುರಿನಲ್ಲಿದ್ದು ಅವುಗಳಲ್ಲಿ ತನಗೆ ಬೇಕಾದದ್ದನ್ನು ಆಯ್ಕೆ ಮಾಡಿಕೊಳ್ಳುಬಹುದಾದ ನಿಜವಾದ ಅಧಿಕಾರ ಕಾಗದದ ಮೇಲಷ್ಟೇ ನಮೂದಾಗಿರುವ ಅಮೂರ್ತ ಅಧಿಕಾರದಲ್ಲಿ ಸ್ವಾತಂತ್ರ್ಯದ ಅರ್ಥ, ಸಂಕ್ಷೇಪವಾಗಿ ನಿಶ್ಚಿತ ಸಂದರ್ಭದ ನಿಶ್ಚಿತ ಕ್ಷಣದಲ್ಲಿ ನಿಶ್ಚಿತವಾದ ಯಾವುದೋ ಒಂದನ್ನು ಮಾಡಲು ಅಥವಾ ಮಾಡದೇ ಇರಲು ನಮಗೆ ಅಧಿಕಾರವಿರುವುದು. ಹಾಗಿಲ್ಲದಿದ್ದಲ್ಲಿ ಸ್ವಾತಂತ್ರ್ಯವೆಂಬುದಕ್ಕೆ ಅರ್ಥವೇ ಇಲ್ಲ, ಚಿಂತನೆ, ಕ್ರಿಯೆ, ಸಂಕಲ್ಪ ಇವುಗಳಿದ್ದಲ್ಲಿ ಮನುಷ್ಯ ಪೂರ್ಣ ಮನುಷ್ಯವಾಗುತ್ತಾನೆ ಎನ್ನುತ್ತಾರೆ. ಕಾವ್ಯಬಿಟ್ಟು ದಿನ ನಿತ್ಯದ ಬದುಕಿನ ಗದ್ಯದಲ್ಲಿ ಸ್ವಾತಂತ್ರ್ಯವೆನ್ನುವುದು ಬದುಕಿನ ಒಂದು ಅಂಗ. ವಾಸ್ತವಾದದ್ದು ಮತ್ತು ಕ್ರಿಯಾ ರೂಪ ಉಳ್ಳದ್ದು. ಪ್ರತಿಯೊಬ್ಬ ವ್ಯಕ್ತಿಗೂ ಕೆಲವೊಂದು ನಿಶ್ಚಿತವಾದ ಅಗತ್ಯಗಳಿವೆ ಬದುಕಿರಲು ಬೇಕಾದ ಭೌತಿಕ ವಸ್ತು ಸರಕುಗಳಿಂದ ಮೊದಲುಗೊಂಡು ಮಾತು ಬರವಣಿಗೆಗಳ ಮೂಲಕ ತನ್ನನ್ನು ಅಭಿವ್ಯಕ್ತಗೊಳಿಸಿಕೊಳ್ಳವ ಅಗತ್ಯದ ತನಕ. ಸಾರ್ವಜನಿಕ ಆಸಕ್ತಿಯ ವ್ಯವಹಾರಗಳಲ್ಲಿ ತಾನು ಪಾಲುಗೊಳ್ಳಬೇಕೆಂಬ ಅಗತ್ಯದ ತನಕ, ತನ್ನದೇ ರೀತಿಯಲ್ಲಿ ತನ್ನ ದೇವರನ್ನು ಪೂಜಿಸುವ ಅಥವಾ ಪೂಜಿಸುವುದಿಲ್ಲ ಎಂದು ನಿಷೇದಿಸುವ ತನಕ ಒಂದೇ ಮಟ್ಟದವರಾಗಿರುವುದಿಲ್ಲ, ಎಲ್ಲರೂ ಉಚ್ಚರೂ

ಅಥವಾ ನೀಚರು ಆಗಿದ್ದಾಗ ಮಾತ್ರ ಅವರಿಗೆ ಸಾಧಾರಣವಾದ ಕ್ರಿಯೆ ಹುಟ್ಟುವುದು ಸಾಧ್ಯ. ತಾರತಮ್ಯವುಳ್ಳ ಅಸಮಾನತೆಯ ವ್ಯವಸ್ಥೆಯಲ್ಲಿ ಉಚ್ಚ ಉತ್ತಮರು ಇದ್ದಾರೆ. ಅವರ ಕೆಳಗೆ ಉಚ್ಚ ಮಧ್ಯಮರು ಕ್ಷತ್ರಿಯರು ಹಾಗೂ ಅವರ ಕೆಳಗೆ ಉಚ್ಚರು (ವೈಶ್ಯರು) ಇದ್ದಾರೆ. ಈ ಉಚ್ಚರ ಕೆಳಗೆ ನೀಚರು ಶೂದ್ರರು ಮತ್ತು ನೀಚರ ಕೆಳಗೆ ಕನಿಷ್ಠ ಅಸ್ಪೃಶ್ಯರೂ ಇದ್ದಾರೆ. ಆದರೆ ಇವರೆಲ್ಲರಿಗೂ ಉಚ್ಚ ಉತ್ತಮರೆಂದು ಕರೆಸಿಕೊಳ್ಳುವವರ ಬಗ್ಗೆ ಅಸಮಾಧಾನವಿದೆ, ಹಾಗೂ ಅವರನ್ನು ಕೆಳಗೆ ಬೀಳಿಸುವ ಹಂಬಲವೂ ಇದೆ. ಆದರೆ ಅವರೆಲ್ಲ ಒಟ್ಟಾಗುವುದು ಕಷ್ಟ. ಇಲ್ಲಿ ಉಚ್ಚ ಮದ್ಯಮರು, ಉಚ್ಚ ಉತ್ತಮರನ್ನು ನಿವಾರಿಸಬಯಸುತ್ತಾರೆ. ಆದರೆ ಅವರು ಉಚ್ಚ, ನೀಚ, ನೀಚ, ಕನಿಷ್ಟರೊಂದಿಗೆ ಸೇರಬಯಸುವುದಿಲ್ಲ. ಹಾಗೆ ಸೇರಿದರೆ ಅವರೂ ತಮ್ಮೊಂದಿಗೆ ಕೂಡಿ ಸಮಾನರಾಗುತ್ತಾರೆಂಬ ಭಯವಿದೆ. ಉಚ್ಚರಿಗೆ ಉಚ್ಚ ಮಧ್ಯಮರನ್ನು ಕೆಡವಬೇಕೆಂದಿದೆ. ಆದರೆ ಅವರು ವೀರ, ನೀಚ ಕನಿಷ್ಠರೊಂದಿಗೆ ಕೈಗೂಡಿಸುವುದಿಲ್ಲ, ಕಾರಣ, ಅವರು ಮೇಲೆ ಬಂದು ತಮ್ಮ ಸಮಾನ ಸ್ಥಾನಮಾನ ಗಳಿಸಿಬಿಡುತ್ತಾರೆಂಬ ಭಯ ಅವರಲ್ಲಿ ಕಾಡುತ್ತಿರುತ್ತದೆ. ಇನ್ನೂ ನೀಚನಿಗೆ ಉಚ್ಛ, ಉಚ್ಛ ಮಧ್ಯಮ, ಉಚ್ಚ ಉತ್ತಮರನ್ನು ಕೆಳಗಿಳಿಯುವ ಹಂಬಲವಂತೂ ಹೆಚ್ಚಾಗಿಯೇ ಇದೆ. ಆದರೆ ನೀಚ ಕನಿಷ್ಠ ನೊಂದಿಗೆ ಸೇರಿದರೆ ನೀಚನಿಂದ ಅವನೊಡನೆ ಸೇರಲು ಸಿದ್ಧನಿಲ್ಲ. ಹೀಗಿರುವಾಗ ಸಮಾಜದಲ್ಲಿ ಸಮಾನತೆ ಸಾಧ್ಯವೆ? ಸಾಮಾಜಿಕ ವ್ಯಯ ಎಲ್ಲರಿಗೂ ಸಮಾನವಾಗಿ ದೊರಕಲು ಸಾಧ್ಯವೆ ?.

ಈ ದೇಶದಲ್ಲಿ ಎಲ್ಲರಿಗೂ ಸಾಮಾಜಿಕ ನ್ಯಾಯ ದೊರಕುವುದು ಸಾಧ್ಯವಾಗದ ಮಾತೇ ಸರಿ. ಏಕೆಂದರೆ ಅಸ್ಪೃಶ್ಯತೆ ಮಾಯವಾಗುವುದು ಒಟ್ಟಾರೆ ಹಿಂದೂ ಸಮಾಜ ವ್ಯವಸ್ಥೆ ಅದರಲ್ಲಿಯೂ ಮುಖ್ಯವಾಗಿ ಜಾತಿ ಪದ್ಧತಿ ಪೂರ್ಣ ನಿರ್ಣಾಮವಾದಾಗ ಮಾತ್ರ. ಇದು ಭಾರತದಂತಹ ರಾಷ್ಟ್ರದಲ್ಲಿ ಸಾಧ್ಯವೆ ?.

ಡಾ॥ ಬಿ. ಆರ್. ಅಂಬೇಡ್ಕರ್ ಈ ದೇಶದ ಚರಿತ್ರೆಯಲ್ಲಿಯೇ ದಲಿತರ ಸ್ಫೂರ್ತಿಯ ಬಿಂದುವಾಗಿದ್ದರು ಎಂಬುದು ನಮಗೆಲ್ಲಾ ಗೊತ್ತು. ಇವರ ಗೆಳೆಯರಾಗಿದ್ದಂತಹ ಸೋಹನ್‌ಲಾಲ್ ಶಾಸ್ತ್ರಿ ಎಂಬುವವರು ಗ್ರಂಥವನ್ನು ಬರೆದು ಓದುಗರ ಮುಂದಿಟ್ಟಿದ್ದಾರೆ. ಈ ಗ್ರಂಥದ ಒಂದು ಘಟನೆಯನ್ನು ಸ್ಮರಿಸುವುದು ಸೂಕ್ತವಾಗಿದೆ. ಮದನ ಮೋಹನ ಮಾಳವೀಯ (ಬನಾರಸ್ ವಿಶ್ವ ವಿದ್ಯಾಲಯದ ಶ್ರೇಷ್ಠ ಶಿಕ್ಷಣ ತಜ್ಞರು) ಒಮ್ಮೆ ಅಂಬೇಡ್ಕರ್‌ರವನ್ನು ಕುರಿತು ಈ ರೀತಿ ಹೇಳಿದರು. ನೋಡಿ ಮಿಸ್ಟರ್ ಅಂಬೇಡ್ಕರ್ ನಿಮ್ಮ ಜನರೆಲ್ಲಾ ಕಪ್ಪಾಗಿರುವುದರಿಂದ ಸವರ್ಣೀಯರ ಅಪಹಾಸ್ಯ, ಅವಹೇಳನಕ್ಕೆ ಗುರಿಯಾಗಿದ್ದಾರೆ. ನನಗೊಂದು ಉಪಾಯ ಹೊಳೆದಿದೆ, ನಿಮ್ಮ ಹೆಂಗಸರೆಲ್ಲಾ ಗರ್ಭವತಿಯರಾದಾಗ ಜಾರಿಕಾಯಿ ಸಿಪ್ಪೆಯ ಪೌಡರ್ ಮಾಡಿಸಿ ತಿನ್ನಲು ಕೊಟ್ಟರೆ, ಹುಟ್ಟುವವರೆಲ್ಲಾ ಬೆಳ್ಳಗಿರುತ್ತಾರೆ. ಸವರ್ಣೀಯರಾರು ಅಸಹ್ಯಪಡಲಾರರು ಎಂದು ಸಲಹೆ ನೀಡಿದರಂತೆ. ಡಾ॥ ಬಿ. ಆರ್. ಅಂಬೇಡ್ಕರ್ ತಕ್ಷಣವೇ ಅವರಿಗೆ ತೀಕ್ಷ್ಣವಾಗಿ ಉತ್ತರಿಸಿದರಂತೆ, ದಕ್ಷಿಣ ಭಾರತದ ಆಂಧ್ರ, ಮೈಸೂರು, ಕೇರಳ, ಮದ್ರಾಸ್ ಪ್ರಾಂತಗಳು ವ್ಯಕ್ತಿಯ ಸ್ವಾಸ್ಥ್ಯ ಉಳಿಸಿಕೊಳ್ಳಲಿಕ್ಕೆ ಈ ಅಗತ್ಯಗಳನ್ನು ಪೂರೈಸಿಕೊಳ್ಳ

ಬೇಕಾಗುತ್ತದೆ. ಸಂಕ್ಷೇಪದಲ್ಲಿ ಸಾರಾಂಶ ಹೇಳುವುದಾದರೆ ಒಬ್ಬ ವ್ಯಕ್ತಿಯ ಸ್ವಾತಂತ್ರ್ಯವೆಂಬುದು, ನಿಸರ್ಗದ ಮಿತಿಯಲ್ಲಿ ಮತ್ತು ತನ್ನ ಹಾಗೇ ಬದುಕುವ ಇತರ ಸಹಾವಾಸಿಗಳಿಗೂ ಇಂಥಹ ಫಲಾನುಭವ ಸಿಗಬೇಕಾಗುವ ಮಿತಿಯಲ್ಲಿ, ತನ್ನ ಭೌತಿಕ ಹಾಗೂ ಭೌತಿಕೇತರ ಅಗತ್ಯಗಳನ್ನು ಪೂರೈಸಿಕೊಳ್ಳಲಿಕ್ಕೆ ಸಿಗುವ ಅಧಿಕಾರ '' ಎಂದು ಡಾ॥ ಅಂಬೇಡ್ಕರ್‌ರವರು ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ವಿಶ್ಲೇಷಿಸುತ್ತಾರೆ.

ಭಾರತದಲ್ಲಿರುವ ಅಸ್ಪೃಶ್ಯತೆಯು ಕಾನೂನಿನ ಅಥವಾ ವೈಚಾರಿಕವಾದ ತಂತ್ರದಿಂದ ನಿವಾರಣೆಯಾಗುವುದಿಲ್ಲ ಎನ್ನುವುದು ಇನ್ನೊಂದು ಕಾರಣವಿದೆ. ಮೊದಲೇ ಪ್ರಸ್ತಾಪಿಸಿರುವ ಹಾಗೆ ಈ ಹಿಂದೂ ಸಮಾಜದ ಜಾತಿ ವ್ಯವಸ್ಥೆ ನಿಂತಿರುವುದು ತಾರತಮ್ಯವಿರುವ ಅಸಮಾನತೆಯ ತಳಹದಿಯ ಮೇಲೆ. ಆದರೆ ಈ ವೈಶಿಷ್ಟ್ಯತೆಯನ್ನು ಹಲವರು ಸರಿಯಾಗಿ ಅರ್ಥ ಮಾಡಿಕೊಳ್ಳುವುದಿಲ್ಲ ಎಂದರೆ ಉತ್ಪ್ರೇಕ್ಷೆಯಾಗಲಾರದು ಅಸಮಾನತೆಯಿಂದ ತುಂಬಿರುವ ಸಮಾಜ ವ್ಯವಸ್ಥೆಗೂ ಹಾಗೂ ತಾರಾತಮ್ಯಗಳ ಅಸಮಾನತೆಯ ಮೇಲೆ ನಿಂತಿರುವ ಸಮಾಜ ವ್ಯವಸ್ಥೆಗೂ ಅದರ ಬುಡದಲ್ಲಿಯೇ ವ್ಯತ್ಯಾಸಗಳಿವೆ. ಮೊದಲನೆಯದಾಗಿ ದುರ್ಬಲ ಹಾಗಾಗಿ ತನ್ನಿಂದ ತಾನೇ ಮುಂದುವರೆದುಕೊಂಡು ಹೋಗಲಾರದು. ಆದರೆ ಎರಡನೆಯದು ತನ್ನಿಂದ ತಾನೇ ರಕ್ಷಿಸಿಕೊಂಡು ಮುಂದುವರಿಯ ಬಲ್ಲದು. ಅಸಮಾನತೆಯನ್ನು ಆಧರಿಸಿದ ಕೆಳವರ್ಗಗಳು ಒಟ್ಟಾಗಿ ಇಡೀ ವ್ಯವಸ್ಥೆಯನ್ನು ಕಿತ್ತೊಗೆಯಲು ಸಾಧ್ಯ. ಏಕೆಂದರೆ ಕೆಳವರ್ಗದ ಯಾರಿಗೂ ಅದನ್ನು ಹಾಗೇ ಮುಂದುವರೆಸುವ ಆಸಕ್ತಿ ಇರುವುದಿಲ್ಲ. ತಾರತಮ್ಯವುಳ್ಳ ಅಸಮಾನತೆಯ ಮೇಲೆ ನಿಂತಿರುವ ಸಮಾಜ ವ್ಯವಸ್ಥೆಯಲ್ಲಿ ಶೋಷಿತರೆಲ್ಲಾ ಒಟ್ಟಾಗಿ ಉಳಿದವರನ್ನು ಎದುರಿಸುವ ಸಾಧ್ಯತೆ ಇಲ್ಲವೇ ಇಲ್ಲ. ಪ್ರಮುಖವಾದ ಸಂಗತಿಯೆಂದರೆ ಇಲ್ಲಿ ತಾರತಮ್ಯವುಳ್ಳ ಅಸಮಾನತೆಯ ವ್ಯವಸ್ಥೆಯಲ್ಲಿ ಶೋಷಿತ ಜನರೆಲ್ಲಾ ಬ್ರಾಹ್ಮಣರು ದಲಿತರಿಗಿಂತಲೂ ಕಪ್ಪಾಗಿದ್ದಾರೆ. ಆದ್ದರಿಂದ ತಾವು ತಮ್ಮ ಜನಾಂಗದ ಗರ್ಭವತಿಯರಿಗೆ ಈ ಪೌಡರ್ ಕೊಟ್ಟು ಏಕೆ ಮೊದಲು ಈ ಪ್ರಯೋಗ ಮಾಡಬಾರದೆಂದು ಎಂದು ಹೇಳಿದರು. ಇಲ್ಲಿ ಯಾವುದೇ ವೈಜ್ಞಾನಿಕ ಕಾರಣವಿಲ್ಲದೇ ಅಸ್ಪೃಶ್ಯತೆಯನ್ನು ಆಚರಿಸಿಕೊಂಡು ಬರುತ್ತಿರುವ ಈ ಅಸ್ಪೃಶ್ಯರಿಗೆ ಒಂದು ಕುಂಟು ನೆಪವನ್ನು ಇಡಲು ನೋಡಿದವರಿಗೆ ಅಂಬೇಡ್ಕರ್ ಕೊಟ್ಟ ಉತ್ತರದಲ್ಲಿ ವ್ಯಂಗ್ಯವಿದೆ, ಆಕ್ರೋಶವಿದೆ. ಹಾಗೆಯೇ ಇತಿಹಾಸವನ್ನು ಕರತಾಮಲಕ ಮಾಡಿಕೊಂಡ ವಿದ್ವತ್ತಿದೆ. ಪ್ರಮುಖವಾಗಿ ತನ್ನ ಜನಾಂಗದ ಜೊತೆ ತನ್ನನ್ನು ಗುರುತಿಸಿಕೊಳ್ಳುವ ಕಳಕಳಿ ಇದೆ. ಈ ಮಾತಿನ ಮೂಲಕ ತನ್ನ ಜನಾಂಗಕ್ಕೆ ಯುಗ ಯುಗಗಳಿಂದಲೂ ಆಗಿರುವ, ಆಗುತ್ತಿರುವ ಅನ್ಯಾಯಕ್ಕಾಗಿ ವೇದನೆ ಪಡುತ್ತಾ ನ್ಯಾಯಕ್ಕಾಗಿ ಆಗ್ರಹ ಪಡಿಸುವಂತಹ ನ್ಯಾಯವಾದಿಯ ಒಟ್ಟುಧೋರಣೆ ಈ ಮಾತುಗಳಲ್ಲಿ ಎದ್ದು ಕಾಣುತ್ತದೆ.

ಸ್ವಾತಂತ್ರ್ಯ ಹೋರಾಟಗಾರರ ಅವಿರತ ಪ್ರಯತ್ನದ ಫಲವಾಗಿ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ದೇಶದ ಎಲ್ಲಾ ಜನಗಳಿಗೂ ಸಮಾನವಾದ ಸ್ಥಾನ ಮಾನ, ಹಕ್ಕು ಬಾಧ್ಯತೆಗಳನ್ನು ಕಲ್ಪಿಸಿಕೊಳ್ಳಲು ಲಿಖಿತ ಸಂವಿಧಾನ ಅಸ್ತಿತ್ವಕ್ಕೆ ಬಂದ ಮೇಲೆ ಡಾ॥ ಅಂಬೇಡ್ಕರ್‌ರವರ ಒತ್ತಾಸೆಯ ಫಲವಾಗಿ ದಲಿತರಿಗೆ ಹಾಗೂ

ಹಿಂದುಳಿದ ವರ್ಗಗಳ ಜನರಿಗೆ ಪರಿಹಾರ ರೂಪದ ಸೌಲಭ್ಯವಾಗಿ ಮೀಸಲಾತಿ ಜಾರಿಗೆ ಬಂತು. ಪರಿಶಿಷ್ಠ ಜಾತಿ, ಪಂಗಡಗಳ ಪಟ್ಟಿಯಲ್ಲಿ ಮುಖ್ಯವಾಗಿ ಅಸ್ಪೃಶ್ಯ ಜಾತಿಗಳನ್ನು ಲಕ್ಷಿಸಲಾಗಿತ್ತು. ಬಡತನದ ಪ್ರಶ್ನೆ ಎಲ್ಲಾ ಜಾತಿಗಳಲ್ಲಿದ್ದರೂ ಅಸ್ಪೃಶ್ಯತೆ ಯೆಂಬುದು ಒಂದು ಅಮಾನುಷ ಪದ್ಧತಿಯಾಗಿದ್ದರಿಂದ ಈ ಅನಿಷ್ಠ ಪದ್ಧತಿಯಿಂದ ಅಸ್ಪೃಶ್ಯರನ್ನು ಬಿಡುಗಡೆಗೊಳಿಸಲು ಮೀಸಲಾತಿ ಸೌಲಭ್ಯದಿಂದ ಸಾಧ್ಯವೆಂದು ಭಾವಿಸಲಾಗಿತ್ತು. ಮೀಸಲಾತಿ ಸೌಲಭ್ಯದ ಮಹತ್ವವನ್ನು ಅರಿತ ಇತರ ಅಸ್ಪೃಶ್ಯ ಜಾತಿಗಳ ಜನ ತಮ್ಮನ್ನು ಪರಿಶಿಷ್ಠರ ಪಟ್ಟಿಯಲ್ಲಿ ಸೇರಿರುವಂತೆ ರಾಜಕೀಯ ಒತ್ತಡ ತಂದರು. ಕರ್ನಾಟಕದ ಸಂದರ್ಭದಲ್ಲಿ ಲಂಬಾಣಿಗರು, ಕೊರವರು, ಬೋಯಿ ಮುಂತಾದ ಜಾತಿಗಳ ಜನ ಆರ್ಥಿಕವಾಗಿ ತುಂಬಾ ದುಸ್ಥಿತಿಯಲ್ಲಿರುವುದು ನಿಜವಾದರೂ ಸಮಾಜದಲ್ಲಿ ಇವರನ್ನು ಸ್ಪೃಶ್ಯರೆಂದು ಭಾವಿಸಲಾಗಿದೆ. ಇವರನ್ನು ಪರಿಶಿಷ್ಠ ಜಾತಿಯವರೆಂದು ಪರಿಗಣಿಸಿರುವುದಕ್ಕೆ ಅಸ್ಪೃಶ್ಯರಲ್ಲಿ ಅಸಮಧಾನವಿದೆ.

ಈ ಶತಮಾನದ ಮೊದಲಾರ್ಧದಲ್ಲಿ ಹರಿಜನರ ಸ್ಥಾನಮಾನದ ಬದಲಾವಣೆಗಳು ನಡೆದು ಹೋಗಿವೆ. ಈ ಬದಲಾವಣೆಗಳ ಬಗ್ಗೆ ನಾವು ವ್ಯವಹರಿಸುವಾಗ ನಾವು ಕೆಲವು ಪ್ರಮುಖ ವ್ಯಕ್ತಿಗಳ ಮತ್ತು ಅವರಿಗೆ ಸಂಬಂಧ ಪಟ್ಟ ಸಂಘ ಸಂಸ್ಥೆ, ಸಂಘಟನೆಗಳು ಕ್ರಿಯಾ ಚಟುವಟಿಕೆಗಳನ್ನು ಸಂಕ್ಷಿಪ್ತವಾಗಿ ವಿವರಿಸಬಹುದು. ಕೇರಳದಲ್ಲಿ ಶ್ರೀನಾರಾಯಣಗುರು ಮತ್ತು ಎಸ್. ಎನ್. ಡಿ.ಪಿ, ಭೀಮರಾವ್ ಅಂಬೇಡ್ಕರ್ ಮತ್ತು ಅವರು ಸ್ಥಾಪಿಸಿದ ಅಖಿಲಭಾರತ ಪರಿಶಿಷ್ಠ ಜಾತಿಯ ಫೆಡರೇಶನ್ ಮತ್ತು ಮಹಾತ್ಮ ಗಾಂಧಿ ಹಾಗೂ ಹರಿಜನ ಸೇವಾ ಸಂಘ.

ಶ್ರೀ ನಾರಾಯಣಗುರು (೧೮೫೪-೧೯೨೮) ಅವರು ೧೯೦೨ ರಲ್ಲಿ ಯೋಗಂ ಎಂಬಲ್ಲಿ ''ಒಂದುಜಾತಿ, ಒಂದು ಧರ್ಮ, ಒಬ್ಬದೇವರು'' ಎಂಬ ದೃಢೋಕ್ತಿಗಳೊಡನೆ ಎಸ್. ಎನ್. ಡಿ. ಪಿ. ಯನ್ನು ಸ್ಥಾಪಿಸಿದ್ದರು. ಈ ಸಂಸ್ಥೆಯು ಎರಡು ಮುಖ್ಯ ಕಾರ್ಯಕ್ರಮಗಳನ್ನು ಒಳಗೊಂಡಿತ್ತು. ಏಜಾವಾಸೆರವನ್ನು ಮೇಲಕ್ಕೆತ್ತುವುದು (ಕೇರಳದ ಶೋಷಿತ ಜಾತಿ ವರ್ಗ) ಯೋಗಂನ ಒಂದು ಕಸದ ಭಾಗವಾಗಿ ನಾರಾಯಣ ಗುರುಗಳು, ಕೇರಳದ ಉದ್ಧಕ್ಕೂ ಹಲವಾರು ಶಾಲೆಗಳನ್ನು ಮತ್ತು ಕಾಲೇಜುಗಳನ್ನು ಪ್ರಾರಂಭಿಸಿದರು. ಎರಡನೆಯದಾಗಿ, ಅವರು ಅನೇಕ ದೇವಾಲಯಗಳನ್ನು ಕಟ್ಟಿಸಿದರು. ಅವರು ಪೂಜೆ, ಆರಾಧನೆ, ಮದುವೆ ಮತ್ತು ಶವಸಂಸ್ಕಾರಗಳ ವಿಧಿವಿಧಾನಗಳನ್ನು ಸರಳೀಕರಿಸಿದರು. ಎಸ್.ಎನ್.ಡಿ.ಪಿ.ಯು ಕೇರಳದುದ್ದಕ್ಕೂ ತನ್ನ ಶಾಖೋಪಶಾಖೆಗಳನ್ನು ಒಳಗೊಂಡಿರುವ ಜಾತ್ಯಾತೀತ ಸಂಘಟನೆಯಾಗಿರುವುದರಿಂದ ಅವರು ಸಮುದಾಯದ ಧಾರ್ಮಿಕ ಮತ್ತು ಅಧ್ಯಾತ್ಮಿಕವಾದ ವಿಷಯಗಳಲ್ಲಿ ಸಮುದಾಯದ ಜನರಿಗೆ ಸಹಾಯ ಮಾಡಲು ಸನ್ಯಾಸಿಗಳ ಒಂದು ವರ್ಗವನ್ನು ಅವರು ಸ್ಥಾಪಿಸಿದರು. ಅವರು ಹದಿನೈದು ವರ್ಷಗಳವರೆಗೆ ವ್ಯಾಪಕವಾಗಿ ತಮ್ಮ ರಾಜ್ಯದಲ್ಲೆಲ್ಲಾ ಪ್ರವಾಸ ಮಾಡಿದರು. ಮತ್ತು ಅಲ್ಲಿಯ ಜನರಿಗೆ ತಮ್ಮ ಮನೆಗಳನ್ನು, ರಸ್ತೆಗಳನ್ನು ಶುಚಿಯಾಗಿಡಲು ಮತ್ತು ಒಳ್ಳೆಯ ಅಭ್ಯಾಸಗಳನ್ನು ರೂಡಿಸಿಕೊಳ್ಳಲು ಸಹಾಯ ಮಾಡಿದರು. ಅವರು ಅಲ್ಲಿನ ಜನರ ಆಹಾರಾಭ್ಯಾಸವನ್ನು ಬದಲಾಯಿಸುವಂತೆ ಮಾಡಿದರು ಮತ್ತು ಹೀಗೆ ಅವರು ಸುಧಾರಣೆ ಹಾಗೂ ಪ್ರಗತಿಗೆ ಅನುಕೂಲವಾದ ನೇರ ಮಾರ್ಗಗಳನ್ನು ಜನರಿಗೆ ತೋರಿಸಿಕೊಟ್ಟರು.

ನಾರಾಯಣ ಗುರುಗಳು ನಯ್ಯಾರು ನದಿ ದಡದ ಶಂಕರಗುಡ್ಡ ಎಂಬ ನಿರ್ಜನ ಪ್ರದೇಶದಲ್ಲಿ ದಲಿತರಿಗೆ ದೇವಸ್ಥಾನ ನಿರ್ಮಿಸಿದರು. ಇದು ಅರವಿಪುರಂ ಎಂಬ ಹೆಸರಿನಿಂದ ಮುಂದೆ ಪ್ರಖ್ಯಾತವಾದ ಕ್ಷೇತ್ರವಾಯಿತು. ಇದರಲ್ಲಿ ವಿಶ್ವಾಸ, ಸತ್ಯ, ಅಹಿಂಸೆಗಳ ನೆರವಿನಿಂದ ಅಸ್ಪೃಶ್ಯತೆಯ ನಿವಾರಣೆಗಾಗಿ ಹೋರಾಟ ಮುಂದುವರೆಸಿದರು. ಮಾನವರಿಗೆಲ್ಲಾ ಒಂದೇ ಜಾತಿ, ಒಂದೇ ಮತ, ಒಂದೇ ದೇವರು ಎಂಬ ತತ್ವವನ್ನು ಪ್ರತಿಪಾದಿಸಿದರು. ಮುಂದುವರಿದು ದೀನ ದಲಿತರ ಸರ್ವತೋಮುಖ ಅಭಿವೃದ್ಧಿಗಾಗಿ ವಿದ್ವಾಂಸರು ಆಸ್ಪತ್ರೆ ಮತ್ತು ದೇವಸ್ಥಾನಗಳನ್ನು ಸ್ಥಾಪಿಸುವಲ್ಲಿ ಪ್ರೇರಕ ಶಕ್ತಿಯಾಗಿದ್ದರು.

ಅರವಿಪುರಂ ಕ್ಷೇತ್ರವನ್ನು ಒಂದು ಸುವ್ಯವಸ್ಥಿತಗೊಳಿಸಿದ ನಂತರ ನಾರಾಯಣ ಗುರುಗಳು ಕೇರಳದ ವರ್ತಲದಲ್ಲಿ ಶಿವಗಿರಿ ಎಂಬ ಬೆಟ್ಟವನ್ನು ತಮ್ಮ ಆಶ್ರಯಕ್ಕಾಗಿ ಆರಿಸಿಕೊಂಡು ಮೊದಲಿಗೆ ಮಧ್ಯವರ್ಜನೆ, ಅಸ್ಪೃಶ್ಯತೆ ನಿವಾರಣೆ, ಪ್ರಾಣಿ ಬಲಿ ವಿಶೇಷಗಳಂತಹ ಸಮಾಜ ಸುಧಾರಣೆ ಅಗತ್ಯವೆಂದು ತಮ್ಮ ಉದ್ದೇಶದಂತೆ ಕಾರ್ಯಪ್ರವೃತ್ತರಾದರು. ಅಲ್ಲೊಂದು ಮಠವನ್ನು ಸ್ಥಾಪಿಸಿ ಬಡಜನರು ಮಕ್ಕಳಿಗೆ ಒಂದು ಪಾಠ ಶಾಲೆ, ರಾತ್ರಿ ಶಾಲೆ, ಇಂಗ್ಲೀಷ್‌ಮತ್ತು ಸಂಸ್ಕೃತ ಶಾಲೆ ಹಾಗೂ ಶಾರದಾ ಮಾತೆಯ ದೇವಸ್ಥಾನವನ್ನು ಸ್ಥಾಪಿಸಿದರು. ಈ ಕ್ಷೇತ್ರ ಸ್ಥಾಪನೆಯಿಂದ ದಲಿತರಿಗೆ, ಹಿಂದುಳಿದವರಿಗೆ ಮತ್ತು ಅಸ್ಪೃಶ್ಯರಿಗೆ ಅನುಕೂಲವಾಯಿತು. ಜನರ ಜೀವನಕ್ಕೂ, ಜ್ಞಾನಕ್ಕೂ ಸಂಘಟನೆಗೂ ವಿವಿಧ ಅಭಿವೃದ್ಧಿಗೂ ಇಂದು ಕೇಂದ್ರವಾದುದಲ್ಲದೆ ಶಿವಗಿರಿ ಎಂಬ ಹೆಸರಿನಲ್ಲಿ ಒಂದು ಪವಿತ್ರಗಿರಿಯಾಯಿತು. ದಲಿತರಿಗೆ ಅವರದೇ ಆದ ದೇವಸ್ಥಾನಗಳನ್ನು ಸ್ಥಾಪಿಸಿ ಕೊಟ್ಟವರಲ್ಲಿ ಭಾರತದ ನಾರಾಯಣ ಗುರು ಒಬ್ಬರೆ. ಮೇಲ್ಜಾತಿಯವರ ದೇವಸ್ಥಾನಗಳಿಗೆ ದಲಿತ ವರ್ಗದವರ ಪ್ರವೇಶಕ್ಕೆ ಆಂದೋಲನ ಮಾಡುತ್ತಿರುವ ಸಂದರ್ಭದಲ್ಲಿ ಅಂತಹ ಸಂಘರ್ಷದ ರಾಜಕೀಯ ಗೊಂದಲಗಳಿಂದ ದೂರವಿದ್ದು ಹಿಂದುಳಿದವರು. ದಲಿತರು ಹೆಮ್ಮೆ ಪಡುವಂತೆ ಅವರಿಗೆ ಆತ್ಮ ವಿಶ್ವಾಸ ಮೂಡಿಸುವಲ್ಲಿ ಪ್ರತ್ಯೇಕ ದೇವ ಮಂದಿರಗಳನ್ನು ನಿರ್ಮಿಸಿದ್ದು ನಾರಾಯಣ ಗುರುಗಳು. ಸಾಧಾರಣ ಚಳುವಳಿಯು ವಿವೇಕ ಪೂರ್ಣವಾದದ್ದು ಹಾಗೂ ಅಹಿಂಸೆಯಿಂದ ಕೂಡಿದ್ದು ಎಂಬುದು ತಿಳಿದು ಬರುತ್ತದೆ. ಈ ದೇವ ಮಂದಿರಗಳು ಕೇವಲ ದೇವರ ಧ್ಯಾನಕ್ಕೆ ಸೀಮಿತವಾಗದೆ ಅವು ಮುಂದೆ ಜ್ಞಾನಾರ್ಜನೆ ಕೇಂದ್ರಗಳಾದವು.

ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ಮಹನೀಯರು ದಲಿತರ ಉದ್ಧಾರಕ್ಕಾಗಿ ವೈಯಕ್ತಿಕ ನೆಲೆಯಲ್ಲಿ ಸುಧಾರಣೆಗಳನ್ನು ಮಾಡಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ದಲಿತರ ಬದುಕು ಒಂದು ರೀತಿಯಲ್ಲಿ ನಾಯಿ, ಹಂದಿ ಮತ್ತು ಕತ್ತೆಗಳಿಗಿಂತ ಹೀನಾಯವಾಗಿತ್ತು. ಮೇಲಿನ ವರ್ಗದ ಜನರಿಗೆ ಗುಲಾಮರಂತೆ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದ ದಲಿತರು ತಮ್ಮ ಈ ಸ್ಥಿತಿಗೆ ಕಾರಣ ತಮ್ಮ ಹಣೆಬರಹ, ಪೂರ್ವಜನ್ಮದ ಕರ್ಮ, ನಾವು ಪಡೆದುಕೊಂಡು ಬಂದಿರುವುದು ಇಷ್ಟು ಎಂದು ಭಾವಿಸಿಕೊಂಡಿದ್ದರು. ಸಾವಿರಾರು ವರ್ಷಗಳಿಂದಲೂ ನಿರಂತರವಾಗಿ ರೂಡಿಯಲ್ಲಿದ್ದ ಈ ಅಮಾನುಷ ಪದ್ಧತಿಯು ದೈವಾಜ್ಞೆ ಎಂಬ ಭ್ರಮೆಗೆ ಒಳಪಟ್ಟಿತ್ತು. ಅಂತಹ ಸಂದರ್ಭದಲ್ಲಿ ಮರು ಭುಮಿಯಲ್ಲಿ ಒಯಸಿಸ್‌ನಂತೆ ಮಹಾರಾಷ್ಟ್ರದಲ್ಲಿ ಜ್ಯೋತಿ ಬಾಪುಲೆ, ಡಾ॥ ಬಿ. ಆರ್. ಅಂಬೇಡ್ಕರ್ ಗುಜರಾತಿನಲ್ಲಿ

ಮಹಾತ್ಮ ಗಾಂಧೀಜಿಯವರು, ಕೇರಳದಲ್ಲಿ ಮಹಿಳೆಯರ ಹಾಗೂ ಹಿಂದುಳಿದವರ ಬದುಕಿಗೆ ಬೆಳಕಾಗಿ ಕಾಣಿಸಿಕೊಂಡರು. ಇವರ ಚಿಂತನೆ, ಶ್ರಮ ತ್ಯಾಗ ಮತ್ತು ಜೀವಕಾಳಜಿಯಿಂದ ಪ್ರಾಣಿಗಳಿಗಿಂತಲೂ ಕನಿಷ್ಠವಾಗಿದ್ದ ದಲಿತರು ಮನುಷ್ಯರಂತೆ ಬದುಕಲು ಸಾಧ್ಯವಾಯಿತು. ಒಳಿತು, ಕೆಡುಕು, ನ್ಯಾಯ, ಅನ್ಯಾಯಗಳನ್ನು ಅರಿತು ಅನ್ಯಾಯದ ವಿರುದ್ಧ ಧ್ವನಿ ಎತ್ತಲು ಸಹಕಾರಿಯಾಯಿತು. ಬದುಕೇ ಇಲ್ಲದ ದಲಿತರಿಗೆ ಬದುಕನ್ನು, ಚರಿತ್ರೆಯೇ ಇಲ್ಲದ ದಲಿತರಿಗೆ ಚರಿತ್ರೆ ಇದೆ ಎಂಬುದನ್ನು ತೋರಿಸಿಕೊಟ್ಟರು. ದಲಿತರ ಚರಿತ್ರೆಯನ್ನು ಕಟ್ಟಿಕೊಡಲು ಈ ಮಹನೀಯರು ಶ್ರಮಿಸಿದರು.

ಮಹಾತ್ಮ ಗಾಂಧೀಜಿಯವರು ಸ್ವಾತಂತ್ರ್ಯ ಸಂಗ್ರಾಮದ ಪ್ರಯುಕ್ತ ೧೯೩೪ ರಲ್ಲಿ ಹೊಸಪೇಟೆಗೆ ಬಂದಾಗ ಅವರು ಹೊಸಪೇಟೆಯ ರೈಲು ನಿಲ್ದಾಣದಲ್ಲಿ ಮಾಡಿದ ಭಾಷಣ ಸ್ವಾತಂತ್ರ್ಯದ ಹೋರಾಟಕ್ಕಿಂತಲೂ ಅಸ್ಪೃಶ್ಯತೆಯ ವಿರುದ್ಧದ ಚಳುವಳಿಯ ಅವಶ್ಯಕತೆಯನ್ನು ಹೇಳಿದ್ದಾರೆ. ಅಸ್ಪೃಶ್ಯತೆಯನ್ನು ಬೇರು ಸಹಿತಾ ಕಿತ್ತು ಹಾಕಬೇಕೆಂದು ಕರೆ ನೀಡಿ ಹರಿಜನರ ನಿಧಿಗಾಗಿ ಸಂಗ್ರಹಿಸಿದ್ದ ಹಣವನ್ನು ಹೋರಾಟಗಾರರಾದ ಬೆಲ್ಲದ ಚೆನ್ನಪ್ಪ, ಅಸುಂಡಿ ತಿರುಮಲರಾವ್ ರವರಿಂದ ಪಡೆದು ಹೋದರು. ಇದೇ ಸಂದರ್ಭದಲ್ಲಿ ಸಂಡೂರಿನಲ್ಲಿಯೂ ಘೋರ್ಪಡೆ ವಂಶಸ್ಥರು ಅಸ್ಪೃಶ್ಯತೆಯನ್ನು ಆಚರಿಸುತ್ತಿದ್ದರು. ದಾವಣಗೆರೆಯಿಂದ ಬಳ್ಳಾರಿಗೆ ಹೋಗುವ ಮಾರ್ಗಮಧ್ಯದಲ್ಲಿ ಮಹಾತ್ಮ ಗಾಂಧೀಜಿಯವರು ಅಸ್ಪೃಶ್ಯತೆಯ ವಿರುದ್ಧ ಜನಜಾಗೃತಿ ಮೂಡಿಸಿ ಹೋಗಿದ್ದು ತಿಳಿದು ಬರುತ್ತದೆ.

ಹೀಗೆ ಹೊಸಪೇಟೆ ತಾಲೂಕಿನಲ್ಲಿ ಸ್ವಾತಂತ್ರ ಪೂರ್ವದಲ್ಲಿಯೇ ದಲಿತರ ಹಿತ ಚಿಂತನೆಗಾಗಿ, ಅಶ್ಪೃಶ್ಯತೆಯ ವಿರುದ್ಧ, ದೀನದಲಿತರ ಪರವಾಗಿ ಜನಜಾಗೃತಿ ಮೂಡಿಸುವಂಥಹ ಪ್ರಯತ್ನಗಳು ನಡೆದಿರುವುದು ಹಲವಾರು ಘಟನೆಗಳಿಂದ ತಿಳಿದು ಬರುತ್ತದೆ. ಸ್ವಾತಂತ್ರ್ಯ ನಂತರದಲ್ಲಿ ಈ ಚಳುವಳಿಗಳು ವೈಯಕ್ತಿಕ ನೆಲೆಗಳಿಂದ ಮುಂದುವರೆದಿದ್ದು ಅವುಗಳ ಬಗ್ಗೆ ವಿವರವಾಗಿ ಪರಿಶೀಲಿಸುವ ಜೊತೆಗೆ ಆ ಚಳುವಳಿಗಳಿಂದಾಗಿರುವ ವಿವಿಧ ಪರಿಣಾಮಗಳ ಬಗ್ಗೆ ವಿವರವಾಗಿ ತಿಳಿದು ಕೊಳ್ಳುವ ಅವಶ್ಯಕತೆ ಇದೆ.

ಅನಾದಿ ಕಾಲದಿಂದಲೂ ಶಿಕ್ಷಣ ಅಸ್ಪೃಶ್ಯರ ಬಳಿಗೆ ಬಂದಿರಲಿಲ್ಲ. ಅವರು ತಾವಾಗಿಯೇ ವಿದ್ಯೆ ಕಲಿಯಲು ಸಮಾಜದ ಸಮ್ಮತಿಯಿರಲಿಲ್ಲ. ೨೦ನೇ ಶತಮಾನದಲ್ಲಿ ಭಾರತದಲ್ಲಿ ಅಸ್ಪೃಶ್ಯರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆದು ವಿದ್ಯೆಗೆ ಸಾಕಷ್ಟು ಪ್ರೋತ್ಸಾಹ ನೀಡಿದರೂ ಗ್ರಾಮೀಣ ಭಾಗದಲ್ಲಿ ಅಸಂಖ್ಯಾತ ದಲಿತರು ಶಿಕ್ಷಣದಿಂದ ದೂರವೇ ಉಳಿದಿದ್ದರು. ಭಾರತೀಯರು ತಮ್ಮ ಮೂಲ ಸಂಸ್ಕೃತಿಯ ಮುಂದೆ ತಲೆ ತಗ್ಗಿಸುವಂತಹ ಅಸ್ಪೃಶ್ಯತೆಯನ್ನು ಆಚರಿಸಿಕೊಂಡು ಬಂದದ್ದು ಇಂದಿಗೂ ನಮ್ಮ ಮುಂದೆ ಗೋಚರಿಸುವ ಸಂದರ್ಭವೇ ಹೆಚ್ಚು. ಇಂಥಹ ಸಂದಿಗ್ಧ ಪರಿಸ್ಥಿತಿಯಲ್ಲಿ ದೇಶದಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್‌ರವರು ಚೈತನ್ಯದ ಚಿಲುಮೆಯಾಗಿ ಅಸ್ಪೃಶ್ಯರಲ್ಲಿ, ದಲಿತರಲ್ಲಿ ತಮಗಾಗುತ್ತಿರುವ ದೌರ್ಜನ್ಯ, ದಬ್ಬಾಳಿಕೆ ವಿರುದ್ಧ ಜನಜಾಗೃತಿ ಮೂಡಲು ಆರಂಭವಾಯಿತು ೧೯೭೨ರಲ್ಲಿ ಮಹಾರಾಷ್ಟ್ರದ ದಲಿತ ಪ್ಯಾಂಥರ್ ಚಳುವಳಿ ಇವುಗಳ ಪ್ರಭಾರ ಗುಜರಾತ್, ಕರ್ನಾಟಕ ಮತ್ತು ಆಂಧ್ರ ಪ್ರದೇಶದ ರಾಜ್ಯಗಳ ದಲಿತರ ಮೇಲಾಯಿತು.

೧೯೭೩ ರಲ್ಲಿ ತಮಿಳುನಾಡಿನಲ್ಲಿ ವ್ಯಾಪಕವಾದ ಪೆರಿಯಾರ್‌ರವರ ಸ್ವಾಭಿಮಾನಿ ಚಳುವಳಿಯೂ ದೇಶದ ಉದ್ದಗಲ ತುಂಬಾ ಮಹತ್ತರವಾದ ಪಾತ್ರ ನಿರ್ವಹಿಸಿತು. ಅಸ್ಪೃಶ್ಯತೆಯ ವಿರುದ್ಧ, ಸವರ್ಣೀಯರ ವಿರುದ್ಧ, ಬ್ರಾಹ್ಮಣಶಾಹಿವಿರುದ್ಧ ಸ್ವಾಭಿಮಾನಿ ದಲಿತರ ತೀವ್ರ ರೀತಿಯ ಪ್ರತಿ ಭಟನೆಗಳು ನಡೆಯುತ್ತಿದ್ದವು.

ಇಂತಹ ಸಂದರ್ಭದಲ್ಲಿಯೇ ಪ್ರಥಮವಾಗಿ ಹೊಸಪೇಟೆ ತಾಲೂಕಿನಲ್ಲಿಯೂ ದಲಿತರ ಪರವಾದ ಅನೇಕ ಪ್ರತಿಭಟನೆಗಳಿಂದ ಹಲವಾರು ಬದಲಾವಣೆಗಳು ಆಗಿರುವುದು ತಿಳಿದು ಬರುತ್ತದೆ. ಹೊಸಪೇಟೆಯ ಹಿರಿಯ ದಲಿತ ಮುಖಂಡರಾದ ದುರುಗಯ್ಯ ಮತ್ತು ನರಸಿಂಹಯ್ಯರವರು ಪ್ರೌಢ ಶಿಕ್ಷಣ ಪಡೆದ ಅಂದಿನ ದಲಿತ ಯುವಕರಾಗಿದ್ದರು. ಇವರು ದಲಿತ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಅಂದು ಹೊಸಪೇಟೆಯ ಹರಿಜನ ಕೇರಿಯಲ್ಲಿ ಹಾಸ್ಟೆಲ್ ಪ್ರಾರಂಭಿಸಿದ್ದರು. ಹಾಸ್ಟೆಲ್‌ಗೆ ಅವಶ್ಯವಿದ್ದ ದವಸ ಧಾನ್ಯಗಳನ್ನು ತಾವೇ ಇಡೀ ಜಿಲ್ಲೆಯ ದಲಿತರಿಂದ ಸಂಗ್ರಹಿಸಿದರು. ಸ್ವಾಭಿಮಾನಿ ಚಳುವಳಿಯ ಪ್ರಭಾವದಿಂದ ಅವರು ಇತರೆ ಜಾತಿ, ಸಮುದಾಯದವರ ಬೆಂಬಲವಿಲ್ಲದೆ ತಮ್ಮವರಿಂದಲೇ ದವಸ ಧಾನ್ಯಗಳನ್ನು ಸಂಗ್ರಹಿಸಿ ಹಾಸ್ಟೆಲ್ ನಡೆಸಿದರು. ಈ ಹಾಸ್ಟೆಲ್‌ನಲ್ಲಿ ಅಂದು ಸುಮಾರು ೪೦ ವಿದ್ಯಾರ್ಥಿಗಳಿಗೆ ಅವಕಾಶ ಮಾಡಿಕೊಟ್ಟು ತಾವೇ ಸ್ವತಃ ನಿಂತು ಅಡಿಗೆ ಮಾಡಿಸಿ ಮಕ್ಕಳಿಗೆ ಊಟ ಮಾಡಿಸಿ ಅವರಿಗೆ ಬಟ್ಟೆ ತೊಡಿಸಿ ಅವರನ್ನು ಶಾಲೆಗಳಿಗೆ ಕಳಿಸಿಕೊಡುತ್ತಿದ್ದರು. ಹಾಗೆಯೇ ರಾತ್ರಿ ಕೂಡ ಮಕ್ಕಳಿಗೆ ಅಕ್ಷರ ತಿಳುವಳಿಕೆ, ಪಾಠ ಪ್ರವಚನಗಳನ್ನು ಮಾಡುವುದರ ಮೂಲಕ ಮಕ್ಕಳ ವಿದ್ಯೆಗೆ ಶ್ರಮಿಸಿದ್ದರು. ಇವರ ಹಾಸ್ಟೆಲ್ ಸೌಲಭ್ಯದ ಪ್ರಯೋಜನ ಪಡೆದ ಅನೇಕ ದಲಿತರಲ್ಲಿ ಮುಂದೆ ಸರಕಾರದ ಉನ್ನತ ಹುದ್ದೆಗಳನ್ನು ಅಲಂಕರಿಸಿರುವುದು ತಿಳಿಯುತ್ತದೆ. ಇದರಲ್ಲಿ ಹಲವು ಜನ ಐ.ಪಿ.ಎಸ್. ಅಧಿಕಾರಿಗಳಿದ್ದಾರೆ, ವೈದ್ಯರು, ಇಂಜಿನಿಯರರೂ ಆಗಿದ್ದಾರೆ. ಅಂದಿನ ಕಾಲದ ಇವರ ಶ್ರಮದಿಂದ ಹೊಸಪೇಟೆ ತಾಲೂಕಿನಲ್ಲಿ ಬಳ್ಳಾರಿ ಜಿಲ್ಲೆಯಲ್ಲಿಯೇ ಪ್ರಥಮವಾಗಿ ದಲಿತರ ಸಂಘಟನೆಯ ಯತ್ನಗಳು ನಡೆದಿರುವುದು ತಿಳಿದು ಬರುತ್ತದೆ.

೧೯೭೪ ಜೂನ್ ೧೦ ರಂದು ಹೊಸಪೇಟೆಯ ದಲಿತ ಮುಖಂಡರು ಸುಮಾರು ೨೫ ಜನರ ಗುಂಪು ಹೊಸಪೇಟೆ ತಾಲೂಕಿನ ಜಾಕ್ ಗ್ರಾಮದಲ್ಲಿ ದಲಿತರಿಗಾಗುತ್ತಿರುವ ದೌರ್ಜನ್ಯದ ವಿರುದ್ಧ ಪ್ರತಿಭಟನೆ ಮಾಡಿರುವ ಘಟನೆ ಅತ್ಯಂತ ಪ್ರಮುಖವಾದ ಘಟನೆಯಾಗಿದೆ. ಜಾಕಿನ ಲಿಂಗಾಯಿತ ಜಮೀನ್ದಾರಗೌಡರು ದಲಿತರಿಗೆ ಅನೇಕ ರೀತಿಯ ಕಿರುಕುಳ ನೀಡುತ್ತಿದ್ದರು. ಕೂಲಿಗೆ ಬಾರದಿದ್ದರೆ ದಲಿತರ ಮೇಲೆ ಹಲ್ಲೆ ನಡೆಸುತ್ತಿದ್ದರು. ಮಹಿಳೆಯರಿಗೆ ಲೈಂಗಿಕ ಕಿರುಕುಳ ನೀಡುತ್ತಿದ್ದರು, ಇವು ವೈಯಕ್ತಿಕವಾಗಿ ದಲಿತರಿಗೆ ನೀಡುವ ದೌರ್ಜನ್ಯಗಳಾದರೆ ಇನ್ನು ಸಾಮಾಜಿಕವಾಗಿ ದಲಿತರಿಗೆ ದೇವಸ್ಥಾನಗಳಿಗೆ ಪ್ರವೇಶವಿರುತ್ತಿರಲಿಲ್ಲ. ಬಾವಿ, ಕೆರೆ, ಕಟ್ಟೆಗಳಿಗೆ ದಲಿತರಿಗೆ ಪ್ರವೇಶವನ್ನು ನಿಷೇಧಿಸಲಾಗಿತ್ತು. ಹೋಟೆಲ್‌ಗಳಲ್ಲಂತೂ ದಲಿತರನ್ನು ಅತ್ಯಂತ ಕೀಳಾಗಿ ಉಪಚರಿಸಲಾಗುತ್ತಿತ್ತು. ಇದರಿಂದ ಇಲ್ಲಿಯ ದಲಿತರ ಸವರ್ಣೀಯರ ಬಗ್ಗೆ ತೀವ್ರ ಅಸಮಾದಾನದಿಂದ ಕುದಿಯುತ್ತಿದ್ದರು ಆಂಜನೇಯ ಸ್ವಾಮಿಯ ಉತ್ಸವದಲ್ಲಿ ಹರಿಜನರು ಚಪ್ಪಲಿ

ಹೊಲೆದು ಕೊಡುವ ಪರಂಪರೆ ಗ್ರಾಮದಲ್ಲಿತ್ತು. ಹರಿಜನರಿಗೆ ದೇವಸ್ಥಾನದಲ್ಲಿ ಪ್ರವೇಶವಿಲ್ಲದಿರುವಾಗ ಚಪ್ಪಲಿ ಹೊಲೆದು ಕೊಡಬಾರದೆಂದು ತೀರ್ಮಾನಿಸಿ ಅವರಿಗೆ ಬೆಂಬಲ ನೀಡಲು ಹೊಸಪೇಟೆಯ ದಲಿತರು ಜಾಕ್ ಗ್ರಾಮಕ್ಕೆ ಜಾಥಾ ಮಾಡಿಕೊಂಡು ತಲುಪಿದರು. ಗ್ರಾಮದಲ್ಲಿ ಇವರ ಬರುವಿಕೆಯಿಂದ ಒಂದು ರೀತಿಯಲ್ಲಿ ಗಂಭೀರ ಪರಿಸ್ಥಿತಿ ನಿರ್ಮಾಣವಾಗಿತ್ತು. ಜಾಕ್ ಗ್ರಾಮದ ಆಂಜನೇಯ ದೇವಸ್ಥಾನದ ಪ್ರವೇಶ ಮಾಡಲು ದಲಿತರೆಲ್ಲರೂ ಪ್ರಯತ್ನಿಸಿದಾಗ ನಿರೀಕ್ಷೆಯಂತೆ ಸವರ್ಣೀಯರು ಇದನ್ನು ತಡೆದರು. ಜಾಕ್ ಗ್ರಾಮದ ಸ್ಥಳೀಯ ದಲಿತರು ಇವರೊಂದಿಗೆ ದೇವಸ್ಥಾನದ ಪ್ರವೇಶ ಮಾಡುವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು ಅತ್ಯಂತ ಪ್ರಮುಖವಾಗಿತ್ತು.

ದೇವಸ್ಥಾನ ಕಟ್ಟಿದ ವಡ್ಡರೂ ಸಹಕಾರ್ಯಕ್ರಮದಲ್ಲಿ ಭಾಗವಹಿಸಿ ಈ ದೇವಸ್ಥಾನದ ನಿರ್ಮಾಣದಲ್ಲಿ ನಾವು ಎಲ್ಲಾ ರೀತಿಯಿಂದ ಶ್ರಮಿಸಿದ್ದರು ದೇವಸ್ಥಾನದಲ್ಲಿ ನಮ್ಮನ್ನು ಬಿಡುತ್ತಿಲ್ಲವೆಂದೂ ದೂರಿದರು. ಇವರ ಪ್ರತಿಭಟನೆ ತೀವ್ರವಾದಾಗ, ದೇವಾಲಯ ಪ್ರವೇಶಿಸುವ ಪ್ರಯತ್ನ ಜೋರಾದಾಗ ಸವರ್ಣಿಯರ ಗುಂಪೊಂದು ಪ್ರತಿಭಟನೆ ನಿರತ ದಲಿತರ ಮೇಲೆ ಕಲ್ಲುಗಳನ್ನು ತೂರಿತು. ಅನೇಕ ದಲಿತ ಮುಖಂಡರ ಮೇಲೆ ದೈಹಿಕ ಹಲ್ಲೆನಡೆಸಿದರು. ಇವರ ಈ ಹಲ್ಲೆಯ ವಿರುದ್ಧ ಕಂಪ್ಲಿಯ ಪೊಲೀಸ್ ಠಾಣೆಯಲ್ಲಿ ದೂರು ನೀಡಲಾಯಿತು. ದೂರು ಸ್ವೀಕರಿಸಿದ ಠಾಣಾ ಇನ್‌ಸ್ಪೆಕ್ಟರ್ ನೂರಾರು ಪೊಲೀಸ್ ಪಡೆಯೊಂದಿಗೆ ಜೌಕ್ ಗ್ರಾಮದಲ್ಲಿ ಬಂದೋಬಸ್ತ್‌ಗಾಗಿ ನಿಯೋಜಿಸಿದ್ದರು. ಅಷ್ಟೊಂದು ಭಯಾನಕವಾದ ವಾತಾವರಣವನ್ನು ಈ ಘಟನೆ ಅಂದಿನ ದಿನಗಳಲ್ಲಿ ನಿರ್ಮಾಣ ಮಾಡಿತ್ತು. ಇಷ್ಟೆಲ್ಲಾ ಭಯಾನಕ ಪರಿಸ್ಥಿತಿಯಲ್ಲಿಯೂ ಹಿಡಿದ ಛಲ ಬಿಡದ ದಲಿತರು ಕೊನೆಯ ಪ್ರಪ್ರಥಮ ಬಾರಿಗೆ ಆಂಜನೇಯ ದೇವಸ್ಥಾನವನ್ನು ಪ್ರವೇಶಿಸಿಯೇ ಬಿಟ್ಟರು. ಇದಕ್ಕೆ ಪ್ರತಿರೋಧ ಒಡ್ಡಿದವರೆಲ್ಲರನ್ನು ಬಂಧಿಸಲಾಯಿತು. ಸುಮಾರು ಎರಡು ತಿಂಗಳ ಕಾಲ ಅವರು ಜೈಲಿನಲ್ಲಿರ ಬೇಕಾಯಿತು. ಹೊಸಪೇಟೆ ತಾಲೂಕಿನ ದಲಿತರ ಇತಿಹಾಸದಲ್ಲಿ ಪ್ರಥಮ ಬಾರಿಗೆ ದೇವಾಲಯ ಪ್ರವೇಶಿಸಿದ ದಲಿತರ ಈ ಧಿರೋದ್ದಾತ ಹೋರಾಟ ಸ್ಮರಣೀಯವಾಗಿದೆ.

## ೪.೪ : ಮಹಿಳಾ ಸಾಂಘಿಕ ನೆಲೆ

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಾಮ್ರಾಜಶಾಹಿ ವ್ಯವಸ್ಥೆಯ ಉತ್ಪಾದನಾ ವ್ಯವಸ್ಥೆಯು ಭಾರತದಲ್ಲಿ ಅನೇಕ ಸಮಸ್ಯೆಗಳನ್ನು ತಂದಿಟ್ಟಿತು. ರಾಜಕಾರಣಿಗಳು, ಕಾರ್ಖಾನೆ ಮಾಲೀಕರು, ಜಮೀನ್ದಾರರು ಧಾರ್ಮಿಕ ಮುಖಂಡರ ಒಟ್ಟು ಸೇರಿ ಪಟ್ಟಭದ್ರ ವ್ಯವಸ್ಥೆಯ ಮುಂದುವರಿಕೆಗೆ ಕಾರಣರಾದರು. ಅನಕ್ಷರಸ್ಥ ಭೂಹೀನ, ದಲಿತ, ಶೂದ್ರ, ಸ್ತ್ರೀಯರ ಮೇಲಿನ ಶೋಷಣೆ ಕೊನೆಗೊಳ್ಳದೆ ಹೊಸ ಸ್ವರೂಪವನ್ನು ಪಡೆಯಿತು. ಶೋಷಣೆಯ ಕ್ರಮಗಳನ್ನು ಸಾಮೂಹಿಕವಾಗಿ ವಿರೋಧಿಸುವ ಪ್ರಯತ್ನವು ಆಗ ತೀವ್ರವಾಗಿ ನಡೆಯಿತು. ೧೯೪೮ ರಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಲಾಗಿತ್ತು. ಆ ಸಂದರ್ಭದಲ್ಲಿ ನಡೆದ ಜನಾಂದೋಲನಗಳು ಪ್ರಜಾಪ್ರಭುತ್ವದ ಹಕ್ಕುಗಳ ಪ್ರಶ್ನೆಗಳನ್ನು ಮುಂದೆ ಇಟ್ಟುಕೊಂಡಿದ್ದವು. 'ಮಹಿಳಾ

ಆತ್ಮರಕ್ಷಣಾ ಸಮಿತಿ'ಯು ಕಲ್ಕತ್ತಾದಲ್ಲಿ ವ್ಯವಸ್ಥೆಗೊಳಿಸಲಾಗಿದ್ದ ಪ್ರದರ್ಶನದ ಮೇಲೆ ಪೋಲೀಸರ ಗುಂಡು ದಾಳಿ ನಡೆದು ನಾಲ್ವರು ಮಹಿಳೆಯರು ಸತ್ತರು. ಹಲವು ನಾಯಕಿಯರನ್ನು, ಮಹಿಳಾ ಕಾರ್ಮಿಕರನ್ನು ವಿಚಾರಣೆಯಿಲ್ಲದೆ ಸೆರೆಮನೆಗೆ ತಳ್ಳಲಾಯಿತು. ಮಹಿಳಾ ಆತ್ಮ ರಕ್ಷಣಾ ಸಮಿತಿಯ ಸದಸ್ಯೆಯರು ಈ ಸಂದರ್ಭದಲ್ಲಿ ನಿಷೇದಾಜ್ಞೆಗೊಳಗಾಗಿದ್ದರು.

೧೯೫೨ ರಲ್ಲಿ ಭಾರತದ ಮೊದಲ ಸಾರ್ವತ್ರಿಕ ಚುನಾವಣೆ ನಡೆದ ಸಂದರ್ಭದಲ್ಲಿ ಹಲವಾರು ಕಮ್ಯುನಿಸ್ಟ್ ಮಹಿಳೆಯರು ಲೋಕಸಭೆಗೆ ಚುನಾಯಿತರಾದರು. ಮಹಿಳೆಯರ ಹಕ್ಕುಗಳಿಗೆ ಸಂಬಂಧಿಸಿದ ಶಾಸನಗಳನ್ನು ಚರ್ಚಿಸಿ ಮಸೂದೆ ಅಂಗೀಕಾರವಾಗುವಂತೆ ಅವರು ಶ್ರಮಿಸಿದರು.

ಐವತ್ತರ ದಶಕದಲ್ಲಿ ಪ್ರಜಾಸತ್ತಾತ್ಮಕ ಮಹಿಳಾ ಚಳುವಳಿಯು ಜಾಗತಿಕ ನಂಟನ್ನು ಪಡೆಯಿತು. ಇದಕ್ಕೆ ಚಾಲನೆದೊರಕಿದ್ದು, ಸ್ವಾತಂತ್ರ್ಯ ಪೂರ್ವಹೋರಾಟದ ಸಂದರ್ಭದಲ್ಲಿಯೇ. ೧೯೦೭ ರಲ್ಲಿ ಸ್ಪುಟ್‌ಗಾರ್ಟ್‌ನಲ್ಲಿ ನಡೆದ ಸಮಾಜವಾದಿಗಳ 2ನೇ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಮೇಡಂ ಕೌಮಾ ಭಾಗವಹಿಸಿದ್ದರು. ಈ ಸಭೆಯಲ್ಲಿ ಭಾರತದ ಸ್ವಾತಂತ್ರ್ಯದ ಪ್ರಶ್ನೆಯನ್ನು ಮುಖ್ಯವಾಗಿ ಆಕೆ ಮಂಡಿಸಿದರು. ರಷ್ಯಾದ ಸಮಾಜವಾದಿ ಕ್ರಾಂತಿಯು ಭಾರತದ ಸ್ವಾತಂತ್ರ್ಯ ಹೋರಾಟದ ಚಳುವಳಿಗೆಂತೋ ಅಂದೇ ಭಾರತದ ಮಹಿಳಾ ಚಳುವಳಿಗಳ ಬೆಳವಣಿಗೆ ದೊಡ್ಡ ಪ್ರೇರಣೆ ನೀಡಿತು.

೧೯೫೩ ರಲ್ಲಿ ಕೋಪನ್ ಹೇಗನ್‌ನಲ್ಲಿ ಅಂತರಾಷ್ಟ್ರೀಯ ಮಹಿಳಾ ಕಾಂಗ್ರೆಸ್ ಜರುಗಿತು. ಈ ಸಮ್ಮೇಳನದಲ್ಲಿ ಭಾರತದ ೨೬ ಮಹಿಳಾ ನಾಯಕಿಯರು ಪ್ರತಿನಿಧಿಗಳಾಗಿ ಭಾಗವಹಿಸಿದ್ದರು. ಅಂದಿನ ಲೋಕಸಭಾ ಸದಸ್ಯೆಯಾಗಿದ್ದ ಆ್ಯನಿಬೆಸೆಂಟ್ ಪ್ರತಿನಿಧಿಗಳ ನಿಯೋಗದ ನೇತೃತ್ವವನ್ನು ವಹಿಸಿದ್ದರು. ಅಂತರಾಷ್ಟ್ರೀಯ ಮಹಿಳಾ ಹಕ್ಕೊತ್ತಾಯಗಳ ಪಟ್ಟಿಯನ್ನು ಈ ಸಭೆಯಲ್ಲಿ ಮಂಡಿಸಲಾಯಿತು.

ಜಾಗತಿಕ ನೆಲೆಯಲ್ಲಿ ಮಹಿಳಾ ಚಳುವಳಿಗಳ ವಿಶೇಷ ಪ್ರಯತ್ನದಿಂದಾಗಿ ಹೊಸ ಬೆಳವಣಿಗೆಯಾಯಿತು. ಸ್ತ್ರೀ ಪುರುಷರ ಸಮಾನ ಹಕ್ಕುಗಳನ್ನು ಒಳಗೊಂಡ ಹಾಗೆ ಮಾನವ ಹಕ್ಕುಗಳ ಬಗೆಗೆ ವಿಶ್ವ ಸಂಸ್ಥೆಯ ಸಾರ್ವತ್ರಿಕ ಘೋಷಣೆ ಇದೆ. ಇದರ ಪರಿಣಾಮಕಾರಿ ಅನುಷ್ಟಾನಕ್ಕಾಗಿ ವಿಶ್ವಸಂಸ್ಥೆಯನ್ನು ಒತ್ತಾಯಿಸಲಾಯಿತು. ಇದರಿಂದಾಗಿ ಮಹಿಳಾ ಸ್ಥಾನಮಾನ ಕುರಿತ ಸಮಿತಿಯ ಸ್ಥಾಪನೆಯನ್ನು ವಿಶ್ವ ಸಂಸ್ಥೆಯ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯ ವತಿಯಿಂದ ಮಾಡಲಾಯಿತು. ಈ ಸಮಿತಿಯ ನೇತೃತ್ವದಲ್ಲಿ ಮಹಿಳೆಯರ ವಿರುದ್ಧದ ಎಲ್ಲಾ ತಾರತಮ್ಯಗಳನ್ನು ನಿವಾರಿಸಲು ಅಂತರಾಷ್ಟ್ರೀಯ ನೀತಿ ಮತ್ತು ನಿಯಮಗಳನ್ನು ರೂಪಿಸಲಾಯಿತು. ನಿಯಮಗಳ ಕಾನೂನು ಬದ್ಧ ಆಚರಣೆಗಾಗಿ ಕೂಡ ಪ್ರಯತ್ನಿಸಲಾಯಿತು.

ಕೋಪನ್ ಹೇಗನ್ ಸಮಾವೇಶದ ನಂತರ ಅಖಿಲ ಭಾರತ ಮಹಿಳಾ ಸಮನ್ವಯ ಸಮಿತಿಯನ್ನು ಮೊದಲಿಗೆ ಸ್ಥಾಪಿಸಲಾಯ್ತು. ೧೯೫೪ ರಲ್ಲಿ ಈ ಸಮಿತಿಯು ಕೊಲ್ಕತ್ತೆಯಲ್ಲಿ ಸಮಾವೇಶವನ್ನು ಕರೆಯಿತು, ಸಮಾವೇಶದ ಧ್ಯೇಯೋದ್ದೇಶಗಳು ಈ ರೀತಿ ಇದ್ದವು.

೧. ಶಾಂತಿ ಸ್ವಾತಂತ್ರ್ಯಗಳ ರಕ್ಷಣೆ

೨. ಮಹಿಳಾ ಹಕ್ಕುಗಳ ಶಾಸನಗಳ ರಚನೆ

೩. ಮಹಿಳಾ ಉದ್ಯೋಗಾವಕಾಶಗಳ ಹೆಚ್ಚಳ

೪. ರೈತ ಮಹಿಳೆಯರ ಹಕ್ಕುಗಳ ರಕ್ಷಣೆ

೫. ತಾಯಿ ಮಕ್ಕಳ ಆರೋಗ್ಯ ರಕ್ಷಣೆ

## ಮಹಿಳಾ ದಶಕ :

'ವಿಮೆನ್ಸ್ ಇಂಟರ್‌ನ್ಯಾಶನಲ್ ಡೆಮಾಕ್ರಟಿಕ್ ಫೆಡರೇಷನ್' ಸಂಘಟನೆಯು ವಿಶ್ವ ಸಂಸ್ಥೆಯ ಸ್ತ್ರೀಯರ ಸ್ಥಾನಮಾನ ಕುರಿತ ಸಮಿತಿಗೆ ನೀಡಿದ ಸಲಹೆಯ ಅನುಸಾರವಾಗಿ ೧೯೭೫ನೇ ವರ್ಷವನ್ನು ಅಂತರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ವಿಶ್ವಸಂಸ್ಥೆ ಘೋಷಿಸಿತು. ಸಮಾನತೆ, ಅಭಿವೃದ್ಧಿ, ಮತ್ತು ಶಾಂತಿಯು ಇದರ ಮುಖ್ಯ ಉದ್ದೇಶಗಳು. ೧೯೭೨ರ ಡಿಸೆಂಬರ್ ೧೮ ರಂದು ವಿಶ್ವಸಂಸ್ಥೆಯ ಸಾಮಾನ್ಯ ಅಧಿವೇಶನದಲ್ಲಿ ಮಂಡಿತವಾದ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಕುರಿತ ನಿರ್ಣಯದಲ್ಲಿ ಈ ಉದ್ದೇಶಗಳಿಗೆ ಮಹತ್ವ ನೀಡಬೇಕೆಂದು ನಿರ್ಧಾರವಾಗಿತ್ತು.

ಅಂತರಾಷ್ಟ್ರೀಯ ಮಹಿಳಾ ವರ್ಷವನ್ನು ಭಾರತ ಸರಕಾರದ ವಿವಿಧ ಅಂಗಸಂಸ್ಥೆಗಳು ಹಾಗೂ ಮಹಿಳಾ ಸಂಘಟನೆಗಳು ಅರ್ಥ ಪೂರ್ಣವಾಗಿ ಆಚರಿಸಿದವು. ಆಚರಣೆಯ ನಿಮಿತ್ತವಾಗಿ ಪ್ರಧಾನ ಮಂತ್ರಿಯೇ ಅಧ್ಯಕ್ಷರಾಗಿದ್ದ ಸಮಿತಿಯನ್ನು ರಚಿಸಲಾಯಿತು. ಅನೇಕ ಬಗೆಯ ಕಾರ್ಯಚಟುವಟಿಕೆಗಳು ಮಹಿಳಾ ದಿನಾಚರಣೆಯ ನಿಮಿತ್ತ ನಡೆದವು. ಮಹಿಳಾ ಅಂಚೆ ಕಛೇರಿಗಳನ್ನು ತೆರೆಯುವುದು

## ಮಹಿಳಾ ಚಳುವಳಿಯ ಕೆಲವು ತಾತ್ವಿಕ ಪ್ರಶ್ನೆಗಳು :

ಹೆಣ್ಣಿಗೂ, ಗಂಡಿಗೂ ಒಂದು ನಿರ್ಧಿಷ್ಟ ವಿರೋಧವಿದೆ. ಹೆಣ್ಣು ಹೆಣ್ಣಾಗಿ ತುಳಿತಕ್ಕೆ ಒಳಗಾದ ಒಂದು ನಿರ್ಧಿಷ್ಟ ಕ್ರಮವೂ ಇದೆ. ಆಸ್ತಿಯ ಮೇಲೆ ಹಕ್ಕು ಪಡೆದಿರುವ ಮತ್ತು ಆಳುಕಾಳು ಸೌಲಭ್ಯ ಹೊಂದಿರುವ ಮೇಲು ಜಾತಿಯ ಹೆಂಗಸರನ್ನು ಸ್ವಲ್ಪ ಮಟ್ಟಿಗೆ ಬಿಟ್ಟರೆ ಎಲ್ಲಾ ಮಹಿಳೆಯರೂ ತುಳಿತಕ್ಕೆ ಒಳಗಾಗಿದ್ದಾರೆ. ಶೋಷಣೆಗೆ ಒಳಗಾಗಿದ್ದಾರೆ ಎಂದು ಹೇಳಬಹುದು. ದುಡಿಯುವ ಹೆಣ್ಣು, ರೈತರ ಹೆಣ್ಣು, ದಲಿತಹೆಣ್ಣು ಒಂದು ಕಡೆ ಹೆಣ್ಣಾಗಿ, ಇನ್ನೊಂದು ಕಡೆ ಕೆಲಸಗಾರರ ವರ್ಗವಾಗಿ, ಎರಡು ರೀತಿಯ ತುಳಿತಕ್ಕೆ ಒಳಗಾಗುತ್ತಾರೆ. ಎಲ್ಲಾ ವರ್ಗ ಸಮಾಜಗಳ ಲಿಂಗಬೇಧ ದುಡಿಮೆಯ ಪದ್ಧತಿ ಇದೆ. ಅಂದರೆ ಗಂಡು

ಮುಖ್ಯವಾಗಿ ಸಾಮಾಜಿಕ ಉತ್ಪಾದನಾ ಚಟುವಟಿಕೆಗಳಲ್ಲಿ ಭಾಗವಹಿಸಬೇಕು. ಹೆಣ್ಣು ಮುಖ್ಯವಾಗಿ ಮನೆ ಕೆಲಸ, ಮಕ್ಕಳ ಯೋಗಕ್ಷೇಮ, ಲಾಲನೆ ಪಾಲನೆ ನೋಡಿಕೊಳ್ಳಬೇಕು. ಗಂಡಿಗೂ, ಹೆಣ್ಣಿಗೂ ಇರುವ ಸ್ಪಷ್ಟ ವಿರೋಧವನ್ನು ಇದು ಎತ್ತಿ ತೋರಿಸುತ್ತದೆ. ಅನೇಕ ಸಮಾಜಗಳಲ್ಲಿ ಹೆಣ್ಣು ದೈಹಿಕ ಶ್ರಮದ ಕೆಲಸಗಳನ್ನು ಮಾಡುತ್ತಾಳೆ. ಆದರೂ ಅವರು ಸಮಾಜದ ಸಾಮಾಜಿಕ ಚಟುವಟಿಕೆಗಳಲ್ಲಿ ಪೂರ್ಣವಾಗಿ ಭಾಗವಹಿಸುವುದನ್ನು ತಡೆಯಲಾಗಿದೆ. ರಾಜಕೀಯ ಮುಂದಾಳತ್ವದ ಕಾಲಾಸಿದ್ಧಿ ಸಾಧನೆಗಳ ವೈಜ್ಞಾನಿಕ ಸಂಶೋಧನೆಗಳ ಮತ್ತು ಶ್ರಮದ ಪ್ರತಿಫಲವನ್ನು ಹೆಚ್ಚಿಸಿಕೊಳ್ಳುವ ಅವಕಾಶಗಳು ಹೆಣ್ಣಿಗೆ ಸಿಗುತ್ತಿಲ್ಲ. ಇದರ ಬದಲು ಹೆಣ್ಣು ಹುಟ್ಟಿದಾಗಲೇ ನೀನು ಸಮಾಜದಲ್ಲಿ ವಿಶೇಷ ಪಾತ್ರ ನಿರ್ವಹಿಸಬೇಕಾಗುತ್ತದೆ. ನೀನು ದೈಹಿಕವಾಗಿ ಅಬಲೆ, ಮಾನಸಿಕವಾಗಿ ಚಂಚಲೆ, ನಿಶ್ಯಕ್ತೆ ಮತ್ತು ಯಾವಾಗಲೂ ಪರಾವಲಂಬಿ ಎಂದು ಹೇಳಿಕೊಡಲಾಗುತ್ತದೆ. ಮಕ್ಕಳನ್ನು ಹೆರುವ ಸೌಭಾಗ್ಯದ ಹಿರಿಮೆ ಮಾತ್ರ ಹೆಣ್ಣಿಗೆ ಸಾಕು. ಸಾಮಾಜಿಕ, ಆರ್ಥಿಕ ಚಟುವಟಿಕೆಗಳಲ್ಲಿ ಹೆಣ್ಣು ತಲೆಹಾಕಬಾರದು. ಹೆಣ್ಣು ತನ್ನ ಬೆಳವಣಿಗೆಯನ್ನು ತನ್ನ ಮೂಲಕ ಮಾಡಿಕೊಳ್ಳಬಾರದು. ಅವಳು ತ್ಯಾಗಮಯಿಯಾಗಿರಬೇಕು. ಅವಳು ತನ್ನ ಬೆಳವಣಿಗೆಯನ್ನು ಗಂಡ, ಮಕ್ಕಳು ಹೀಗೆ ಇತರರ ಬೆಳವಣಿಗೆಯ ಮೂಲಕ ಸಾಧಿಸಿಕೊಳ್ಳಬೇಕು. ಅವರ ಸಿದ್ಧಿ ಸಾಧನೆಗಳಲ್ಲಿ ತನ್ನ ಸಫಲತೆಯನ್ನು ಕಾಣಬೇಕು. ಬಹುತೇಕ ಸಮಾಜಗಳಲ್ಲಿ ಹೆಣ್ಣಿಗೆ ಉಡುಪೇ ಬೇರೆ, ಅವಳ ಮಾತು, ವ್ಯವಹಾರವೇ ಬೇರೆಯಾಗಿರುತ್ತದೆ. ಪ್ರತಿಯೊಂದು ಜಾತಿ, ವರ್ಗದಲ್ಲಿಯೂ ಆವಳ ಧಾರ್ಮಿಕ ಆಚರಣೆಗಳೇ ಬೇರೆಯಾಗಿರುತ್ತವೆ. ಈ ರೀತಿ ಲಿಂಗಭೇದ ದುಡಿಮೆಯಿಂದ ಪುರುಷ ಪ್ರಾಧಾನ್ಯತೆ ಹೆಚ್ಚಿತು. ಗಂಡಸು ಉತ್ಪಾದನಾ ಚಟುವಟಿಕೆಗಳಲ್ಲಿ ಆತನಿಗೆ ಸಮಾಜದ ಸಂಪತ್ತು, ಸ್ಥಾನಮಾನ, ಅಧಿಕಾರದ ಮೇಲೆ ಹತೋಟಿ ಸಿಕ್ಕಿತು. ಆದ್ದರಿಂದಲೇ ಹೆಣ್ಣಿನ ಮೇಲೆ ಗಂಡಸು ಸವಾರಿ ಮಾಡಲು ಆರಂಭಿಸಿದನು. ಹೆಣ್ಣು ಜನ್ಮವನ್ನು ಹಾಡಿ ಹೊಗಳಿ, ಅದೊಂದು ವಿಶೇಷ ರಹಸ್ಯವೆಂದು ಮಾಡುವ ಎಲ್ಲಾ ಪ್ರಯತ್ನಗಳೂ ಒಂದು ಸರಳ ಸತ್ಯವನ್ನು ಮರೆ ಮಾಚಲಾಗುತ್ತಿಲ್ಲ. ಸಾಮಾಜಿಕ, ಆರ್ಥಿಕ ಉತ್ಪಾದನೆ ಮತ್ತು ಅದರಿಂದ ಬರುವ ಸಂಪತ್ತಿನ ಮೇಲೆ ಗಂಡಸಿಗೆ ಇರುವ ಹತೋಟಿ, ಅವನಿಗೆ ಅಧಿಕಾರವನ್ನು ತಂದು ಕೊಡುತ್ತವೆ. ಹೆಣ್ಣಿಗೆ ಈ ವಿಚಾರಗಳಲ್ಲಿ ಒಳಹೋಗಲು ಸಾಧ್ಯವಾಗುತ್ತಿಲ್ಲವೆಂಬುದು ಮರೆಮಾಚಲಾಗದ ಸರಳ ಸತ್ಯವಾಗಿದೆ.

ಹೆಣ್ಣು ಮನೆಯ ಹೊರಗಡೆ, ಇತರೆ ದುಡಿಮೆಯ ಕ್ಷೇತ್ರಗಳ ಕೆಲಸ ಮಾಡಿದಾಗಲೂ ಅವಳಿಗೆ ಕೊಡುವ ಕೂಲಿ ವೇತನದಲ್ಲಿ ತಾರತಮ್ಯ ತೋರಿಸಲಾಗುತ್ತದೆ. ಉದ್ಯೋಗಾವಕಾಶಗಳು ಹೆಣ್ಣಿಗಂತೂ ಪ್ರತಿಯೊಂದು ಕ್ಷೇತ್ರದಲ್ಲಿ ಕಡಿಮೆ ಇವೆ. ಇದ್ದರೂ ಕೆಳ ಮಟ್ಟದ ಉದ್ಯೋಗಗಳು ಸಿಗುತ್ತವೆ. ನಿರುದ್ಯೋಗದ ಸಮಸ್ಯೆ ಬಂದಾಗ ಮೊದಲು ಕೆಲಸ ಕಳೆದು ಕೊಳ್ಳಬೇಕಾದವಳು ಹೆಣ್ಣೆ. ಏಕೆ ಹೀಗಾಗುತ್ತದೆ? ಹೆಣ್ಣಿನ ಮುಖ್ಯ ಮೊದಲ ಕೆಲಸ ಮನೆಯೆಂಬ ಆದ್ಯತೆ. ಹೆಣ್ಣಿಗೆ ಕಡಿಮೆ ಕೂಲಿ ಕೊಡುವುದು, ಮತ್ತು ಸರಿಯಾದ ಕೆಲಸ ಕೊಡದೇ ಇದ್ದರೆ ಮತ್ತು ಅವರು ಮನೆಕೆಲಸಕ್ಕೆ ಹೋಗುವಂತೆ ಮಾಡುವುದು ಸುಲಭವಾಗುತ್ತದೆ. ಮನೆಯ ಹೊರಗಡೆ ಇತರೆ ಕ್ಷೇತ್ರಗಳಲ್ಲಿ ದುಡಿಯುವ ಹೆಣ್ಣು ತನ್ನ ಆ ದುಡಿಮೆಯ ಜೊತೆಗೆ ಮನೆಯ ಕೆಲಸವನ್ನು ಮಾಡುವುದು ಅನಿವಾರ್ಯವಾಗುತ್ತದೆ. ಈ ಎರಡನೆಯ ಪಾಳಿ

(ಮನೆಯ) ಯ ಕೆಲಸವನ್ನು ಸಂಬಳವಿಲ್ಲದೆ ಕುಟುಂಬದ ವ್ಯಾಮೋಹ (?) ದಿಂದ ಮಾಡಬೇಕಾಗುತ್ತದೆ. ದುಡಿಯುವ ಹೆಣ್ಣಿನ ಈ ಎಲ್ಲಾ ಕೆಲಸಗಳಿಗೆ ಲಿಂಗಬೇಧವೂ ಬೇರೆ ಬೇರೆ ರೀತಿಯ ಸ್ವರೂಪವನ್ನು ಪಡೆದುಕೊಳ್ಳಲು ಆರಂಭಿಸಿತು.

ಭಾರತದಲ್ಲಿ ಇಂದಿಗೂ ತಾಯಿ ಪ್ರಧಾನವಾಗಿರುವ ಕೆಲವು ಬುಡಕಟ್ಟು ಸಮಾಜಗಳಲ್ಲಿ ಉದಾಹರಣೆಗಳಿವೆ. ಇಂಥಹ ಸಮಾಜಗಳಲ್ಲಿ ಆಕೆಗೆ ಆರ್ಥಿಕ ಮತ್ತು ವೈವಾಹಿಕ ಸಂಬಂಧಗಳ ಪೂರ್ಣ ಸ್ವಾತಂತ್ರ್ಯವಿರುವುದು ಕಂಡು ಬರುತ್ತದೆ. ಕೆಲವು ಕಡೆ ಆಕೆ ಹಲವು ಗಂಡಸರನ್ನು ಪಡೆದಿರುವುದು ಕಂಡು ಬರುತ್ತದೆ. ತೀರಾ ಸಂಪ್ರದಾಯಸ್ಥರು ಅದನ್ನು ಅನಿಷ್ಠವೆಂದು ಭಾವಿಸಬಹುದು. ಆದರೆ ಈ ಪದ್ಧತಿಯಲ್ಲಿ ಅನೇಕ ಆರೋಗ್ಯಕರ ಆಚರಣೆಗಳು, ಅದರಲ್ಲೂ ಸಮಾನತೆ ಮತ್ತು ಸ್ವಾತಂತ್ರ್ಯದ ಪೂರ್ಣ ಅವಕಾಶಗಳಿದ್ದವು ಎಂಬುದನ್ನು ಗಮನಿಸಬೇಕು. ಬುಡಕಟ್ಟು ಸಮಾಜಗಳಲ್ಲಿ ಹೆಣ್ಣು, ಹೆಚ್ಚಾಗಿ ಆಹಾರ ಸಂಗ್ರಹಿಸುವುದರಲ್ಲಿ ನಿರತರಾಗಿರುತ್ತಿದ್ದುದರಿಂದ ವ್ಯವಸಾಯವನ್ನು ಪ್ರಾರಂಭಿಸಿದವರು ಹೆಣ್ಣು ಎಂದು ನಂಬಲಾಗಿದೆ.

ಊಳಿಗಮಾನ್ಯ ಸಮಾಜದಲ್ಲಿ ಹೆಣ್ಣಿನ ದಾಸ್ಯತ್ವ ಅಸಮಾನತೆಯ ಆಧಾರದ ಮೇಲೆ ರಚಿತವಾಗಿರುವ ಇಡೀ ಸಮಾಜದ ಒಂದು ಅಂಗವೇ ಆಗಿತ್ತು. ಇದೇ ರೀತಿ, ಈ ಸಮಾಜದ ಇತರೆ ಕ್ಷೇತ್ರಗಳಲ್ಲಿ ಗುಲಾಮ ತನ್ನ ಪ್ರಭುವಿಗೆ ಅಡಿಯಾಳು, ಪ್ರಜೆ ರಾಜನಿಗೆ ಅಡಿಯಾಳು ಮಗ ತಂದೆಗೆ ಅಡಿಯಾಳು, ಹೆಂಡತಿ ಗಂಡನಿಗೆ ಅಡಿಯಾಳು ಹೀಗೆ ಪುರುಷ ಪ್ರಧಾನ ಸಮಾಜದಲ್ಲಿ ಗಂಡಸು ಮನೆಯ ಹೊರಗಡೆ ಗುಲಾಮನನ್ನು ಆಳಿದಂತೆ ಮನೆಯಲ್ಲಿ ಹೆಣ್ಣನ್ನು ಆಳಿದನು. ಹೆಣ್ಣಿಗೆ ಮದುವೆಯ ಸ್ವಾತಂತ್ರ್ಯ ನೀಡಿದರೆ (ಗಂಡನನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ) ಭಾರತದಲ್ಲಿ ಜಾತಿಪದ್ಧತಿ ಎಂದೋ ಅಳಿದು ಹೋಗುತ್ತಿತ್ತು. ಸಂಪ್ರದಾಯದ ಮದುವೆಯ ಪಾಡು, ವರದಕ್ಷಿಣೆಯ ಪಿಡುಗು, ಹೆಣ್ಣಿನ ಮೇಲೆ ಸಮಾಜ ಇಟ್ಟಿರುವ ಹಿಡಿತ, ಇವೆಲ್ಲವೂ ಜಾತಿ ಪದ್ಧತಿಯನ್ನು ಉಳಿಸಿಕೊಂಡು ಬರಲು ರಚಿತವಾಗಿರುವ ಏರ್ಪಾಡುಗಳು ಎಂದರೆ ತಪ್ಪಾಗುವುದಿಲ್ಲ. ಹೆಣ್ಣಿನ ಮೊದಲ ಕರ್ತವ್ಯ ಮನೆ ಮತ್ತು ಮಕ್ಕಳ ಸೇವೆ. ''ಹೆಣ್ಣಿನ ಸ್ಥಾನ ಮನೆಯಲ್ಲಿ'' ಎಂದು ಇಲ್ಲಿ ಹೇಳಿಕೊಡಲಾಗುತ್ತಿದೆ.

ಒಬ್ಬ ಕೆಲಸಗಾರ ಕಾರ್ಖಾನೆಯಲ್ಲಿ ಅಥವಾ ಹೊಲಗದ್ದೆಗಳಲ್ಲಿ ಅಥವಾ ಕಛೇರಿಗಳಲ್ಲಿ ಮಾಡುವ ಕೆಲಸದಷ್ಟೇ ಹೆಣ್ಣು ಮಾಡುವ ಮನೆಯ ಕೆಲಸಗಳಾದ ಗಂಡ, ಮಕ್ಕಳ ಆರೈಕೆ ಮತ್ತು ಪೋಷಣೆ ಕೆಲಸಗಳು ಮುಖ್ಯ ಎಂದು ಯೋಚಿಸುವುದೇ ಇಲ್ಲ. ಪ್ರಸಕ್ತ ವ್ಯವಸ್ಥೆಯಲ್ಲಿ ಪ್ರತಿಯೊಂದು ವಸ್ತುವಿಗೂ ಸೇವೆಗೂ ಒಂದು ನಿರ್ದಿಷ್ಟ 'ಬೆಲೆ' ಇದೆ. ಅದನ್ನು ಮಾರುಕಟ್ಟೆಯಲ್ಲಿಟ್ಟು ಮಾರಬಹುದು, ಅಥವಾ ಕೊಳ್ಳಬಹುದು. ಆದರೆ ಹೆಣ್ಣು ಮಾಡುವ ಈ ಮನೆಯ ಕೆಲಸಕ್ಕೆ ಬೆಲೆ ಇಲ್ಲ. ಏಕೆಂದರೆ ಹೆಣ್ಣು ಮಾಡುವ ಈ ಕೆಲಸಕ್ಕೆ ವೇತನ ಇಲ್ಲ. ಹೆಣ್ಣಿನ ಮನೆಯ ಕೆಲಸ ಮಾಡಿದ್ದೇ ಮಾಡುವಂಥದ್ದು. ಉದಾ : ಈ ದಿನ ಕಸ ಗುಡಿಸಿದರೆ ನಾಳೆ ಮುಸುರೆ ಸೇರುತ್ತದೆ. ಅಡುಗೆ ಮಾಡಿದರೆ ಮತ್ತು ಅಡುಗೆ ಮಾಡಲೇಬೇಕಾಗುತ್ತದೆ. ಈ

ಕೆಲಸ ಉತ್ಪಾದನೆಯ ದುಡಿಮೆಯಾಗಿರುವುದಿಲ್ಲ. ಈ ವ್ಯವಸ್ಥೆಯ ಸಂಸ್ಕೃತಿಯು ಹೆಣ್ಣಿನ ಮನೆ ಕೆಲಸವನ್ನು ಒಂದು ರೀತಿಯಲ್ಲಿ ಹಾಡಿ ಹೊಗಳಿ ಹೆಣ್ಣಿಗೆ ಅದು ಆದರ್ಶವೆಂತಲೂ, ಅವಳ ತ್ಯಾಗವೆಂತಲೋ ಕರೆದು ಅವರ ದುಡಿಮೆಯನ್ನು ಉತ್ಪ್ರೇಕ್ಷಿಸುತ್ತದೆ.

## ಸ್ತ್ರೀ ವಿಮೋಚನೆಯ ಅರ್ಥ ವಿವರಣೆ

ಲಿಂಗಭೇದ ದುಡಿಮೆಯನ್ನು ಸಂಪೂರ್ಣವಾಗಿ ತೊಡೆದು ಹಾಕುವುದು ಸ್ತ್ರೀ ವಿಮೋಚನೆಯ ಸರಳ ಹಾಗೂ ಸರಿಯಾದ ಕ್ರಮ. ಇದರಲ್ಲಿ ಎರಡು ವಿಚಾರಗಳಿವೆ. ದುಡಿಮೆಯ ಚಟುವಟಿಕೆಗಳಲ್ಲಿ ಮತ್ತು ರಾಜಕೀಯ ಜೀವನದಲ್ಲಿ ಹೆಣ್ಣು ಮುಕ್ತವಾಗಿ ಪೂರ್ಣ ಪ್ರಮಾಣದಲ್ಲಿ ಪಾಲ್ಗೊಳ್ಳುವಂತಿರಬೇಕು. ಆದರೆ ಇದನ್ನು ಸಾಧಿಸಬೇಕಾದರೆ ಹೆಣ್ಣು ಮೊದಲು ಮನೆ ಕೆಲಸದಿಂದ ಬಿಡುಗಡೆ ಹೊಂದಿ, ಮನೆಯ ಹೊರಗಡೆಯಲ್ಲಿ ಉತ್ಪಾದನಾ ಚಟುವಟಿಕೆಗಳಲ್ಲಿ ಭಾಗವಹಿಸುವಂತಹ ವಾತಾವರಣ ನಿರ್ಮಾಣ ವಾಗಬೇಕು. ಅಂದರೆ ಹೆಣ್ಣನ್ನು ಮನೆ ಕೆಲಸದ ಹೊರೆಯಿಂದ, ಮಕ್ಕಳ ಆರೈಕೆಯ ಹೊರೆಯಿಂದ ಬಿಡುಗಡೆಗೊಳಿಸಬೇಕು. ಈ ಕಾರ್ಯಗಳನ್ನು ವಿವಿಧ ಹಂತಗಳಲ್ಲಿ ಜಾರಿಗೆಗೊಳಿಸಬಹುದು. ಹೆಣ್ಣಿನ ಕೆಲಸವನ್ನು ಸಮಾಜೀಕರಿಸುವುದು, ಸಾಮೂಹಿಕ ಮಕ್ಕಳ ಆರೈಕೆ ಕೇಂದ್ರ ಸ್ಥಾಪಿಸುವುದು, ಸಾಮೂಹಿಕ ಮತದ ಕೇಂದ್ರಗಳು ಮನೆಕೆಲಸಗಳನ್ನು ಯಾಂತ್ರೀಕರಿಸುವುದು ಮುಂತಾದ ಕ್ರಮಗಳಿಂದ ಸ್ವಲ್ಪ ಮಟ್ಟಿಗೆ ಸಾಧ್ಯವಿದೆ. ಜೊತೆಗೆ ಮನೆಕೆಲಸ ಮತ್ತು ಮಕ್ಕಳ ಪೋಷಣೆಯ ಕೆಲಸದಲ್ಲಿ ಗಂಡಸರೂ ಭಾಗವಹಿಸುವುದೂ ಮುಖ್ಯವಾಗಿರುತ್ತದೆ.

## ಸ್ತ್ರೀಯರ ಸಾಂಘಿಕ ಪ್ರವೃತ್ತಿಗಳಲ್ಲಿ ಇಡಬೇಕಾದ ತಾತ್ವಿಕ ನೆಲೆಗಳು

ಸದ್ಯದ ಪರಿಸ್ಥಿತಿಯಲ್ಲಿ ಹೆಣ್ಣಿನ ಮತ್ತು ಗಂಡಿನ ಹಿತಗಳ ಮಧ್ಯ ವಿರೋಧವಿರುವುದರಿಂದ ಹೆಣ್ಣು ತನ್ನ ಹಿತಾಸಕ್ತಿ ಕಾಪಾಡಲು ತಾನೇ ಸಾಂಘಿಕ ಪ್ರವೃತ್ತಿಯಲ್ಲಿ ತೊಡಗುವುದು ಅವಶ್ಯಕವಾಗಿರುತ್ತದೆ. ಹೆಚ್ಚೆಚ್ಚು ಮಹಿಳೆಯರು ಭಾಗವಹಿಸುವ ಸಾಂಘಿಕ ಚಟುವಟಿಕೆಗಳು ಆರಂಭವಾಗುವುದು ಸೂಕ್ತವಾಗಿದೆ. ಯಾರ್ಯಾರು ಸ್ತ್ರೀಯರ ನೋವು, ಸಮಸ್ಯೆಗಳಿಗೆ ಸಹಕರಿಸುತ್ತಾರೋ ಅವರೆಲ್ಲರ ಬೆಂಬಲ ಪಡೆಯುವುದು ಸೂಕ್ತವೆನಿಸುತ್ತದೆ. ಕಾರ್ಮಿಕ ರೈತರ ಮಹಿಳೆಯರು ಹೆಣ್ಣಾಗಿರುವುದರಿಂದಲೇ ತುಳಿತಕ್ಕೆ ಒಳಗಾಗಿರುವ ಇಡೀ ಸ್ತ್ರೀ ಸಮುದಾಯದ ಅವಶ್ಯಕತೆಗಳನ್ನು ಇಂಥಹ ಸ್ತ್ರೀ ಸಂಘಟನೆಗಳು ಗಮನಿಸಬೇಕು. ಹಾಗೆಂದ ಮಾತ್ರಕ್ಕೆ ಸ್ತ್ರೀ ಸಮುದಾಯಗಳಲ್ಲಿ ವಿವಿಧ ಹಿತಾಸಕ್ತಿಗಳಿವೆ ಎನ್ನುವ ವಿಚಾರವನ್ನು ಮರೆಯಬಾರದು. ಮಧ್ಯಮವರ್ಗದ, ದಲಿತ ಹೆಣ್ಣು, ಕೂಲಿಗಾರ ಹೆಣ್ಣಿಗಿಂತ ಬೇರೆ ರೀತಿಯಲ್ಲಿ ಶೋಷಣೆಗೆ ಒಳಗಾಗಿರ ಬಹುದು. ಕಾರ್ಮಿಕ ಹೆಣ್ಣಿಗಿಂತ ಮನೆ ಕೆಲಸ ಮಾಡಿಕೊಂಡಿರುವ ಹೆಣ್ಣು ಹೆಚ್ಚು ಶೋಷಣೆಗೆ ಒಳಗಾಗಿರಬಹುದು. ಸ್ತ್ರೀ ಅಥವಾ ಮಹಿಳಾ ಸಂಘಗಳು ಈ ಎಲ್ಲಾ ವಿಚಾರಗಳನ್ನು, ಪ್ರಭೇದಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ.

ದಲಿತ, ಹಿಂದುಳಿದ, ಮನೆಕೆಲಸದ ಹೆಣ್ಣು ಬೇರೆ ಮಹಿಳೆಯರಿಗಿಂತಲೂ ಹೆಚ್ಚು ಶೋಷಣೆಗೆ ಒಳಗಾಗಿರುವುದರಿಂದ ಆಕೆ ಇತರರಿಗಿಂತಲೂ ಹೆಚ್ಚು ಸಾಮೂಹಿಕ ಶಿಸ್ತು, ಹೋರಾಟದಲ್ಲಿ ನಂಬಿಕೆ ಇದ್ದು, ಚಳುವಳಿಯಲ್ಲಿ ನಿಷ್ಠೆಯಿಂದ ಮತ್ತು ಉತ್ಸಾಹದಿಂದ ಪಾಲ್ಗೊಳ್ಳುತ್ತಾಳೆ. ಸಮಯ ಬಂದರೆ ಇಂಥಹ ಚಳುವಳಿಯ ನೇತೃತ್ವವನ್ನು ಹೊಂದಲು ಸಾಮರ್ಥ್ಯ ಉಳ್ಳವರಾಗಿರುತ್ತಾರೆ. ಇದರ ಜೊತೆಗೆ, ರೈತರ ಮಹಿಳೆ, ಕೃಷಿ ಕೂಲಿಕಾರ ಮಹಿಳೆ, ಕೆಳಜಾತಿಯ ಬುಡಕಟ್ಟು ಸಮುದಾಯದಲ್ಲಿದ್ದ ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಯ ಸಂಸ್ಕೃತಿ ಉಳಿದಿರುತ್ತದೆ. ಕೂಲಿಗಾರ, ಕೆಳಜಾತಿಯ, ಬುಡಕಟ್ಟು ಮಹಿಳೆಯರು ತಮ್ಮ ಸಮಸ್ಯೆಗಳ ಬಗ್ಗೆ ತಿಳಿಯಲು, ವಿಶ್ಲೇಷಿಸಲು ಸಮರ್ಥರಾಗುವಂತೆ ಮಾಡಲು ವಿದ್ಯಾವಂತ ಮಹಿಳೆಯರು ವಿಶೇಷ ಪ್ರಯತ್ನ ಮಾಡುವುದು ಸೂಕ್ತವಾಗಿರುತ್ತದೆ.

ಮಹಿಳೆಯರನ್ನು ಸ್ವಾತಂತ್ರ್ಯ ನಂತರದಲ್ಲಿಯೂ ಅವರ ಮೂಲಭೂತ ಅವಶ್ಯಕತೆಗಳಿಗಾಗಿ ಅವರೇ ಧ್ವನಿ ಎತ್ತಬೇಕಾಗಿರುವುದು ವಿಚಿತ್ರವಾದರೂ ಅದು ಅನಿವಾರ್ಯವಾಗಿದೆ. ಮಹಿಳೆಯರನ್ನು ಅವರ ಅವಶ್ಯಕತೆ ಮತ್ತು ಸಮಸ್ಯೆಗಳ ಆಧಾರದ ಮೇಲೆ ಸಂಘಟಿಸುವ ಅವಶ್ಯಕತೆ ಇದೆ. ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನಲ್ಲಿಯೂ ಪ್ರತಿಯೊಂದು ಕ್ಷೇತ್ರದಲ್ಲಿ ಲಿಂಗಬೇಧದ ಶೋಷಣೆ ನಡೆಯುತ್ತಿದೆ. ಪುರುಷರಷ್ಟೇ ದುಡಿಮೆ ಮಾಡಲು ಮಹಿಳೆಯರು ಎಲ್ಲಾ ರೀತಿಯಲ್ಲಿ ಸಮರ್ಥರಿದ್ದರೂ ಅವರಿಗೆ ತಾರಾತಮ್ಯ ಮಾಡಲಾಗುತ್ತಿದೆ. ಅವರ ಶ್ರಮಕ್ಕೆ ಸೂಕ್ತ ಪ್ರತಿಫಲಗಳಿಲ್ಲ. ಗಂಡಿನ ದಬ್ಬಾಳಿಕೆ, ದೌರ್ಜನ್ಯದಿಂದ ತಾಲೂಕಿನ ಮಹಿಳೆಯರ ಮೇಲೆ ನಿರಂತರ ದಾಳಿ ನಡೆಯುತ್ತಿದೆ. ಈವರೆಗೂ ನಡೆದ ಸಾಂಘಿಕ ಚಳುವಳಿಗಳಿಂದಾದ ಪರಿಣಾಮಗಳ ಬಗ್ಗೆ ವಿವರವಾಗಿ ಪರಿಶೀಲಿಸುವ ಅವಶ್ಯಕತೆ ಇದೆ. ಮೇಲೆ ತಿಳಿಸಿರುವ ತಾತ್ವಿಕ ಪ್ರಶ್ನೆಯನ್ನು ಅನ್ವಯಿಸಿ ಸಾಂಘಿಕ ಯತ್ನಗಳನ್ನು ಗಮನಿಸಬೇಕಾಗಿರುತ್ತದೆ.

## ದೇವದಾಸಿ ಪದ್ಧತಿ

ಹೊಸಪೇಟೆ ತಾಲೂಕಿನ ಸಾಮಾಜಿಕ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿರುವ ಪದ್ಧತಿಯೆಂದರೆ ದೇವದಾಸಿ ಪದ್ಧತಿ ದೇವದಾಸಿಯರನ್ನು ವೇಶ್ಯೆಯರು, ಬಸವಿಯರು ಎಂದೂ ಹೇಳುವುದಿದೆ. ದೇವರಿಗೆ ಬಿಡುವುದೆಂದು ''ಪಾರಂಪರಿಕವಾಗಿ ದೇವದಾಸಿ ಪದ್ಧತಿಯನ್ನು ಹೇಳಲಾಗುತ್ತದೆ. ದೇವದಾಸಿಯರೆಂದರೆ ದೇವಾಲಯಗಳಲ್ಲಿ ದೇವರ ಹೆಸರಿನಲ್ಲಿ ಸಮರ್ಪಿಸಿಕೊಂಡಿರುವ ನೃತ್ಯ ಮತ್ತು ಸಂಗೀತ ಸೇವೆ ಮಾಡುವ ಸ್ತ್ರೀಯರಾಗಿದ್ದರು. ಮೊದಮೊದಲು ಉನ್ನತ ಆದರ್ಶ ಗೌರವ ಇತ್ತು. ಸಾಂಪ್ರದಾಯಿಕ ದೇವದಾಸಿ ಪದ್ಧತಿಯ ೧೯ ಮತ್ತು ೨೦ ನೇ ಶತಮಾನದಲ್ಲಿ ತನ್ನ ಮೂಲ ಸ್ವರೂಪವನ್ನು ಸಂಪೂರ್ಣವಾಗಿ ಕಳೆದುಕೊಂಡು ಬದಲಾವಣೆಗೊಂಡಿತು. ಅವರು ಸಲ್ಲಿಸುವ ಸೇವೆ ಮತ್ತು ಸ್ಥಾನಗಳು ಕೀಳುಮಟ್ಟಕ್ಕಿಳಿದು ಕೊನೆಕೊನೆಗೆ ವೇಶ್ಯೆಯರಾದರೆಂದು ನಮಗೆ ಇತಿಹಾಸ ಹೇಳುತ್ತದೆ. ಇಲ್ಲಿ ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ ದೇವದಾಸಿಯರು ಮತ್ತು ಬಸವಿಯರು ಸಾಮಾನ್ಯವಾಗಿ ಕೆಳ ಜಾತಿಯ ದಲಿತರೇ

ಆಗಿದ್ದರೆಂಬುದು, ಇವರನ್ನು ಬಳಸಿಕೊಳ್ಳುತ್ತಿದ್ದವರು ಊರಿನ ಪಟ್ಟಭದ್ರ ಭೂಮಾಲೀಕರು ಮತ್ತು ಅಧಿಕಾರ ವರ್ಗದವರು. ಕೆಳಜಾತಿಯ ದಲಿತರನ್ನು ಧಾರ್ಮಿಕ ಹಾಗೂ ಮೂಢನಂಬಿಕೆಗಳಿಂದ ಕಟ್ಟಿ ಹಾಕಿ ಇವರು ಈ ಪದ್ಧತಿಯನ್ನು ದೇವರು ನೀಡಿದ ವರವೆಂದು ತಿಳಿದು ಆಚರಿಸುವಂತೆ ಮಾಡಿದ್ದರು. ಇದಕ್ಕೆ ಸಮಾಜದ ಪುರೋಹಿತವರ್ಗದವರ ಸಹಕಾರವೂ ಇತ್ತೆಂಬುದು ಚಾರಿತ್ರಿಕ ಸತ್ಯ.

ಸಾಮಾನ್ಯವಾಗಿ ಒಂದು ಕುಟುಂಬದಲ್ಲಿ ಗಂಡು ಸಂತಾನವೇ ಇಲ್ಲದ ಕೆಳ ಜಾತಿಗಳಲ್ಲಿ ಹೆಣ್ಣು ಮಕ್ಕಳಲ್ಲಿ ಒಬ್ಬರನ್ನು ದೇವರಿಗೆ ಬಿಡಲಾಗುತ್ತಿತ್ತು. ಅದು ಕೆಲವೊಮ್ಮೆ ಆಕೆಗೆ ಬರುವ ಕಾಯಿಲೆ ಮನೆಯವರಿಗೆ ಎದುರಾಗುವ ತೊಂದರೆ, ಆ ಮೂಲಕ ಮಂತ್ರವಾದಿಯೊಬ್ಬನ ಸಲಹೆ ಮುಂತಾದ ಕಾರಣಗಳಿಂದಲೂ ಸಂಭವಿಸಬಹುದು. ದೇವರಿಗೆಂದು ಪ್ರಾಯಕ್ಕೆ ಬರುವ ಹೆಣ್ಣು ಮಕ್ಕಳನ್ನೇ ಬಿಡುವ ಪದ್ಧತಿ ಇದೆ. ಹುಲಿಗೆಮ್ಮ, ಎಲ್ಲಮ್ಮ, ಉಚ್ಚಂಗೆಮ್ಮ ಮತ್ತು ಆಂಜನೇಯ ಸ್ವಾಮಿಗೂ ಬಿಡುವ ಕ್ರಮ ಇದೆ. ಹಾಗೆ ಬಿಟ್ಟ ಹುಡುಗಿ ಮದುವೆಯಾಗುವಂತಿಲ್ಲ. ಆಕೆ ಮನೆತನಕ್ಕೆ ಗಂಡು ಇದ್ದ ಹಾಗೆ. ಆಕೆ ದಿನನಿತ್ಯ ತನಗೆ ಇಷ್ಟ ಇದ್ದವರೊಂದಿಗೆ ದೈಹಿಕ ಸಂಬಂಧವಿಟ್ಟುಕೊಳ್ಳಬಹುದು. ಋತುಮತಿಯಾಗುವ ಮುಂಚೆಯೇ ದೇವರಿಗೆ ಬಿಡುವ ಈ ಹುಡುಗಿಗೆ ಪ್ರಾಯಕ್ಕೆ ಒಂದು ವಿಶಿಷ್ಟ ಆಚರಣೆಯನ್ನು ಮಾಡಲಾಗುತ್ತದೆ. ಮೈನೆರೆತಾಗ ಇತರೆ ಕಾರ್ಯಕ್ರಮಗಳನ್ನು ಮಾಡಿದ ಮೇಲೆ ಪುರುಷನೊಬ್ಬ ಆಕೆಯನ್ನು ಕೂಡುತ್ತಾನೆ. ಇದನ್ನು ಹೆಣ್ಣು ಮಾಡುವುದು ಎನ್ನಲಾಗುತ್ತದೆ. ಹೆಣ್ಣು ಮಾಡುವುದಕ್ಕೆ ಸಹಕರಿಸಿದ ಹುಡುಗನು ಆಕೆಗೆ ಬೇಕಾಗುವ ಸೀರೆ, ಕುಬಸ, ದಕ್ಷಿಣೆ ಕೊಡಬೇಕಾಗುತ್ತದೆ. ದೇವದಾಸಿಯರಿಗೆ ಸಾಮಾಜಿಕವಾಗಿ ಸ್ಥಾನಮಾನಗಳಿವೆ. ಯಾವುದಾದರೂ ಮಂಗಳ ಕಾರ್ಯಕ್ರಮಗಳಾಗುವಾಗ ದೇವದಾಸಿಯರು ಅಗತ್ಯವಾಗಿ ಬೇಕಾಗುತ್ತದೆ. ಗಂಗಮ್ಮನ ಮಾಡುವಾಗ, ದೇವರು ಮಾಡುವಾಗ, ಸ್ತ್ರೀ ಕಾರ್ಯ ಕ್ರಮಗಳಲ್ಲಿ ಮೆರವಣಿಗೆಯ ಮುಂದೆ ಕಲಶ ಹಿಡಿದು ಶೃಂಗರಿಸಿಕೊಂಡ ಮುತ್ತೈದೆಯೊಬ್ಬಳು ಇರುತ್ತಾಳೆ. ಸಾಮಾನ್ಯವಾಗಿ ಈಕೆ ದೇವದಾಸಿಯೇ ಆಗಿರುತ್ತಾಳೆ. ಆದರೆ ಈ ಸ್ಥಾನಮಾನ ಎಲ್ಲಾ ದೇವದಾಸಿಯರಿಗೆ ಇರುವುದಿಲ್ಲ.

ದೇವದಾಸಿಯರಲ್ಲಿಯೂ ಜಾತಿವಾರು ವ್ಯತ್ಯಾಸಗಳಿವೆ. ತಾಲೂಕಿನಲ್ಲಿ ನಾಯಕರು, ಕುರುಬರು, ಕಬ್ಬೇರರು, ಬೋವಿಗಳಲ್ಲಿ ಈ ಪದ್ಧತಿ ಹೆಚ್ಚಿದೆ. ಅದರಲ್ಲಿ ಅತ್ಯಧಿಕ ಪ್ರಮಾಣದಲ್ಲಿ ನಾಯಕರು ಮತ್ತು ಹರಿಜನರಲ್ಲಿ ಈ ಪದ್ಧತಿ ಹೆಚ್ಚು ರೂಢಿಯಲ್ಲಿದೆ. ತಾಲೂಕಿನಲ್ಲಿ ಕುರುಬರು, ಬೋವಿಗಳು, ನಾಯಕರು ಯಾರು ಇಲ್ಲದಿದ್ದರೆ ಹರಿಜನ ದೇವದಾಸಿಯಾರಾದರೂ ಇರುತ್ತಾರೆ. ಈ ಹರಿಜನ ದೇವದಾಸಿಯರಿಗೆ ಅವರ ಜಾತಿಯಲ್ಲಿ ಮಾತ್ರ ಗೌರವವಿದೆ. ಹರಿಜನ ದೇವದಾಸಿಯರನ್ನು ಹೆಣ್ಣು ಮಾಡುವವರು ಹರಿಜನರೇ. ಇವರು ಹರಿಜನರಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಕಳಶ ಹಿಡಿಯುತ್ತಾರೆಯೇ ಹೊರತು ಬೇರೆ ಸಾಮಾಜಿಕವಾದ ಆಚರಣೆಗಳಲ್ಲಿ ಹಿಡಿಯುವುದಿಲ್ಲ. ಕೆಲವೊಂದು ಗ್ರಾಮ ದೇವತೆಯ ಜಾತ್ರೆಯಲ್ಲಿ ಕೋಣನನ್ನು ಬಲಿಕೊಡುವ ಪದ್ದತಿ ಇದೆ. ಹೀಗೆ ಕಡಿದ ಕೋಣವನ್ನು ಅಡಿಗೆ ಮಾಡಿ ಮೊದಲು ದೇವದಾಸಿಯರಿಗೆ ಊಟ ಮಾಡಿಸುವ ಪದ್ಧತಿ ಇದೆ. ಈ ಆಚರಣೆಯಲ್ಲಿ ಇತರೆ ದೇವದಾಸಿಯರಂತೆ

ಹರಿಜನ ದೇವದಾಸಿಯರೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ. ಆದರೆ ಕೋಣನ ಅಡಿಗೆಯನ್ನು ಪಂಕ್ತಿಯಲ್ಲಿ ಕುಳಿತ ಮೇಲ್ಜಾತಿ ಮತ್ತು ಕೆಳಜಾತಿಯ ದೇವದಾಸಿಯರಿಗೂ ಬಡಿಸಲಾಗುತ್ತದೆಯಾದರೂ ಊಟ ಮಾಡುವವರು ಹರಿಜನ ದೇವದಾಸಿಯರೇ, ನಂತರ ಉಳಿದ ಜಾತಿಯ ದೇವದಾಸಿಯರು ಸಾಂಕೇತಿಕವಾಗಿ ಇತರೆ ಪದಾಧಿಕಾರಿಗಳ ಬೋಜನ ಮಾಡುತ್ತಾರೆ.

ಇದೇ ರೀತಿ ಜೋಗತಿ ಬಿಡುವ ಸಂಪ್ರದಾಯವೂ ಇದೆ. ಹೆಣ್ಣಿಗೆ ಕೂದಲಿಗೆ ಜಡೆ ಬಂದಲ್ಲಿ ಆಕೆಯನ್ನು ಯಾವುದಾದರೂ ದೇವರ ಹೆಸರಿನಲ್ಲಿ ಜೋಗತಿ ಬಿಡುತ್ತಾರೆ. ಈ ತಾಲೂಕಿನಲ್ಲಿ ಹೆಚ್ಚಾಗಿ ರೇಣುಕ ಎಲ್ಲಮ್ಮ, ಹುಲಿಗೆಮ್ಮ, ಉಚ್ಚಂಗೆಮ್ಮನವರ ಹೆಸರಿಗೆ ಹೆಚ್ಚಾಗಿ ದೇವರು ಬಿಡುವ ಪದ್ಧತಿ ಇದೆ. ಈ ಜೋಗತಿಯರೂ ಸಹ ದೇವದಾಸಿಯರಂತೆ ಮದುವೆಯಾಗುವಂತಿಲ್ಲ. ಅದೇ ರೀತಿಯಾಗಿ ಗಂಡು ಮಕ್ಕಳಿಗೆ ಜಡೆಬಂದರೆ 'ಜೋಗಪ್ಪ'ನನ್ನಾಗಿ ಮಾಡುತ್ತಾರೆ. ಜೋಗಪ್ಪ ಮತ್ತು ಜೋಗಮ್ಮರು ಪರಸ್ಪರ ಸಂಬಂಧಗಳನ್ನು ಇಟ್ಟುಕೊಳ್ಳಬಹುದಾದರೂ ಅವರು ಮದುವೆಯಾಗುವಂತಿಲ್ಲ. ಜೋಗತಿಯರು ನಿರ್ಧಿಷ್ಟ ದಿನದಂದು ದೇವರ ಹೆಸರಿನಲ್ಲಿ ಭಿಕ್ಷೆ ಎತ್ತುತ್ತಾರೆ. ಇಲ್ಲಿ ಉಲ್ಲೇಖಿಸಬಹುದಾದ ಇನ್ನೊಂದು ಸಂಪ್ರದಾಯವೆಂದರೆ, 'ಗಂಡು ಜೋಗಮ್ಮ' ಸಂಸ್ಕೃತಿ. ಹಿಜುಡಾ, ಚಕ್ಕಾ, ಖೋಜಾ, ನಪುಂಸಕ ಎಂದು ವಿಶಿಷ್ಟವಾಗಿ ಬೇರೆ ಬೇರೆ ಹೆಸರುಗಳಲ್ಲಿ ಇವರನ್ನು ಕರೆಯುತ್ತಾರೆ. ಈ 'ಗಂಡು ಜೋಗಮ್ಮರು' ಸಾಮಾನ್ಯವಾಗಿ ರೇಣುಕಾ ಎಲ್ಲಮ್ಮ, ಹುಲಿಗೆಮ್ಮನಿಗೆ ನಡೆದುಕೊಳ್ಳುತ್ತಾರೆ. ಇವರು ಸ್ತ್ರೀಯರಂತೆ ಉಡುಗೆ, ತೊಡುಗೆ ಧರಿಸಿ ವಾರದ ನಿರ್ಧಿಷ್ಠ ದಿನಗಳಲ್ಲಿ ಭಿಕ್ಷೆ ಎತ್ತುತ್ತಾರೆ. ದೇವರು ಬಂದಾಗ ಈ ರೀತಿ ಗಂಡು ಜೋಗಮ್ಮರಾಗುತ್ತಾರೆ ಎಂಬ ನಂಬಿಕೆಯಿದೆ. ಹೊಸಪೇಟೆ ತಾಲೂಕಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಈ ಗಂಡು ಜೋಗಮ್ಮರಿದ್ದಾರೆ. ರೇಣುಕಾದೇವಿ, ಎಲ್ಲಮ್ಮ, ಉಚ್ಚಂಗೆಮ್ಮ ಸಂಪ್ರದಾಯದ ಹಾಡುಗಳನ್ನು, ಹೆಣ್ಣಿನ ಹಾವಭಾವದ ನೃತ್ಯಗಳನ್ನು ಮಾಡಿ ಜನರನ್ನು ರಂಜಿಸುತ್ತಾ ಭಿಕ್ಷೆ ಎತ್ತುವುದು ಇವರ ಕಾಯಕವಾಗಿರುತ್ತದೆ. ಇವರು ನಿರ್ದಿಷ್ಟ ಜಾತಿಗಳಲ್ಲಿಯೇ ಇದ್ದಾರೆ ಎಂದು ಹೇಳಲಾಗುವುದಿಲ್ಲ. ಮೆಲ್ಜಾತಿಯಲ್ಲಿಯೂ ಇಂಥಹ ಗಂಡ ಜೋಗಮ್ಮಗಳೂ ಇರುವುದು ಕಂಡು ಬಂದಿರುತ್ತದೆ. ಗಂಡು ಜೋಗಮ್ಮಗಳು ಗ್ರಾಮದೇವತೆಗಳೊಂದಿಗೆ ನಿಕಟ ಸಂಬಂಧವಿರುವುದರಿಂದ ಸಾಮಾಜಿಕವಾಗಿ ಅವರದೇ ಆದ ಸ್ಥಾನಮಾನಗಳಿವೆ. ಇವರು ಭಿಕ್ಷೆ ಎತ್ತುವುದನ್ನು ಧಾರ್ಮಿಕವಾಗಿ ಪುರಸ್ಕರಿಸಲಾಗುತ್ತಿದೆ.

ಹೊಸಪೇಟೆ ತಾಲೂಕಿನಲ್ಲಿ ಈ ಅನಿಷ್ಠ ಪದ್ಧತಿಗಳಾದ ದೇವದಾಸಿ, ಜೋಗಮ್ಮ ಮತ್ತು ಗಂಡು ಜೋಗಮ್ಮ ಪದ್ಧತಿಗಳನ್ನು ನಿಲ್ಲಿಸಲು ಹಲವು ಪ್ರತಯ್ನಗಳು ನಡೆದಿರುವುದು ಕಂಡು ಬರುತ್ತದೆ. ಮಹಿಳೆಯರ ಕಲ್ಯಾಣ, ಸಮಾಜ ಶಿಕ್ಷಣ ರಂಗದಲ್ಲಿ ಸೇವೆ ಸಲ್ಲಿಸಲು ೧೯೫೫ ರಲ್ಲಿ ಹೊಸಪೇಟೆಯಲ್ಲಿ ಮಹಿಳಾ ಸಂಘವು ಅಸ್ಥಿತ್ವಕ್ಕೆ ಬಂದು, ಮಕ್ಕಳ ಉದ್ಯಾನವನದಲ್ಲಿ ಮಹಿಳಾ ಸಮಾಜದ ಒಂದು ಕಟ್ಟಡ ನಿರ್ಮಿಸಲಾಗಿತ್ತು. ದಿವಂಗತ ಬಿ. ಎಸ್. ಸತ್ಯನಾರಾಯಣ ಸಿಂಗ್ ರವರು ತಂದೆಯವರಾದ ದಿವಂಗತ ಬಿ. ಎಸ್. ಶಂಕರಸಿಂಗ್ ರವರು ತಮ್ಮ ಧರ್ಮಪತ್ನಿಯವರಾದ ರತ್ನಾಬಾಯಿಯವರ ಹೆಸರಿನಲ್ಲಿ ಒಂದು ನರ್ಸರಿ ಶಾಲೆಯನ್ನು ತೆರೆದರು. ಈ ನರ್ಸರಿ ಶಾಲೆ ರಚನಾತ್ಮಕವಾಗಿ, ಆದರ್ಶವಾಗಿ, ಜನಪ್ರಿಯವಾಗಿ ಕೆಲಸ

ನಿರ್ವಹಿಸಿತು. ಮಹಿಳೆಯರಿಗೆ ಹೊಲಿಗೆಯ, ಕಸೂತಿಯ ಕೆಲಸದ ಬಗ್ಗೆ ತರಬೇತಿ ನೀಡುವಂಥಹ ಕಾರ್ಯಕ್ರಮಗಳನ್ನು ಈ ಮಹಿಳಾ ಸಮಾಜ ನಡೆಸುತ್ತಿತ್ತು. ಈ ಮಹಿಳಾ ಸಮಾಜದ ಅಂದಿನ ಅಧ್ಯಕ್ಷಣಿಯಾದ ಶಾಂತಾ ಬಾಯಿಯವರು ವಿಶೇಷವಾಗಿ ಈ ಕಾರ್ಯಕ್ರಮಗಳನ್ನು ತುಂಬಾ ಮುತುವರ್ಜಿಯಿಂದ ಯಶಸ್ವಿಯಾಗಿ ನಡೆಸುತ್ತಿದ್ದರು. ೧೯೫೭ ರಲ್ಲಿ ದಿವಂಗತ ಗೌರಮ್ಮ ರವರ ಅಧ್ಯಕ್ಷತೆಯಲ್ಲಿ ಸಹಕಾರ ವಸತಿಯಲ್ಲಿ ಸಂಘಟಿತವಾದ ವನಿತಾ ಸಮಾಜವೂ ಮಹಿಳೆಯರ ಮುನ್ನಡೆಗಾಗಿ ಶ್ರಮಿಸಿದ ಮಹಿಳಾ ಸಂಸ್ಥೆಯಾಗಿದೆ. ಹೊಲಿಗೆ, ಗೃಹಕೈಗಾರಿಕೆ, ಸಾಂಸ್ಕೃತಿಕ ಹಾಗೂ ಸಾಹಿತ್ಯ ಚಟುವಟಿಕೆಗಳಿಗೆ ಹೆಚ್ಚಿನ ಒತ್ತನ್ನು ಕೊಟ್ಟು ಮಹಿಳೆಯರನ್ನು ಸ್ವಾವಲಂಬಿಗಳಾಗುವಂತೆ ತರಬೇತಿ ನೀಡುತ್ತಿತ್ತು. ಆಗಿನ ಸಂದರ್ಭದಲ್ಲಿ ಮಹಿಳಾ ಸಮಾಜಗಳು, ವನಿತಾ ಸಮಾಜಗಳು ಮಕ್ಕಳ ಪೋಷಣೆಗಾಗಿ ನರ್ಸರಿ ಶಾಲೆಗಳನ್ನು ತೆರೆಯುವುದು ಸಮಾಜದ ಮಹಿಳೆಯರಿಗೆ ಹೊಲಿಗೆ ತರಬೇತಿ ನೀಡುವುದೂ, ರಾಷ್ಟ್ರೀಯ, ಹಬ್ಬ ಹರಿದಿನಗಳನ್ನು ಯಶಸ್ವಿಯಾಗಿ ನಡೆಸುವುದಕ್ಕಷ್ಟೇ ಈ ಸಮಾಜಗಳು ಶ್ರಮಿಸುತ್ತಿದ್ದವು.

ಸಮಾಜ ಕಲ್ಯಾಣ ಯೋಜನೆಯ ಅಂಗವಾಗಿ ಮಹಿಳಾ ಕಲ್ಯಾಣ ಕಾರ್ಯವನ್ನು ಭುವನೇಶ್ವರಿ ಮಹಿಳಾ ಕಲ್ಯಾಣ ಸಂಘ ೧೯೫೪ ರಿಂದ ೧೯೬೦ ರ ವರೆಗೆ ಕಾರ್ಯ ಚಟುವಟಿಕೆಗಳನ್ನು ಮಾಡಿದೆ. ಇದರ ಪ್ರಮುಖ ನಿಯಂತ್ರಕರಾದ ಶ್ರೀಮತಿ ತ್ರಿವೇಣಿ ಬಾಯಿ ಮುದ್ಲಾಪುರರು ಪ್ರಶಂಸನೀಯ ಕಾರ್ಯಕೈಗೊಂಡಿದ್ದರು. ಹೊಸಪೇಟೆ ತಾಲೂಕಿನಲ್ಲಿ ಸುಮಾರು ೩೦ ರಿಂದ ೩೫ ಹಳ್ಳಿಗಳಲ್ಲಿ ೧೦ ಕೇಂದ್ರಗಳನ್ನು ಸ್ಥಾಪಿಸಲಾಗಿತ್ತು. ಪ್ರತಿಕೇಂದ್ರದಲ್ಲಿ ಸೂಲಗಿತ್ತಿಯರನ್ನು ನೇಮಿಸಲಾಗಿತ್ತು. ಆ ಸೂಲಗಿತ್ತಿಯರಿಂದ ತಿಂಗಳಲ್ಲಿ ಕನಿಷ್ಠ ೮-೧೦ ಗರ್ಭಿಣಿಯರು ಈ ಕೇಂದ್ರಗಳ ಸಹಾಯದಿಂದ ಹೆರಿಗೆಯ ಸೌಲಭ್ಯ ಪಡೆಯುತ್ತಿದ್ದರು. ಪ್ರತಿ ಕೇಂದ್ರಕ್ಕೆ ಹೊಂದಿಕೊಂಡಂತೆ ಬಾಲವಾಡಿ ಕೇಂದ್ರಗಳನ್ನು ತೆರೆಯಲಾಗಿತ್ತು. ಬಾಲವಾಡಿ ಕೇಂದ್ರಗಳಲ್ಲಿ ೩೦ ರಿಂದ ೪೦ ಮಕ್ಕಳೂ ಪೋಷಣೆ ಪಡೆಯುತ್ತಿದ್ದರಲ್ಲದೆ, ಅದೇ ಬಾಲವಾಡಿ ಕೇಂದ್ರಗಳಲ್ಲಿ ೧೦-೧೨ ಮಹಿಳೆಯರಿಗೆ ಹೊಲಿಗೆ ತರಬೇತಿ, ಕಸೂತಿ ಹಾಕುವುದು, ಗೃಹಕೈಗಾರಿಕೆಯಂಥಹ ವೃತ್ತಿ ತರಬೇತಿಗಳನ್ನು ನೀಡುವ ಮೂಲಕ ಮಹಿಳೆಯರು ತಮ್ಮ ಜೀವನಕ್ಕೆ ತಾವೂ ಆರ್ಥಿಕವಾಗಿ ದುಡಿಯಲು ತರಬೇತಿ ನೀಡಲಾಗುತ್ತಿತ್ತು. ಅಲ್ಲದೆ ಬಾಲವಾಡಿ ಕೇಂದ್ರಗಳಲ್ಲಿ ಪ್ರಥಮ ಚಿಕಿತ್ಸೆಯ ಔಷಧಗಳನ್ನು ಉಚಿತವಾಗಿ ಹಂಚಲಾಗುತ್ತಿತ್ತು. ಕೇಂದ್ರಗಳ ಮುಖಾಂತರ ಅರಿಸಿಕೇರಿಯಲ್ಲಿದ್ದ ಕಸ್ತೂರ್ ಬಾ ತರಬೇತಿ ಕೇಂದ್ರಕ್ಕೆ ಮಹಿಳೆಯರನ್ನು ಆಯ್ಕೆ ಮಾಡಿ ಕಳಿಸಲಾಗುತ್ತಿತ್ತು.

ಆವತ್ತಿನ ಸಂದರ್ಭದಲ್ಲಿಯೇ ಹೊಸಪೇಟೆ ತಾಲೂಕಿನ ಮಹಿಳೆಯರು ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಮುಂದಾಳುವಾಗಿ ವಿನೂತನ ಪರಂಪರೆಯನ್ನು ಮುಂದುವರೆಸಿದ ಡಾ॥ ಆರ್. ನಾಗನಗೌಡ ರವರ ಧರ್ಮಪತ್ನಿ ಡಾ॥ ಸಾವಿತ್ರಿ ಬಾಯಿ ಯವರು ಅವರನ್ನು ಅಖಿಲ ಕರ್ನಾಟಕ ಮಹಿಳಾ ಸಮ್ಮೇಳನದ ಅಧ್ಯಕ್ಷೆಯಾಗಿ ಆರಿಸಿ ಗೌರವಿಸಲಾಗಿತ್ತು. ವಿವಿಧ ರಂಗಗಳಲ್ಲಿ ಸಾಹಸಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಅದೇ ರೀತಿಯಾಗಿ ತ್ರಿವೇಣಿ ಬಾಯಿಯವರು, ಡಾ॥ ಶಾಂತಾಬಾಯಿ ಬೂದಿಹಾಳರು, ಹನುಮಾಬಾಯಿ, ಎಂ.

ಎಲ್. ಎ ಆಗಿ ಆಯ್ಕೆಯಾಗಿ ಸೇವೆ ಮಾಡಿದ್ದ ಕಮಲಮ್ಮ ಶ್ರೀ ರಾಮುಲು ರವರು, ಶ್ರೀಮತಿ ಎ.ಕೆ. ಪ್ರಸಾದ್ ರವರು, ಮೀನಾಕ್ಷಿ ಯವರು ಇವರೆಲ್ಲಾ ಬಹುಮುಖ ಪ್ರತಿಭೆಯುಳ್ಳವರಾಗಿದ್ದು, ಸಮಾಜ ಸೇವೆ ಮಾಡಿರುವವರಲ್ಲಿ ಪ್ರಮುಖರು.

## ಅಸಂಘಟಿತ ಕ್ಷೇತ್ರ

ಸಮಾನವೇತನ, ಉದ್ಯೋಗದ ಭದ್ರತೆ, ಸಂಘಟನಾತ್ಮಕ ಹೋರಾಟಕ್ಕೆ ಅನುವು ಇತ್ಯಾದಿ ಹಲವಾರು ಅನುಕೂಲತೆಗಳನ್ನು ಹೊಂದಿರುವ ಸಂಘಟಿತ ಕ್ಷೇತ್ರದ ಮಹಿಳೆಯ ಸಮಸ್ಯೆಯೇ ನೂರಾರಿವೆ ಎನ್ನುವಾಗ ಅಸಂಘಟಿತ ಕ್ಷೇತ್ರದ ಸಮಸ್ಯೆಯನ್ನು ತುದಿ ಮೊದಲಿಲ್ಲದ ವಿಷವರ್ತುಲವಾಗಿ ಗುರುತಿಸಬೇಕಾಗುತ್ತದೆ. ನಾಗರೀಕತೆಯ ಆರಂಭದಿಂದಲೂ ಬೇಟೆಗಾರಿಕೆ, ಪಶುಪಾಲನೆ, ವ್ಯವಸಾಯ, ಗುಡಿ ಕೈಗಾರಿಕೆ ಇತ್ಯಾದಿ ಎಲ್ಲಾ ಕ್ಷೇತ್ರಗಳಲ್ಲಿ ಮಹಿಳೆ ತನ್ನನ್ನು ತೊಡಗಿಸಿಕೊಂಡಿದ್ದರು. ಪುರುಷ ಪ್ರಧಾನತೆಯು ತನ್ನ ಅನುಕೂಲಕ್ಕನುಗುಣವಾಗಿ ಅವುಗಳನ್ನು ಗುರುತಿಸಿಕೊಂಡಿದೆ. ಪಿತೃಪ್ರಧಾನ ಕುಟುಂಬ ರಚನೆಯ ಊರ್ಜಿತಕ್ಕಾಗಿ ಅವಳನ್ನು ಕುಟುಂಬ ಬದ್ಧಳಾಗಿಸುವ ಮೂಲಕ ಹಲವು ಕ್ಷೇತ್ರಗಳಿಂದ ಹಿಂತಿರುಗುವ ಏರ್ಪಾಡು ಮಾಡಿದರೆ, ಇನ್ನೊಂದೆಡೆಗೆ ಕುಟುಂಬದೊಳಗೆ ಅವಳನ್ನು ಲಿಂಗ ಪೂರ್ವಾಗ್ರಹದಿಂದ ದುಡಿಮೆಗೆ ಹಚ್ಚಲಾಗಿದೆ. ಪಶುಸಂಗೋಪನೆ, ವ್ಯವಸಾಯ, ಗುಡಿಕೈಗಾರಿಕೆಗಳಲ್ಲಿ ಅವಳನ್ನು ಯಥೇಚ್ಚವಾಗಿ ಬಳಸಿಕೊಂಡೂ ಅವುಗಳ ಮೇಲಿನ ಹಕ್ಕನ್ನು ನಿರಾಕರಿಸಲಾಗಿದೆ. ಅವುಗಳಲ್ಲಿ ಏರ್ಪಡುವ ಆರ್ಥಿಕ ಚಟುವಟಿಕೆಗಳ ಒಡೆತನದಿಂದ ಅವಳನ್ನು ದೂರವಿರಿಸಲಾಗಿದೆ. ಈ ಕ್ಷೇತ್ರದಲ್ಲಿ ಅವಳು ನಿರಂತರ ದುಡಿಯುತ್ತಿದ್ದರೂ ಅದು ಲಿಂಗ ತಾರತಮ್ಯದ ಶ್ರಮ ವಿಭಜನೆಯನ್ನು ಆಧರಿಸುವಂತಾಗಿದೆ.

ಆಧುನಿಕ ಸಂದರ್ಭದಲ್ಲಿ ಏರ್ಪಟ್ಟ ಕೈಗಾರಿಕೀಕರಣ, ನಾಗರೀಕರಣ ಹಾಗೂ ಶಿಕ್ಷಣಾಧಾರಿತ ಉದ್ಯೋಗಾವಕಾಶಗಳು ಸಾಂಪ್ರದಾಯಿಕ ಉದ್ಯೋಗಾವಕಾಶಗಳನ್ನು ಮೂಲೆ ಗುಂಪಾಗಿಸಿದವು. ಇದರ ಪರಿಣಾಮವಾಗಿ ಒಟ್ಟಾರೆಯಾಗಿಯೇ ಸಮಾಜದ ಬಹುಪಾಲು ಉದ್ಯೋಗ ಕ್ಷೇತ್ರಗಳು ಅತಂತ್ರಗೊಂಡವು. ಹಾಗೂ ಅವುಗಳೆಲ್ಲದರ ಪರಿಣಾಮ ಅಂತಿಮವಾಗಿ ಮಹಿಳೆಯ ಮೇಲೆ ಬಿತ್ತು. ಸಾಂಪ್ರದಾಯಿಕ ಉದ್ಯೋಗ ಸ್ಥಳಗಳ ಲಿಂಗ ಪೂರ್ವಾಗ್ರಹ ಮತ್ತೂ ಹೆಚ್ಚಿತು. ಕೃಷಿ, ಹೈನುಗಾರಿಕೆ, ಗುಡಿ ಕೈಗಾರಿಕೆಗಳು, ಅವಸಾನದ ಬಿಕ್ಕಟ್ಟುಗಳಿಗೆ ಗುರಿಯಾದುದರಿಂದ ಅಲ್ಲಿನ ಮಹಿಳಾ ಶೋಷಣೆ ದ್ವಿಗುಣವಾಯಿತು. ಇದಲ್ಲದೆ ಆಧುನಿಕ ಸಮಾಜದ ಅಗತ್ಯವಾಗಿ ಹುಟ್ಟಿಕೊಂಡ ಹಲವಾರು ಪೂರಕ ಕ್ಷೇತ್ರಗಳು ಬೀಡಿ, ಸಿಗರೇಟ್, ಗಣಿಗಾರಿಕೆ ಇತ್ಯಾದಿಗಳು ಹೆಚ್ಚಿನ ವಹಿವಾಟನ್ನು ನಡೆಸುತ್ತಿದ್ದರೂ, ಅವು ಅಸಂಘಟಿತ ಸ್ವರೂಪದಲ್ಲೇ ಉಳಿದವು. ಹೆಚ್ಚಿಣ ಶಿಕ್ಷಣ, ತರಬೇತಿ ಹೊಂದಿಲ್ಲದ ಕೂಲಿ, ಕಾರ್ಮಿಕರಾಗಿ ದುಡಿಯುವ ಇಲ್ಲಿನ ಮಹಿಳೆಯರು ಗ್ರಾಮಗಳಿಗಿಂತ ಕಡಿಮೆಯಾದ ಕೊಳಗೇರಿಗಳ ಪ್ರಜೆಗಳಾಗ ಬೇಕಾಯಿತು. ಹೆಚ್ಚಿನ ದುಡಿಮೆ, ಕಡಿಮೆ

ಕೂಲಿ, ಅನಾರೋಗ್ಯಕರ ಕೆಲಸದ ವಾತಾವರಣ, ನಿರ್ಲಕ್ಷ್ಯಕ್ಕೊಳಗಾದ ಕೌಟುಂಬಿಕ ಬದುಕು ಇವರನ್ನು ಧಾರುಣವಾಗಿಸಿತು. ಇಂತಹ ಅಸಹಾಯಕ ಸ್ಥಿತಿಯಲ್ಲಿ ವಿಪರೀತವಾದವು. ಕುಡಿದಂತಹ ದುಶ್ಚಟಗಳಿಗೆ ಬಲಿಯಾದ ಗಂಡಂದಿರ ಹೊಡೆತ ಇವರ ದಿನನಿತ್ಯದ ಆಹಾರವಾಯಿತು.

ಇತಿಹಾಸದ ಹಲವಾರು ಉದಾಹರಣೆಗಳು ಇಂತಹ ದುರ್ಬಲ ಬದುಕಿಗೊಳಗಾದ ರೈತರ, ಕೂಲಿಕಾರರ ದಂಗೆಯನ್ನು ದಾಖಲಿಸುತ್ತವೆಯಾದರೂ, ಅವುಗಳಿಗೆ ನಿರಂತರ ಕೊಂಡಿಯೊಂದನ್ನು ಜೋಡಿಸುವುದು ಕಷ್ಟ ಸಾಧ್ಯ. ಬಹುಪಾಲು ಇವೆಲ್ಲವುಗಳು ಪ್ರತ್ಯೇಕ ಹೋರಾಟಗಳಾಗಿಯೇ ನಿಲ್ಲುತ್ತವೆ. ಈ ಹೋರಾಟಗಳಲ್ಲಿ ಮಹಿಳೆಯರು ಪಾಲ್ಗೊಂಡರೂ ಅವುಗಳನ್ನು ಪ್ರಜ್ಞಾ ಪೂರ್ವಕವಾದ ಮಹಿಳಾ ಹೋರಾಟಗಳಾಗಿ ಕಟ್ಟಿಕೊಳ್ಳುವುದಕ್ಕೆ ಹಲವಾರು ತೊಡಕುಗಳಿವೆ. ಈ ಬಗೆಯ ತೊಡಕುಗಳು ಈ ಹೊತ್ತಿನ ಅಸಂಘಟಿತ ಕ್ಷೇತ್ರದ ಹೋರಾಟಗಳಲ್ಲಿನ ಮಹಿಳೆಯರು ಭಾಗವಹಿಸುವಿಕೆಯ ಸಂದರ್ಭದಲ್ಲಿ ಕೂಡ ತಲೆದೋರುತ್ತವೆ.

## ಹೊಸಪೇಟೆ ತಾಲೂಕಿನಲ್ಲಿ ಅಂಗನವಾಡಿ ನೌಕರರ ಸಂಘಟನೆ

ಹೊಸಪೇಟೆ ತಾಲೂಕಿನಲ್ಲಿ ೧೯೯೦ ರಲ್ಲಿ ಅಂಗನವಾಡಿ ನೌಕರರ ಸಂಘಟನೆ ಆರಂಭವಾಯಿತು. ಎಡಪಂಥೀಯ ಚಳುವಳಿಯ ಮುಂಚೂಣಿ ನಾಯಕರ ಪ್ರಯತ್ನದ ಫಲವಾಗಿ ಈ ಸಂಘಟನೆ ಜನ್ಮ ತಾಳಿತೆಂದು ಹೇಳಿದರೆ ತಪ್ಪಾಗಲಾರದು. ಪ್ರಾರಂಭದಲ್ಲಿ ಈ ಸಂಘಟನೆ ಅಂಗನವಾಡಿ ಕೇಂದ್ರಗಳಲ್ಲಿ ಮೂಲಭೂತ ಸೌಕರ್ಯಗಳ ಸುಧಾರಣೆಗೆ ಶ್ರಮಿಸಿತು. ಸಕಾಲಿಕವಾಗಿ ಈ ಕೇಂದ್ರಗಳಿಗೆ ಐ.ಸಿ.ಡಿ. ಎಸ್. (ಕೇಂದ್ರ ಸರಕಾರದ ಬಾಲ ವಿಕಾಸ ಯೋಜನೆ) ಯೋಜನೆ ಅಡಿಯಲ್ಲಿ ಆಹಾರ ಪೂರೈಕೆ ಮಾಡುವುದು, ಸರಿಯಾದ ನೀರಿನ ವ್ಯವಸ್ಥೆ, ಪಾತ್ರೆ, ಸೌದೆಗಳ ಸೂಕ್ತ ವ್ಯವಸ್ಥೆ ಮೊದಲಾದ ಅಂಗನವಾಡಿ ಕೇಂದ್ರಗಳ ಅಗತ್ಯಗಳಿಗಾಗಿ ಅಂಗನವಾಡಿ ನೌಕರರು ಸಂಘಟಿತ ಪ್ರಯತ್ನ ಮಾಡಿದರು. ೧೯೯೪ ರವರೆಗೂ ಈ ಸಂಘಟನೆ ಕೇವಲ ಪ್ರಾದೇಶಿಕ ಸ್ವರೂಪವನ್ನು ಪಡೆದಿತ್ತು. ಅಂಗನವಾಡಿ ನೌಕರರಿಗೆ ನೇರವಾಗಿ ಸಂಬಂಧಪಟ್ಟ ಸೌಲಭ್ಯಗಳನ್ನು ಪಡೆಯಲು ರಾಜ್ಯಮಟ್ಟದ ಸಂಘಟನೆಯ ಅವಶ್ಯಕತೆ ಕಂಡು ಬಂದಿದ್ದರಿಂದ, ರಾಜ್ಯಮಟ್ಟದ ಕಾರ್ಮಿಕ ಸಂಘಟನೆ ಸಿ. ಐ. ಟಿ.ಯು ನೇತೃತ್ವದಲ್ಲಿ ರಾಜ್ಯಮಟ್ಟದ ಅಂಗನವಾಡಿ ನೌಕರರ ಮತ್ತು ಸಹಾಯಕರ ಸಂಘಟನೆಯನ್ನು ರಚಿಸಲಾಯಿತು.

ಸರಕಾರದ ಸಾಕ್ಷರತಾ ಆಂದೋಲನದ ಪ್ರಯುಕ್ತ ಹಮ್ಮಿಕೊಂಡ ಸಾಕ್ಷರತಾ ಕಾರ್ಯಕ್ರಮದಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ಅಂಗನವಾಡಿ ನೌಕರರ ಸಂಘಟನೆ ನಿರ್ವಹಿಸಿದೆ. ಹಲವು ಭಾರಿ ಸಾಕ್ಷರತಾ ಆಂದೋಲನ ಜಾಥಾಗಳಲ್ಲಿ ಈ ಸಂಘಟನೆ ಭಾಗವಹಿಸಿ, ಅಕ್ಷರ ಜಾಗೃತಿ ಮೂಡಿಸಲು ಶ್ರಮಿಸಿದೆ. ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಅಂಗನವಾಡಿ ಕಾರ್ಯಕರ್ತರು ಗ್ರಾಮೀಣ ಪ್ರದೇಶದಲ್ಲಿ

ಮಹಿಳೆಯರು, ದುರ್ಬಲವರ್ಗದ ಗ್ರಾಮೀಣ ಜನರನ್ನು ಸಾಕ್ಷರರನ್ನಾಗಿಸುವ ಜಾಗೃತಿ ಮೂಡಿಸಲು ಪ್ರಾಮಾಣಿಕವಾಗಿಯತ್ನಿಸಿತು. ಅದರಲ್ಲೂ ಮಹಿಳೆಯರಲ್ಲಿ ಅನಕ್ಷರತೆ ಹೆಚ್ಚಿದ್ದು, ಅವರನ್ನು ಕೇಂದ್ರೀಕರಿಸಿ ಅಕ್ಷರ ಕ್ರಾಂತಿಗೆ ನೌಕರರ ಸಂಘಟನೆಯ ಸದಸ್ಯರು ಎಳೆದು ತಂದಿರುವ ಮಹಿಳೆಯರ ಶಿಕ್ಷಣದ ಬಗ್ಗೆ ನಮ್ಮ ಸಮಾಜದಲ್ಲಿರುವ ತಾತ್ಸಾರ ಮನೋಭಾವವೂ ಕಾರಣವಾಗಿದೆ. ಆದ್ದರಿಂದಲೇ ಪ್ರತಿ ನೂರು ಮಹಿಳೆಯರಲ್ಲಿ ಕೇವಲ ೧೮ ಜನ ಮಾತ್ರ ಅಕ್ಷರಸ್ಥರಾಗಿರುವುದನ್ನು ಗಮನಿಸಿದರೆ ಇದು ನಮಗೆ ವೇದ್ಯವಾಗುತ್ತದೆ. ಹೊಸಪೇಟೆ ತಾಲೂಕಿನ ಬಹಳ ಮಂದಿ ಮಹಿಳೆಯರು ಶ್ರಮ ಜೀವಿಗಳು ಇವರು ಹೊಲಗದ್ದೆಗಳಲ್ಲಿ ಕೂಲಿ ಮಾಡುವುದು, ಬಿತ್ತನೆ, ಕಳೆಕೀಳುವುದು, ನೀರು ಹಾಯಿಸುವುದು, ಕಸಿಮಾಡುವುದು, ಪೈರು ನೆಡುವುದು, ಕಟಾವು ಮಾಡುವುದು, ತೂರುವುದು ಮೊದಲಾದ ಶ್ರಮಭರಿತ ಕೆಲಸ ನಿರ್ವಹಿಸುವ ಮಹಿಳೆಯರನ್ನು ಸಾಮಾಜಿಕ ಭದ್ರತೆಯಿಂದ ವಂಚಿಸಿ ಶೋಷಣೆ ಮಾಡಲಾಗುತ್ತಿದೆ. ಇದನ್ನರಿತ ಅಂಗನವಾಡಿ ನೌಕರರ ಸಂಘಟನೆ ಸಾಕ್ಷರತಾ ಜಾಥಾದಲ್ಲಿ ಭಾಗವಹಿಸಿ, ಮಹಿಳೆಯರನ್ನು ಸಾಕ್ಷರರನ್ನಾಗಿ ಪರಿವರ್ತಿಸಲು ''ಹೆಣ್ಣೊಂದು ಕಲಿತರೆ ಕುಟುಂಬವೊಂದು ಕಲಿತಂತೆ'' ಎಂಬ ಘೋಷಣೆಯೊಂದಿಗೆ ಅಕ್ಷರ ಪ್ರಚಾರದಲ್ಲಿ ಸಂಘಟನೆ ಶ್ರಮಿಸಿತು.

ಈ ಜಾಥಾದಲ್ಲಿ ಮಹಿಳೆಯರ ಜಾಗೃತಿ ಮೂಡಿಸಲು ಹಾಡಿದ ಹಾಡುಗಳ ಸಾಲುಗಳು

ದೀಪ ಹಚ್ಚಿದ ಮ್ಯಾಲೆ ಬೆಳಕು ಆಗಲೇ ಬೇಕು
ಬೀಜ ಬಿತ್ತಿದ ಮೇಲೆ ಮೊಳಕೆ ಒಡೆಯಲೇಬೇಕು
ಓ ತಂಗೀ.......ಓ.......ತಂಗೀ ನೀ
ಕಲಿಯಲೇ ಬೇಕು.
ಕತ್ತಲ ಹಾದಿಗೆ ದೊಂದಿಯೇ ಬೇಕು
ಮಂದಿಯ ಬಾಳಿಗೆ ಅಕ್ಷರವೇ ಬೆಳಕು
ಒಲೆಯ ಚಟ್ಟದಲ್ಲಿ ಸುಟ್ಟಿದ್ದು ಸಾಕು
ಕನಸಿರದ ಹೊತ್ತು ನೀ, ಕನಸಾಗಬೇಕು
ಅಕ್ಷರ ಕಲಿತು ನೀ ಓದಲೇ ಬೇಕು

(ರಚನೆ ಕೆ. ರಾಮಯ್ಯ)

ಅದೇ ರೀತಿ ಮಕ್ಕಳು / ಅನಕ್ಷರಸ್ಥರು ಅಕ್ಷರ ಜಾಗೃತಿಯ ಕುರಿತು ಸದಸ್ಯರು ಹಾಡಿದ ಅನೇಕ ಹಾಡುಗಳಲ್ಲಿ ಕೆಲವು ಸಾಲುಗಳು ಇಂತಿವೆ.

ಹಳ್ಳಿಗಾಡಿನ ಕೂಲಿಯ ಮಕ್ಕಳು
ಪಡುವ ಕಷ್ಟಗಳ ನೋಡಣ್ಣ
ಅಕ್ಷರ ತಿದ್ದುವ ಎಳೆಯ ಕೈಗಳು
ಮುಳ್ಳಿನ ಕಳೆಯೂ ಕೀಳುತಿವೆ

ಮಣ್ಣನ್ನು ಮುಟ್ಟದ ಧನಿಕರ ಮಕ್ಕಳು
ರಾಜ್ಯವಾಳುತಾರೆ ಕಾಣಣ್ಣ ॥
ಕಷ್ಟವ ಪಟ್ಟು ಸುಖವ ಕಾಣದ
ಕೂಲಿ ಮಕ್ಕಳಿಗೆ ಕಣ್ಣೀರು
ಕಷ್ಟವೆ ಕಾಣದೆ ಕಾರಲಿ ತಿರುಗುವ
ಸುಖ ಜೀವಿಗಳಿಗೆ ಪನ್ನೀರು
ಈ ಕುಟಿಲ ಕುತಂತ್ರವ ಬಗ್ಗೂ ಬಡಿಯಲು
ಅನ್ಯಾಯವನು ಅಂತ್ಯಗೊಳಿಸಲು
ನವ ಸಮಾಜವನ್ನು ಸಾಧಿಸಿ ತೋರಲು
ಕಲಿಯಲೇ ಬೇಕು ಓ ಅಣ್ಣ
ಅರಿವಿನ ಬದುಕು ಬೇಕಣ್ಣ ॥ (ರಚನೆ ಕೆ. ರಾಮಯ್ಯ)

ಮೇಲಿನ ಹಾಡುಗಳನ್ನು ಹಾಡುತ್ತಾ ಹಳ್ಳಿ ಹಳ್ಳಿಗಳಲ್ಲಿ ಜಾಥಾ ಪ್ರವಾಸದ ಹಳ್ಳಿಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಶ್ರಮಿಸುತ್ತಿದ್ದರು. ಅಂಗನವಾಡಿ ಕಾರ್ಯಕರ್ತೆಯ ಗಂಡನೊಬ್ಬನು ಮತ್ತೊಂದು ಮದುವೆಗೆ ಯತ್ನಿಸಿದ್ದನ್ನು ವಿಫಲಗೊಳಿಸಿದರು.

ಅಂಗನವಾಡಿ ನೌಕರರ ಸಂಘಟನೆ ಕ್ರಿಯಾಶೀಲ ಸದಸ್ಯೆಯಾಗಿದ್ದ ಒಬ್ಬ ಮಹಿಳಾ ಕಾರ್ಯಕರ್ತೆಯ ಗಂಡ ಮಹಾಶಯನು ಮೊದಲನೆ ಹೆಂಡತಿ ಇದ್ದಾಗ್ಯೂ ಮತ್ತೊಂದು ಮದುವೆಗೆ ಯತ್ನಿಸಿದ್ದ ಘಟನೆಗೆ ಸಂಬಂಧ ಪಟ್ಟಂತೆ ಸಂಘಟನೆ ಎರಡನೆ ಮದುವೆಗೆ ಕನ್ಯ ಕೊಡಲು ಒಪ್ಪಿದ್ದ ಹೆಣ್ಣಿನ ಕಡೆಯವರಿಗೆ ಹೋಗಿ ಅವರ ಮನಸ್ಸನ್ನು ಒಪ್ಪಿಸಿ ಎರಡನೆ ಮದುವೆ ಕುದುರದಂತೆ ನೋಡಿಕೊಂಡಿದ್ದು, ಸಂಘಟನೆಯ ದೊಡ್ಡ ಸಾಧನೆಯೆಂದು ಹೇಳಬಹುದು. ಕಾರ್ಯಕರ್ತೆಯ ಗಂಡನಿಂದ ಬಂದ ಯಾವುದೇ ಬೆದರಿಕೆಗಳಿಗೆ ಮಣಿಯದೆ ಆತನ ವಿರುದ್ಧ ಮಾಡಿದ ಆ ಪ್ರಯತ್ನ ಯಶಸ್ವಿಯಾಯಿತು.

೧೯೯೯ ರಲ್ಲಿ ಕಲ್ಲಹಳ್ಳಿ ಗ್ರಾಮ ಪಂಚಾಯ್ತಿಯ ಅಂಗನವಾಡಿ ಕಾರ್ಯಕರ್ತೆಗೆ ಗ್ರಾಮ ಪಂಚಾಯ್ತಿ ಚುನಾಯಿತ ಸದಸ್ಯರಿಂದ ಆಗುತ್ತಿದ್ದ ಕಿರುಕುಳವನ್ನು ನಿಲ್ಲಿಸಿದ್ದು, ಅಂದಿನ ದಿನಗಳಲ್ಲಿ ಒಂದು ದೊಡ್ಡ ಹೋರಾಟವಾಗಿದೆ. ಗ್ರಾಮ ಪಂಚಾಯ್ತಿ ಅಧ್ಯಕ್ಷರು ಪ್ರಭಾವಿ ವ್ಯಕ್ತಿಯಾಗಿದ್ದು, ಅಂಗನವಾಡಿ ಕೇಂದ್ರಕ್ಕೆ ಬರುವ ಆಹಾರ ತನ್ನ ಮನೆಯಲ್ಲಿಳಿಸಬೇಕೆಂಬ ಬೇಡಿಕೆಗೆ ಒಪ್ಪದೇ ಇದ್ದ ಕಾರ್ಯಕರ್ತೆಗೆ ಇನ್ನಿಲ್ಲದ ಕಿರುಕುಳ ನೀಡಲಾಗಿತ್ತು. ಸಾಮಾಜಿಕ ಬಹಿಷ್ಕಾರವನ್ನು ಮಾಡಲಾಗಿತ್ತು. ಅಂಗನವಾಡಿ ನೌಕರಳಿಗೆ ಅಂಗಡಿಗಳಲ್ಲಿ ಸಾಮಾನು ನೀಡಿದಂತೆ, ಹಿಟ್ಟಿನ ಗಿರಣಿಯಲ್ಲಿ ಆಕೆಗೆ ಪ್ರವೇಶ ನಿರಾಕರಿಸಲಾಗಿತ್ತು. ಅಂಗನವಾಡಿ ಕಾರ್ಯಕರ್ತೆಯಿರುವವರೆಗೂ ಯಾರೂ ಮಕ್ಕಳನ್ನು ಅಂಗನವಾಡಿ

ಕೇಂದ್ರಕ್ಕೆ ಕಳಿಸಬಾರದೆಂದು ತಾಕೀತು ಮಾಡಲಾಗಿತ್ತು. ಈ ಬಹಿಷ್ಕಾರದ ಬಗ್ಗೆ ತಹಶೀಲ್ದಾರರಿಗೂ ಮತ್ತು ಪೋಲೀಸರಿಗೂ ದೂರು ನೀಡಿದರೂ ಕಾರ್ಯಕರ್ತೆಗೆ ನ್ಯಾಯ ಸಿಗಲಿಲ್ಲ. ಕೊನೆಗೆ ಸಂಘಟನೆಯೇ ಮಧ್ಯಪ್ರವೇಶಿಸಿ ನ್ಯಾಯಕ್ಕಾಗಿ ಚಳುವಳಿ ಮಾಡಿದ್ದರಿಂದ ಅಂಗನವಾಡಿ ಕಾರ್ಯಕರ್ತೆಯ ಮೇಲೆ ವಿಧಿಸಿದ್ದ ಸಾಮಾಜಿಕ ಬಹಿಷ್ಕಾರವನ್ನು ತೆಗೆದು ಹಾಕಲಾಯಿತು. ಅಂದಿನ ದಿನಗಳಲ್ಲಿ ಸುಮಾರು ಒಂದು ವರ್ಷ ವಿವಿಧ ಹಂತ ಮತ್ತು ಸ್ವರೂಪಗಳಲ್ಲಿ ನಡೆದ ಈ ಹೋರಾಟ ಅಂಗನವಾಡಿ ನೌಕರರ ಸಂಘಟನೆಯಲ್ಲಿ ಅತ್ಯಂತ ಪ್ರಮುಖ ತಿರುವನ್ನು ಒದಗಿಸಿಕೊಟ್ಟ ಪ್ರಕರಣವೆಂದರೆ ತಪ್ಪಾಗದು

## ೪.೫ : ಸಮುದಾಯಗಳ ಸಾಂಘಿಕ ನೆಲೆ

ಸಮುದಾಯದ ಸಾಂಘಿಕ ನೆಲೆಗಳಲ್ಲಿ ಹೊಸಪೇಟೆ ತಾಲೂಕಿನಲ್ಲಿ ಬುಡಕಟ್ಟು ಸಮುದಾಯ ಹೆಚ್ಚಾಗಿ ವಾಸಿಸಿರುವುದು ಕಂಡು ಬರುತ್ತದೆ. ಭೌಗೋಳಿಕವಾಗಿ ಈ ಪ್ರದೇಶ ಗುಡ್ಡ, ಬೆಟ್ಟ, ಸರೋವರ, ನದಿ, ಕಾಲುವೆಗಳನ್ನು ಹೊಂದಿರುವುದರಿಂದ, ಭವಿಷ್ಯ ಬುಡಕಟ್ಟು ಸಮುದಾಯ ಜೀವಿಸಲು ಸೂಕ್ತ ಪ್ರದೇಶವಾಗಿರುತ್ತದೆ. ನೈಸರ್ಗಿಕವಾದ ಕಾರಣ ಮತ್ತು ದೈಹಿಕವಾಗಿ ದೃಢಕಾಯರಾದ ಬುಡಕಟ್ಟು ಸಮುದಾಯದ ಸೈನಿಕರ ನೆರವಿನಿಂದ ಇಲ್ಲಿ ವಿಜಯನಗರ ಸಾಮ್ರಾಜ್ಯ ಕಟ್ಟಲು ಸಾಧ್ಯವಾಯಿತೆಂದು ಹೇಳಬಹುದು. ವಿಜಯನಗರದ ಸೈನಿಕರಲ್ಲಿ ಮುಕ್ಕಾಲು ಭಾಗದಷ್ಟು ಸೈನಿಕರು ಈ ಬುಡಕಟ್ಟು ಸಮುದಾಯದವರಾಗಿದ್ದರೆಂಬುದು ಪ್ರಮುಖವಾದ ಸಂಗತಿ.

ರೀವರ್ಸ್ ಅವರ ಪ್ರಕಾರ ಬುಡಕಟ್ಟು (Tribe) ಎಂದರೆ ಗೊತ್ತಾದ ನಾಯಕತ್ವವುಳ್ಳ ಅನಾಗರಿಕ ಜನರ ಅಥವಾ ಮನೆತನಗಳ ತಂಡ. ಅವರು ಸಾಮಾನ್ಯವಾದ ಆಡು ಭಾಷೆಯನ್ನು ಬಳಸುತ್ತಾರೆ ಮತ್ತು ಯುದ್ಧದಲ್ಲಿ ಹಾಗೂ ಇತರೆ ಸಾಮಾನ್ಯ ಪ್ರಾಯೋಜನಗಳನ್ನು ಒಟ್ಟಾಗಿ ನಿರ್ವಹಿಸುತ್ತಾರೆ. ರೀವರ್ ರವರು ತಮ್ಮ ಪರಿಭಾಷೆಯಲ್ಲಿ ಯುದ್ಧಕಾಲದಲ್ಲಿ ಬುಡಕಟ್ಟು ಜನರಲ್ಲಿನ ಏಕತೆಯನ್ನು ಒತ್ತಿ ಹೇಳಿದ್ದಾರೆ. ಮತ್ತೊಂದೆಡೆಯಲ್ಲಿ, ಅನೇಕ ಬುಡಕಟ್ಟು- ಗಳಿರುತ್ತವೆ. ಅದರೊಳಗೆ ಒಂದು ಭಾಗವು ಮತ್ತೊಂದು ಭಾಗದೊಡನೆ ಜಗಳಕ್ಕೆ ಇಳಿಯುವುದುಂಟು. ಅದೇ ರೀತಿಯಲ್ಲಿ ಅನೇಕ ಬುಡಕಟ್ಟುಗಳಿಗೆ ಯಾವುದೇ ನಾಯಕವಿರುವುದಿಲ್ಲ. ಇಂಪೀರಿಯಲ್ ಗೆಜೆಟ್ಟಿಯರ್ ಪ್ರಕಾರ ಒಂದು ಬುಡಕಟ್ಟು ಎಂದರೆ ಸಾಮಾನ್ಯ ಹೆಸರನ್ನಿಟ್ಟುಕೊಂಡ ಸಾಮಾನ್ಯ ಆಡು ಭಾಷೆಯನ್ನಾಡುವ ಒಂದು ಸಾಮಾನ್ಯ ಗೊತ್ತಾದ ಸೀಮೆಯೊಳಗೆ ವಾಸಮಾಡುವ ಅಥವಾ ವಾಸ ಮಾಡಲೆತ್ನಿಸುವ ಕುಟುಂಬಗಳ ಒಂದು ಸಮೂಹವಾಗಿದೆ. ಮತ್ತು ಮೂಲತಃ ಸ್ವಗೋತ್ರ ವಿವಾಹದ ಕುಟುಂಬವಾಗಿದ್ದರೂ ಸಾಮಾನ್ಯವಾಗಿ ಅದು ಸ್ವಗೋತ್ರ ವಿವಾಹದ ಕುಟುಂಬವಲ್ಲ. ಡಾ|| ಡಿ. ಎನ್. ಮಜುಂದಾರ್ ರವರು ಬುಡಕಟ್ಟು ಎಂಬ ಪದವನ್ನು ಪರಿಭಾಷಿಸುತ್ತಾ "A tribe is a collection of families, bearing a common name members of which occupy the same territory speak the same language and observe certain taboor regarding marriage, professing or occupation and have developed a well assessed system or a well assessed system of reciprocity and mutuality obligations ಎಂದು ಬರೆದಿದ್ದಾರೆ.

## ಬುಡಕಟ್ಟು ಸಮುದಾಯದ ಮುಖ್ಯ ಲಕ್ಷಣಗಳು :

೧. ಬುಡಕಟ್ಟು ಒಂದು ನಿರ್ಧಿಷ್ಟವಾದ ಹಾಗೂ ಸಾಮಾನ್ಯವಾದ ಊರಿನೊಳಗೆ ವಾಸಿಸುತ್ತದೆ.

೨. ಸಾಮಾನ್ಯವಾಗಿ ಬುಡಕಟ್ಟು ಸಮುದಾಯದವರು ಹಟ್ಟಿಗಳಲ್ಲಿಯೇ ವಾಸವಾಗಿರುತ್ತಾರೆ. ಈಗ ಹಟ್ಟಿಗಳು, ಹಟ್ಟಿ, ಕೊಪ್ಪ, ಕೊಪ್ಪಲ್. ರೊಪ್ಪಗಳೆಲ್ಲಾ ಈಗ ಹಳ್ಳಿಗಳಾಗಿವೆ. ಈಗಲೂ ಬುಡಕಟ್ಟು ಸ್ಥಿತಿಯಲ್ಲಿಯೇ ಇರುವ ಬೇಡರು, ಕೊರಚರು, ಗೊಲ್ಲರು ಇವರುಗಳು ಹಳ್ಳಿ, ಹಟ್ಟಿಗಳಲ್ಲಿಯೇ ವಾಸ ಮಾಡುವುದು ಇವರ ಲಕ್ಷಣವಾಗಿದೆ. ಒಂದು ಸಾಮಾನ್ಯ ಪ್ರದೇಶದಲ್ಲಿದಿದ್ದಾಗ ಬುಡಕಟ್ಟು ತನ್ನ ವಿಶಿಷ್ಟ ಲಕ್ಷಣಗಳಾದ ಸಮುದಾಯದ ಮನೋಭಾವಗಳು ಸಾಮಾನ್ಯ ಭಾಷೆ ಮುಂತಾದ ಗುಣಗಳನ್ನು ಕೂಡ ಕಳೆದುಕೊಳ್ಳುತ್ತದೆ. ಈ ಕಾರಣದಿಂದಾಗಿಯೇ ಒಂದು ಬುಡಕಟ್ಟಿಗೆ ಸಾಮಾನ್ಯವಾದ ಒಂದು ವಾಸಸ್ಥಳ ಬೇಕಾಗುತ್ತದೆ.

೩. ಎಲ್ಲಿವರೆಗೆ ಅದರ ಸದಸ್ಯರು ಏಕತೆಯ ಪರಸ್ಪರ ಭಾವನೆಯನ್ನು ಹೊಂದಿರುವುದಿಲ್ಲವೋ ಅಲ್ಲಿಯವರೆಗೆ ಒಂದು ನಿರ್ದಿಷ್ಠ ಭೌಗೋಳಿಕ ವಲಯದೊಳಗೆ ವಾಸಿಸುವ ಜನಗಳ ಗುಂಪನ್ನೇ ಬುಡಕಟ್ಟು ಎಂದು ಕರೆಯಲಾಗುವುದಿಲ್ಲ. ಈ ಮಾನಸಿಕ ಭಾವನೆ ಬುಡಕಟ್ಟಿನ ಅನಿವಾರ್ಯವಾದ ಮತ್ತು ಅತ್ಯವಶ್ಯವಾದ ಒಂದು ಲಕ್ಷಣವಾಗಿದೆ.

೪. ಬುಡಕಟ್ಟಿನ ಜನರೆಲ್ಲರೂ ಒಂದೇ ಸಾಮಾನ್ಯ ಭಾಷೆಯನ್ನಾಡುತ್ತಾರೆ. ಇದು ಕೂಡ ಅವರ ನಡುವೆ ಒಂದು ಬಗೆಯ ಸಾಮುದಾಯಿಕ ಏಕತೆಯ ಭಾವನೆಯನ್ನು ರೂಪಿಸಲು ನೆರವಾಗುತ್ತದೆ.

೫. ಬುಡಕಟ್ಟುಗಳಲ್ಲಿ ಸಾಮುದಾಯಿಕ ಏಕತೆಯಿರಲು ಒಂದು ಕಾರಣವೆಂದರೆ ಅದರ ಎಲ್ಲಾ ಸದಸ್ಯರೂ ಪರಸ್ಪರ ರಕ್ತ ಸಂಬಂಧಿಗಳೇ ಆಗಿರುತ್ತಾರೆ. ಬುಡಕಟ್ಟು ಜನಾಂಗದ ಸದಸ್ಯರು ತಾವೆಲ್ಲರು ಒಂದೇ ಸಾಮಾನ್ಯ ಹಾಗೂ ನಿಜವಾದ ಅಥವಾ ಪುರಾಣ ಪುರುಷ ಪೂರ್ವಜರಿಂದ ತಲೆಮಾರಿನಿಂದ ಹುಟ್ಟಿ ಬಂದಿದ್ದೇವೆ ಎಂದು ದೃಢವಾಗಿ ನಂಬಿಕೊಂಡಿರುವುದರಿಂದ ತಾವೆಲ್ಲರೂ ಪರಸ್ಪರ ರಕ್ತ ಸಂಬಂಧಿಗಳೆಂದೇ ಭಾವಿಸಿರುತ್ತಾರೆ. ಹೀಗಾಗಿ ಏಕತೆಯೇ ಅವರ ಜೀವಾಳವಾಗಿದೆ.

೬. ಬುಡಕಟ್ಟಿಗೆ ತನ್ನದೇ ಆದ ಒಂದು ಸಾಮಾನ್ಯ ಹೆಸರು ಇರುತ್ತದೆ.

೭. ಬುಡಕಟ್ಟಿಗೆ ತನ್ನದೇ ಆದ ಧಾರ್ಮಿಕ ದೈವಾಚರಣೆಗಳಿರುತ್ತವೆ.

೮. ಬುಡಕಟ್ಟು ಸಮುದಾಯಕ್ಕೆ ನಿರ್ಧಿಷ್ಟ ರಾಜಕೀಯ ಸಂಘಟನೆ ಇರುತ್ತದೆ.

೯. ಏಕತೆಯ ಮನೋಭಾವನೆಯಿಂದಾಗಿ ಸಾಮಾನ್ಯ ಭಾಷೆ, ಸಾಮಾನ್ಯ ಧರ್ಮ, ಸಾಮಾನ್ಯ ರಾಜಕೀಯ ಸಂಘಟನೆ ಮುಂತಾದವುಗಳಿಂದ ಒಂದು ಸಾಮಾನ್ಯ ಸಂಸ್ಕೃತಿಯ ಬುಡಕಟ್ಟು ಸದಸ್ಯರೆಲ್ಲರೂ ಸಮಾನರಾಗಿರುವುದು ಕಂಡು ಬರುತ್ತದೆ.

೧೦. ಒಂದು ಬುಡಕಟ್ಟು ಅನೇಕ ಬಣಗಳಿಂದ ಕೂಡಿರುತ್ತದೆ. ಅದರ ಸದಸ್ಯರ ನಡುವೆ ಕೊಟ್ಟು ತೆಗೆದುಕೊಳ್ಳುವ ನಿಯಮ ಜಾರಿಯಲ್ಲಿರುತ್ತದೆ.

ಆಧುನಿಕ ಸಮಾಜದ ಇಂದಿನ ಪರಿಸ್ಥಿತಿಯಲ್ಲಿ ಬುಡಕಟ್ಟು ಸಮುದಾಯಗಳು, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆ ಈಗಲೂ ಇದೆ. ಅದನ್ನು ಹೋಗಲಾಡಿಸಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಸ್ವಾತಂತ್ರ್ಯ ಬಂದ ನಂತರ ಹೊಸಪೇಟೆ ತಾಲೂಕಿನ ಈ ಸಮುದಾಯಗಳ ಸರ್ವಾಂಗೀಣ ಬೆಳವಣಿಗೆಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗಿದೆ. ಇನ್ನಿತರ ಸಮುದಾಯಗಳೊಡನೆ ಬೆರೆತು ನಾಗರೀಕರಾಗಿ ಮುಂದುವರಿಯುವ ಲಕ್ಷಣಗಳು ಕಂಡು ಬಂದಿವೆ.

ಹೊಸಪೇಟೆ ತಾಲೂಕಿನ ಬುಡಕಟ್ಟು ಸಮುದಾಯಗಳಲ್ಲಿ ಪ್ರಮುಖವಾಗಿ ಬೇಡರು, ಕುರುಬರು, ಗೊಲ್ಲರನ್ನು ಗುರುತಿಸಬಹುದು. ಇವರು ವಾಸಿಸುವ ಹಟ್ಟಿಗಳು ಸಾಮಾನ್ಯವಾಗಿ ಈ ಸಮುದಾಯದ ಹೆಸರಿನಿಂದಲೇ ಕರೆಯಲಾಗುತ್ತಿತ್ತು. ಗೊಲ್ಲರ ಹಟ್ಟಿ, ಬ್ಯಾಡರ ಹಟ್ಟಿ, ಕುರುಬರಹಟ್ಟಿ. ಈ ಹಟ್ಟಿಗಳಿಗೆ ಇತರೆ ಜನರು ಬಂದು ನೆಲೆಸಲು ಆರಂಭವಾದಾಗಿನಿಂದ ಹಳ್ಳಿಗಳಾದವು. ಒಂದೇ ಬೆಡಗಿಗೆ ಸೇರಿದ ಜನ ಒಂದು ಚೇರಿ ಅಥವಾ ಕೇರಿಗಳಾದವು. ಥರ್‌ಸ್ಟನ್ (Caste and tribes of southern India-VI ಪುಟ 87) ರವರು ಹೊಸಪೇಟೆಯ ಇಂಥಹ ಕೇರಿ ಅಥವಾ ಹಟ್ಟಿಗಳ ಬಗ್ಗೆ ಬರೆದಿದ್ದಾರೆ. ಒಂದೇ ಬುಡಕಟ್ಟಿನ ಒಂದು, ಎರಡು, ಏಳು ಬೆಡಗುಗಳ ಒಂದೇ ಕೇರಿಯಿರುವುದನ್ನು ಥರ್‌ಸ್ಟನ್ ರವರು ಪತ್ತೆಹಚ್ಚಿದ್ದಾರೆ.

**ಹೊಸಪೇಟೆ ಫಿರ್ಕಾ ನೇಕಾರರ ಉತ್ಪತ್ತಿ ಮತ್ತು ಮಾರಾಟ ಸಹಕಾರಿ ಸಂಘ (ನಿ) ಹೊಸಪೇಟೆ.**

ಹೊಸಪೇಟೆಯಲ್ಲಿರುವ ಹೊಸಪೇಟೆ ಫಿರ್ಕಾ ನೇಕಾರರ ಉತ್ಪತ್ತಿ ಮತ್ತು ಮಾರಾಟ ಸಹಕಾರಿ ಸಂಘ ಸ್ವಾತಂತ್ರ್ಯ ಪೂರ್ವದಿಂದಲೂ ಕ್ರಿಯಾಶೀಲ ಸಹಕಾರಿ ಸಂಘಟನೆಯಾಗಿದ್ದು, ಇದು ೧೯೨೧ ರಲ್ಲಿ ಅಸ್ತಿತ್ವಕ್ಕೆ ಬಂದಿರುತ್ತದೆ. ಇದರ ಸಂಸ್ಥಾಪಕರು ಮುನ್ಸಿಪಲ್ ಕಮೀಷನರಾಗಿ ನಿವೃತ್ತರಾಗಿದ್ದ ಬೇವಿನಾಳಪ್ಪ ರವರು ಇವರು ಅಂದು ಕರ್ನೂಲ್ ಜಿಲ್ಲೆಗೆ ಈ ಪ್ರದೇಶ ಸೇರಿದ್ದು, ಅಲ್ಲಿಯೇ ನೋಂದಣಿಯಾಗಿರುತ್ತದೆ. ಈ ಸಂಘಕ್ಕಾಗಿಯೇ ೧೯೫೭ ರಲ್ಲಿ ಸ್ವಂತ ಜಮೀನನ್ನು ಖರೀಧಿಸಲಾಯಿತು. ಒಟ್ಟು ಪ್ರದೇಶದಲ್ಲಿ ವಿವಿಧ ಕೈಮಗ್ಗದ ನೂಲಿನ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ. ೧೯೭೦ ರಲ್ಲಿ ಈ ಸಂಘದ ಸ್ವಂತ ಕಟ್ಟಡವನ್ನು ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ವಿರೇಂದ್ರ ಪಟೇಲರು ಉದ್ಘಾಟಿಸಿದರು. ಆ ಸಂದರ್ಭದಲ್ಲಿ ಇದು ವಿದ್ಯುತ್ ಪವರ್ ಮಗ್ಗವನ್ನು ಹೊಂದಿತ್ತು. ಈ ಸಂಘದ ಜವಾಬ್ದಾರಿಯನ್ನು ಐಲಿ ಗುರುನಾಥಪ್ಪನವರು ತೆಗೆದುಕೊಂಡಿದ್ದರು. ವಿದ್ಯುತ್ ಸಮಸ್ಯೆ, ಕಚ್ಚಾವಸ್ತುವಿನ ಸಮಸ್ಯೆಯಿಂದಾಗಿ ಈ ಸಂಸ್ಥೆಯ ಕಟ್ಟಡಗಳು ಕೇವಲ ದಾಸ್ತಾನು ಮಳಿಗೆಗಳಾಗಿದ್ದವು. ಈ ಎಲ್ಲಾ ಸಮಸ್ಯೆಗಳಿಂದಾಗಿ ಈ ಸಂಸ್ಥೆನಷ್ಟವನ್ನು ಅನುಭವಿಸಿ, ಸಾಲದಿಂದ ತತ್ತರಿಸಿತ್ತು. ಇಷ್ಟಾದರೂ ಸಂಸ್ಥೆ ನೇಕಾರರಿಗೆ ನಿವೇಶನಗಳನ್ನು ಮಾಡಿ ಹಂಚಲಾಯಿತು. ಒಟ್ಟು ೧೦೦ ಜನರಿಗೆ ಮನೆ ನಿವೇಶನವನ್ನು ಹಂಚಲಾಗಿದ್ದು, ಅದರಲ್ಲಿ ಒಟ್ಟು ೧೩೦ ಕುಟುಂಬಗಳು ವಾಸವಾಗಿವೆ. ನೇಕಾರರನ್ನು ಸಂಘಟಿಸಿದ್ದ ಹಲವು ಸಂಘಟನೆಗಳು ನೇಕಾರರ ಹೆಸರಿಗೆ ನೋಂದಣಿ ಮಾಡಿಸಿಕೊಡಲು ಬೇಡಿಕೆ ಸಲ್ಲಿಸಿದವು.

ಇವರೆಲ್ಲರ ಒತ್ತಾಯದ ಮೇರೆಗೆ ನೋಂದಣಿ ಮಾಡಿಸಿ ಕೊಡಲು ಸಮ್ಮತಿ ನೀಡಿದರೂ ದುಬಾರಿಯಾದ ಸ್ಟ್ಯಾಂಪ್ ಶುಲ್ಕದಿಂದಾಗಿ ನೋಂದಣಿ ಮಾಡಿಸಿ ಕೊಳ್ಳುವುದು ಸಮಸ್ಯೆಯಾಗಿತ್ತು. ೧೯೯೧ ರಲ್ಲಿ ನೇಕಾರರ ಕೋರಿಕೆ ಮೇರೆಗೆ ಕರ್ನಾಟಕ ರಾಜ್ಯ ಸರಕಾರ ರಾಜ್ಯದಲ್ಲಿ ನೇಕಾರರ ಮನೆ ನಿವೇಶನಗಳ ನೋಂದಣಿ ಶುಲ್ಕವನ್ನು ಮನ್ನಾ ಮಾಡುವ ಮಹತ್ತರ ಸರಕಾರಿ ಆದೇಶದಿಂದ ಮನೆ ನಿವೇಶನಗಳನ್ನು ಅವರವರ ಹೆಸರಿಗೆ ನೋಂದಾಯಿಸಿಕೊಳ್ಳಲಾಯಿತು. ಕೇವಲ ಒಂದು ಸಲಕ್ಕೆ ಮಾತ್ರ ಅವಕಾಶ ನೀಡಿದ ಸರಕಾರದ ಆದೇಶದ ಲಾಭವನ್ನು ರಾಜ್ಯ ಇತರೆ ನೇಕಾರರ ಸಹಕಾರಿ ಸಂಘಗಳು ಹೊಸಪೇಟೆ ನೇಕಾರರಿಗೆ ಸಿಕ್ಕಿರುವ ಸೌಲಭ್ಯವನ್ನು ತಮಗೂ ನೀಡಲು ಬಹಳಷ್ಟು ಪ್ರಯತ್ನಿಸಿದರೂ ಸರಕಾರ ಮಾತ್ರ ಸೌಲಭ್ಯ ನೀಡಲಿಲ್ಲವೆಂಬುದು ತಿಳಿದು ಬರುತ್ತದೆ.

ನೇಕಾರರು ಮನೆಗಳನ್ನು ನಿರ್ಮಿಸಿಕೊಳ್ಳಲು ಸಂಘವೂ ಬಹಳಷ್ಟು ನೆರವು ನೀಡಿದೆ. ನೇಕಾರರ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ವ್ಯವಸ್ಥೆ ಮಾಡಿದೆ. ಬೇರೆ ಬೇರೆ ಭಾಗದಿಂದ ಉಡುಪುಗಳ ಬೇಡಿಕೆಯನ್ನು ತಂದು ಬಟ್ಟೆ ಉತ್ಪಾದಿಸಲಾಗುತ್ತದೆ. ಸುಮಾರು ೧೭೦ ಕುಟುಂಬಗಳು ತಮ್ಮ ಜೀವನಕ್ಕೆ ನೇಕಾರಿಕೆಯನ್ನೇ ಅವಲಂಬಿಸಿದ್ದು, ಮನೆಯವರಿಗೂ ನೇಕಾರಿಕೆಯಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಲಾಗಿದೆ. ಕಳೆದ ೧೦ ವರ್ಷಗಳ ಹಿಂದೆ ನಷ್ಟ ಅನುಭವಿಸುತ್ತಿದ್ದ ಈ ಸಂಸ್ಥೆಗೆ ಹಲವು ಮಾರ್ಗಗಳನ್ನು ಅನುಸರಿಸುವ ಮೂಲಕ ಸಂಸ್ಥೆಯನ್ನು ಲಾಭದೆಡೆಗೆ ತಂದು ಸಾಲವನ್ನೆಲ್ಲಾ ತೀರಿಸಿ ನೇಕಾರಿಗೆ, ಉದ್ಯೋಗಿಗಳಿಗೆ ಹಲವಾರು ಮಾದರಿ ಸೌಲಬ್ಯಗಳನ್ನು ನೀಡಲಾಗಿದೆ.

ಈ ಸಂಸ್ಥೆಯಲ್ಲಿ ಒಟ್ಟು ೩೫೦ ಜನರು ನೇಕಾರಿಕೆಯಲ್ಲಿ ತೊಡಗಿದ್ದಾರೆ. ಮೊದಲು ವಿದ್ಯುತ್ ಮಗ್ಗಗಳಿದ್ದು, ಇದು ಅಷ್ಟೊಂದು ಲಾಭದಾಯಕವಲ್ಲವೆಂದು ಭಾವಿಸಿ ಪುನಃ ಕೈಮಗ್ಗಗಳನ್ನೇ ಆರಂಭಿಸಿದ ನಂತರ ಒಳ್ಳೆಯ ಪ್ರಗತಿ ಕಂಡು ಬಂದಿತು. ನೇಕಾರರ ಬಟ್ಟೆಯನ್ನು ಖರೀದಿಸಿ, ಸಿದ್ಧ ಉಡುಪುಗಳನ್ನು ಸಿದ್ದ ಪಡಿಸುವ ದೊಡ್ಡ ಟೈಲರ್ ಪಡೆಯೇ ಇಲ್ಲಿದೆ. ಸುಮಾರು ೨೦೦ ಜನ ಟೈಲರ್‌ಗಳಿದ್ದು, ಅವರಿಗೆ ಅವಶ್ಯಕವಾಗಿ ಬೇಕಾದ ಸಿದ್ದ ಉಡಪಿನ ಬೇಡಿಕೆಯನ್ನು ಸರಕಾರದ ಹಾಗೂ ಖಾಸಗಿ ಸಂಸ್ಥೆಗಳಿಂದ ಬೇಡಿಕೆ ತಂದು ಕೊಡಲಾಗುತ್ತದೆ. ಸಂಸ್ಥೆಯ ನೇಕಾರರ ಬಟ್ಟೆಯ ಜೊತೆಗೆ ಬೇಕಾಗುವ ಇನ್ನಿತರ ಬಟ್ಟೆಯನ್ನು ಸೊಸೈಟಿಯಿಂದ ತಂದುಕೊಡಲಾಗುತ್ತದೆ. ಸಿದ್ಧ ಪಡಿಸಿದ ಉಡುಪುಗಳನ್ನು ಮಾರಾಟ ಮಾಡಲು ಪ್ರತ್ಯೇಕ ವಾಹನವನ್ನು ಹೊಂದಿದ್ದು, ಈ ವಾಹನವು ರಾಜ್ಯದ ಬೇರೆ ಬೇರೆ ಸ್ಥಳಗಳಿಗೆ ನಿರ್ಧಿಷ್ಟ ದಿನಗಳಂದು ಹೋಗಿ ಮಾರಾಟ ಮಾಡುತ್ತದೆ. ಮುಂಚಿತ ಬೇಡಿಕೆಯಂತೆ ಉಡುಪುಗಳನ್ನು ಅವರಿರುವ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಒದಗಿಸಿ ಬರುವ ವ್ಯವಸ್ಥೆ ಇರುವುದರಿಂದ ನೇಕಾರರ, ಟೈಲರುಗಳ ಶ್ರಮಕ್ಕೆ ಸೂಕ್ತ ಪ್ರತಿಫಲ ಸಿಗುತ್ತದೆ ಎಂದು ಸಂಸ್ಥೆಯ ಪದಾಧಿಕಾರಿಗಳು ಹೇಳುತ್ತಾರೆ.

## ನೇಕಾರರಿಗೆ ಇರುವ ಸೌಲಭ್ಯಗಳು :

ಸೂಕ್ತ ಬೇಡಿಕೆ, ಮಾರಾಟದ ವ್ಯವಸ್ಥೆಯ ಜೊತೆಗೆ ಸಂಸ್ಥೆಯ ಲಾಭಾಂಶದಲ್ಲಿ ಸ್ವಲ್ಪ ಭಾಗವನ್ನು ಸದಸ್ಯರಾದ ನೇಕಾರರಿಗೆ ಹಂಚಲಾಗುತ್ತದೆ. ನೇಕಾರರ ಮಕ್ಕಳಿಗೆ ಸ್ಕೂಲು ಫೀಜು, ಪುಸ್ತಕಗಳನ್ನು ವಿತರಿಸಲಾಗುತ್ತದೆ. ಸದಸ್ಯರಲ್ಲಿ ಯಾರಾದರೂ ಮೃತ ಪಟ್ಟರೆ ಮೃತ ಪಟ್ಟ ಕುಟುಂಬದ ಸದಸ್ಯರಿಗೆ ಶವ ಸಂಸ್ಕಾರಕ್ಕೆ ರೂ.೨೦೦೦ ಸಹಾಯ ಧನ ನೀಡಲಾಗುತ್ತದೆ.

## ಸೊಸೈಟಿ ಸಿಬ್ಬಂದಿಗಿರುವ ಸೌಲಭ್ಯಗಳು :

ಎರಡು ತಿಂಗಳ ವೇತನದ ಬೋನಸ್ಸನ್ನು ಕೊಡಲಾಗುತ್ತದೆ. ನೇಕಾರರಿಗಿರುವಂತೆ ಸಿಬ್ಬಂದಿಯವರ ಮಕ್ಕಳಿಗೂ ಸ್ಕೂಲ ಫೀಜು, ಪುಸ್ತಕಗಳನ್ನು ವಿತರಿಸಲಾಗುತ್ತದೆ. ಹಾಗೆಯೇ ಸಿಬ್ಬಂದಿಯಲ್ಲಿ ಯಾರಾದರೂ ಸಾವನ್ನಪ್ಪಿದರೆ ಅವರ ಕುಟುಂಬದ ಸದಸ್ಯರಿಗೂ ೨೦೦೦ ರೂಪಾಯಿ ಶವ ಸಂಸ್ಕಾರಕ್ಕೆ ನೀಡಲಾಗುತ್ತದೆ. ಮಾರಾಟ ಮಾಡಿದ ಉತ್ಪನ್ನದ ಮೇಲೆ ಪ್ರೋತ್ಸಾಹ ಧನವನ್ನು ಕೊಡಲಾಗುತ್ತದೆ.

ನೇಕಾರರು, ಟೈಲರ್‌ಗಳು ಮತ್ತು ಸಿಬ್ಬಂದಿಯವರಲ್ಲಿ ಪ್ರಮುಖವಾಗಿ ದೇವಾಂಗ, ಕುರುಹಿನ ಶೆಟ್ಟಿ, ಪದ್ಮಶಾಲೀಯ, ತೆಲುಗು ದೇವಾಂಗ, ಲಿಂಗಾಯತ್ ಮತ್ತಿತರ ಜಾತಿಯವರೂ ಇರುವುದು ಕಂಡು ಬಂದಿತು. ನೇಕಾರರ ಮಕ್ಕಳಲ್ಲಿ ಕೆಲವರು ಉನ್ನತ ವಿದ್ಯಾವಂತರಿದ್ದಾರೆ. ಕೆಲವರು ಇಂಜಿನಿಯರರು, ಡಾಕ್ಟರರು ಇರುವುದೂ ಕಂಡು ಬಂದಿತು.

ಹೊಸಪೇಟೆಯ ಈ ನೇಕಾರರ ಸೊಸೈಟಿಯಿಂದ ತಾಲೂಕಿನ ಮರಿಯಮ್ಮನಹಳ್ಳಿಯಲ್ಲಿ ದೇವದಾಸಿಯರೇ ನೇಯ್ಗೆ ಕೇಂದ್ರವನ್ನು ಆರಂಭಿಸಲಾಗಿದ್ದು, ಇವರೆಲ್ಲಾ ಸಂಪೂರ್ಣವಾಗಿ ದೇವದಾಸಿಯರಾಗಿದ್ದಾರೆ. ಕೈಮಗ್ಗಗಳನ್ನು ಸರಬರಾಜು ಮಾಡಿದ್ದು, ಅವರಿಗೆ ಸರಕಾರದಿಂದ ೨೦ ಸಾವಿರ, ತಮ್ಮ ಕೈಯಿಂದ ೨೦ ಸಾವಿರ, ಒಟ್ಟು ೪೦,೦೦೦ ರೂ. ವೆಚ್ಚದಲ್ಲಿ ಮನೆಗಳನ್ನು ನಿರ್ಮಿಸಿಕೊಡಲಾಗಿದೆ. ಈ ನೇಯ್ಗೆ ಕೇಂದ್ರದಲ್ಲಿ ಒಟ್ಟು ೪೦ ಜನ ದೇವದಾಸಿಯರಿದ್ದು, ಇದರಲ್ಲಿ ೫ ಜನ ಹರಿಜನ ದೇವದಾಸಿಯರು, ಉಳಿದವರೆಲ್ಲಾ ನಾಯಕ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಇದೊಂದು ಈ ಸಂಸ್ಥೆಯ ಸಾಮಾಜಿಕವಾದ ಬಹುಮುಖ್ಯವಾದ ಕಾಳಜಿಯಿಂದಾದ ಕಾರ್ಯವಾಗಿದೆ.

ಇದೇ ರೀತಿ ಅನಂತಶಯನ ಗುಡಿಯಲ್ಲಿ ಮತ್ತೊಂದು ನೇಯ್ಗೆ ಕೇಂದ್ರವನ್ನು ಪ್ರಾರಂಭಿಸಿದ್ದು, ಅದರಲ್ಲಿಯೂ ಕೆಲವರು ಹರಿಜನರಿದ್ದಾರೆ. ಇವರಲ್ಲಿರುವ ೧೪ ಜನ ಬಡವರಿಗೆ ದಾನಿಗಳೊಬ್ಬರು ಉಚಿತವಾಗಿ ಮನೆ ನಿರ್ಮಿಸಿಕೊಟ್ಟಿದ್ದಾರೆ. ಇವರೆಡೂ ಕೇಂದ್ರಗಳನ್ನು ನೇಕಾರರ ಸೊಸೈಟಿಯ ಉಸ್ತುವಾರಿಯಲ್ಲಿ ನಡೆಸಲಾಗುತ್ತದೆ.

## ಖಾಟಿಕ್ ಸಮುದಾಯ ಸಂಘಟನೆ

ರಾಣಾ ಪ್ರತಾಪ್ ಸಿಂಹ ರವರ ಸೈನ್ಯದಲ್ಲಿದ್ದಂತಹ ಖಾಟಿಕ್ ಸಮುದಾಯ ಈತನ ಸಂಸ್ಥಾನದ ಪತನ ನಂತರ ಈ ಸಮುದಾಯದವರು ತಮಗೆ ತೋಚಿದ ಕಡೆ ಜೀವನೋಪಾಯಕ್ಕಾಗಿ ಬೇರೆ ಕಡೆ ವಲಸೆ ಹೋಯಿತು. ಈ ರೀತಿ ಜೀವನ ಸಾಗಿಸಲು ಬಂದಿರುವ ಸಮುದಾಯ ಇದಾಗಿದೆ. ಹೊಸಪೇಟೆ ತಾಲೂಕಿನ ಕೆಲವು ವಾಣಿಜ್ಯ ಕೇಂದ್ರಸ್ಥಾನದ ಹಳ್ಳಿಗಳಲ್ಲಿ ಕೆಲವರು ನೆಲೆಸಿದ್ದು, ಹೊಸಪೇಟೆ ನಗರದಲ್ಲಿ ಈ ಸಮುದಾಯ ಹೆಚ್ಚಿನ ಸಂಖ್ಯೆಯಲ್ಲಿದೆ. ರಾಣಾ ಪ್ರತಾಪ್ ಸಿಂಹರ ಸಂಸ್ಥಾನದಲ್ಲಿ ಇವರು ಕುರಿಗಳನ್ನು ಕಡಿದು ಮಾಂಸವನ್ನು ಒದಗಿಸುವ, ಕುರಿ, ಮೇಕೆ, ಕೋಳಿ ಮಾಂಸದ ಅಡಿಗೆ ಮಾಡಿ, ಸರಾಯಿ/ ಸೇಂದಿ ಅಂಗಡಿಗಳಲ್ಲಿ ಮಾರಾಟ ಮಾಡುವ ಕಾರ್ಯವನ್ನು ಮಾಡುತ್ತಿದೆ. ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿ, ಕಮಲಾಪುರ, ಕಂಪ್ಲಿ ಗ್ರಾಮಗಳಲ್ಲಿಯೂ ಇದೇ ವೃತ್ತಿಯ ಕಾರಣಕ್ಕಾಗಿ ಹಲವು ಕುಟುಂಬಗಳು ನೆಲೆಸಿವೆ. ಕಟುಕ, ಖಾಟಿಕ್, ಕಸಾಯಿ ಎಂಬ ಪದಗಳಿಂದ ಕರೆಯಲ್ಪಡುವ ಇವರು 'ಖಾಟಿಕ್' ಎಂದರೆ ಮರಾಠಿಯಲ್ಲಿ ಕಡಿಯುವುದು, ಕೊಯ್ಯುವುದು ಎಂದರ್ಥ.

ಆರಂಭದಲ್ಲಿ ಈ ಸಮುದಾಯದಲ್ಲಿ ಭೋಟಾ ಥಾಲಾ, ಬಢಾಥಾಲಾ ಎಂಬ ಪಂಗಡಗಳಿದ್ದವು. ಇವರಲ್ಲಿ ಮೇಲು, ಕೀಳೆಂಬ ಭಾವನೆಗಳಿದ್ದವು. 'ಭೋಟಾಥಾಲಾ' ವರ್ಗವು ಕೆಳದರ್ಜೆಯದೆಂದೂ, ಇವರು ಸೂಳೆಯ ಮಕ್ಕಳೆಂದೂ ಭಾವಿಸಿ ಇವರನ್ನು ಕೀಳಾಗಿ ಕಾಣಲಾಗುತ್ತಿತ್ತು. 'ಬಢಾಥಾಲಾ' ಒಳ್ಳೆಯ ಮನೆತನದವರೆಂದು ಇವರಿಗೆ ಸಮುದಾಯದಲ್ಲಿ ಉನ್ನತ ಮಟ್ಟದ ಸ್ಥಾನಮಾನಗಳಿದ್ದವು. ಈ ಎರಡೂ ಪಂಗಡಗಳಲ್ಲಿ ಗಂಡು-ಹೆಣ್ಣಿನ ಕೊಡು ಕೊಳೆಗಳು ನಡೆಯುತ್ತಿರಲಿಲ್ಲ. ಆದರೆ ವಿದ್ಯಾವಂತರ ಪ್ರಭಾವದಿಂದಾಗಿ 'ಚೋಟಾಥಾಲಾ' ವರ್ಗದಲ್ಲಿ ಆದ ಬದಲಾವಣೆಯಿಂದಾಗಿ ಅವರಲ್ಲಿ ಆ 'ಸೂಳೆಗಾರಿಕೆ' ಮಾಯವಾಗಿ ಸಮುದಾಯದ ಮುಖ್ಯ ವಾಹಿನಿಗೆ ಬಂದರು. ಅದೇ ರೀತಿ ಬಢಾಥಾಲಾ ಪಂಗಡದ ಅಕ್ಷರಸ್ಥರ ಉದಾರ ಮನೋಭಾವನೆಯಿಂದಾಗಿ ಈ ಎರಡೂ ಪಂಗಡಗಳನ್ನು ಒಂದು ಗೂಡಿಸುವ ಪ್ರಯತ್ನದ ಫಲವಾಗಿ ಸಂಘಟನೆ ಆರಂಭವಾಯಿತು. ಇದರ ಭಾಗವಾಗಿಯೇ ೧೯೭೪ ರಲ್ಲಿ 'ಖಾಟಿಕ್ ಸೂರ್ಯವಂಶ ಕ್ಷತ್ರಿಯ ಸಮಾಜ್' ಸ್ಥಾಪನೆಯಾಯಿತು. ಎರಡೂ ಪಂಗಡಗಳಲ್ಲಿ ಸಮನ್ವಯತೆಯನ್ನು ಸಾಧಿಸುವುದೇ ಈ ಸಂಘಟನೆಯ ಆದ್ಯತೆಯಾಗಿತ್ತು. ಇದಲ್ಲದೆ ಈ ಎರಡೂ ಪಂಗಡಗಳ ನಡುವೆ ವೈವಾಹಿಕ ಸಂಬಂಧಗಳನ್ನು ಪುನರ್ ಸ್ಥಾಪಿಸಲಾಯಿತು. ಇದರಿಂದಾಗಿ ಈ ಸಮುದಾಯದಲ್ಲಿ ಮೂಡಿದ್ದ ಒಡಕು ಮಾಯವಾಗಿ ಎರಡೂ ಪಂಗಡಗಳು ಒಂದೇ ವೇದಿಕೆಯ ತೆಕ್ಕೆಗೆ ಬರಲು ಸಾಧ್ಯವಾಯಿತು. ಈ ಸಂಘಟನೆಯ ಪ್ರಾರಂಭದಲ್ಲಿ 'ಬಢಾಥಾಲಾ' ಪಂಗಡದ ಮುಖಂಡರು 'ಭೋಟಾಥಾಲಾ' ರವರೊಂದಿಗೆ ಸೇರಲು ವಿರೋಧಿಸಿದರು. ಆದರೆ ಸಮುದಾಯದ ಎರಡೂ ಪಂಗಡಗಳ ಹಿರಿಯರ ಮಾರ್ಗದರ್ಶನದಿಂದಾಗಿ ಎರಡೂ ಪಂಗಡಗಳನ್ನು ಒಂದೇ ವೇದಿಕೆಯಲ್ಲಿ ಸಂಘಟಿಸಲು ಸಾಧ್ಯವಾಯಿತು.

## ಇತರೆ ಸಮುದಾಯಗಳೊಂದಿಗೆ ಒಡನಾಟ :

ಈ ಸಮುದಾಯವು ಮುಸ್ಲಿಂ ಸಮುದಾಯ ಅದರಲ್ಲೂ ಪಿಂಜಾರ ಸಮುದಾಯದೊಂದಿಗೆ ಹೆಚ್ಚಿನ ಸಂಪರ್ಕ ಹೊಂದಿರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ಮುಸ್ಲಿಂರು ಹೆಚ್ಚು ಮಾಂಸಹಾರಿಗಳಾಗಿರುವುದು ಮತ್ತು ಪಿಂಜಾರ ಸಮುದಾಯದ ಸಂಸ್ಕೃತಿ ಹಿಂದೂಗಳಾದ ಖಾಟಿಕ್ ಸಮುದಾಯದ ಸಂಸ್ಕೃತಿಗೆ ಹತ್ತಿರವಿರುವುದು. ಈ ಕಾರಣಗಳಿಂದ ಹೊಸಪೇಟೆ ತಾಲೂಕಿನಲ್ಲಿರುವ ಈ ಸಮುದಾಯದ ಕುಟುಂಬಗಳು ಸಾಮಾನ್ಯವಾಗಿ ಮಾಂಸಹಾರಿಗಳು ಹೆಚ್ಚಿರುವ ಮುಸ್ಲಿಂ ಪಿಂಜಾರರು ಮತ್ತು ಹಿಂದುಳಿದ ಜಾತಿಗಳಾದ ಕುರುಬರು, ನಾಯಕರು, ಭಾವಕ್ಷತ್ರಿಯರು ಇರುವ ಕುಟುಂಬದೊಂದಿಗೆ ಜೀವನ ಸಾಗಿಸುತ್ತಿರುವುದು ಎದ್ದು ಕಾಣುತ್ತದೆ. ಕುರುಬರ ಒಡನಾಟದಿಂದಾಗಿ ಇವರಿಗೆ ಕುರಿ ಖರೀದಿಯಲ್ಲಿ ವ್ಯವಹರಿಸಲು ಸಾಧ್ಯವಾಗಿದೆ ಎಂದು ಹೇಳಬಹುದು.

ಖಾಟಿಕ್ ಸಮುದಾಯದ ಮಾತೃಭಾಷೆ ಹಿಂದಿಯಾಗಿದ್ದರೂ ಅವರದೇ ಆದ ಶಬ್ದಗಳ ಬಳಕೆಯನ್ನು ಗಮನಿಸಬಹುದು. ಕೆಲವು ಹಿಂದೀ ಮಿಶ್ರಿತ ವಿಶಿಷ್ಟ ಶಬ್ದಗಳು ಇದ್ದು ತಮ್ಮವರಿಗೆ ಮಾತ್ರ ಅದರ ಅರ್ಥ ತಿಳಿಯುತ್ತದೆ. ಈ ಶಬ್ದಗಳು ಹಿಂದೀ ಮಾತನಾಡುವ ಇತರರಿಗೆ ಅರ್ಥವಾಗುವುದಿಲ್ಲವೆಂದು ತಿಳಿದು ಬರುತ್ತದೆ.

## ಜಾಗೃತ ನಾಯಕ ಬಳಗ, ಹೊಸಪೇಟೆ.

ವಾಲ್ಮೀಕಿನಾಯಕ ಸಮುದಾಯದ ಹೊಸಪೇಟೆ ತಾಲೂಕಿನ ಪ್ರಮುಖ ಯುವ ಜನ ಸಂಘಟನೆಯಾದ ಜಾಗೃತ ನಾಯಕ ಬಳಗ ಈಗ್ಗೆ ಹತ್ತು ವರ್ಷಗಳಿಂದ ಹೊಸಪೇಟೆ ನಗರದಲ್ಲಿ ಮತ್ತು ತಾಲೂಕಿನ ಕೆಲವು ಗ್ರಾಮಗಳಲ್ಲಿ ಸಾಂಘಿಕ ಚಟುವಟಿಕೆಗಳನ್ನು ನಡೆಸುತ್ತಿದೆ. ವಕೀಲರಾಗಿದ್ದ ದಿವಂಗತ ವಿರುಪಾಕ್ಷನಾಯಕರ ಮುಖಂಡತ್ವದಲ್ಲಿ ಅಸ್ತಿತ್ವಕ್ಕೆ ಬಂದ ಈ ಸಂಘಟನೆ ಹೊಸಪೇಟೆ ನಗರದ ಜನಜೀವನದ ಮೇಲೆ ದಟ್ಟ ಪ್ರಭಾವಬೀರಿದ ಸಂಘಟನೆಯಾಗಿದೆ. ಸಾರ್ವಜನಿಕ ರಸ್ತೆಗಳು, ಸಾರ್ವಜನಿಕ ಸ್ವಚ್ಚತೆ, ಜನಾರೋಗ್ಯದ ಸಮಸ್ಯೆಗಳಿಗೆ ಈ ಸಂಘದ ಸ್ಪಂದನೆ ನಿಜವಾಗಲೂ ಆನುಕರಣೀಯವಾದುದು.

ಹೊಸಪೇಟೆ ಮಾರ್ಗಮಧ್ಯದಲ್ಲಿ ಹಾದು ಹೋಗುತ್ತಿದ್ದ ಮೈನ್ಸ್ ಲಾರಿಗಳ ಸಂಚಾರದ ವಿರುದ್ಧ ಸಾರ್ವಜನಿಕರ ಬೆಂಬಲಪಡೆದು ನಡೆಸಿದ ಐಕ್ಯಚಳುವಳಿಯಿಂದಾಗಿ ಸರಕಾರ ಹೊಸಪೇಟೆಯ ಹೊರವಲಯದಲ್ಲಿ ಬೈಪಾಸ್‌ರಸ್ತೆಯನ್ನು ನಿರ್ಮಿಸಿ ಆ ಮೂಲಕ ಮೈನ್ಸ್ ಲಾರಿಗಳು ಮತ್ತು ಇತರೆ ಲಘು ವಾಹನಗಳ ಸಂಚಾರಕ್ಕೆ ಅವಕಾಶ ಮಾಡಿಕೊಟ್ಟಿದ್ದು. ಈ ಸಂಘಟನೆಯನ್ನು ಸಾರ್ವಜನಿಕರು ಸದಾ ಸ್ಮರಿಸಲು ಕಾರಣವಾಯಿತು. ಈ ಕಾರಣಕ್ಕಾಗಿಯೇ ಈ ರಸ್ತೆಯನ್ನು ದಿವಂಗತ ಮರಡಿ ವಿರುಪಾಕ್ಷ ನಾಯಕರ ರಸ್ತೆ ಎಂದು ನಾಮಕರಣ ಮಾಡಿದ್ದು ಸೂಕ್ತವಾಗಿದೆ.

ಹೊಸಪೇಟೆ ನಗರದ ಸಾರ್ವಜನಿಕ ರಸ್ತೆಗಳ ದುರಸ್ಥಿ, ಚರಂಡಿ ದುರಸ್ಥಿ, ಸರಕಾರಿ ಆಸ್ಪತ್ರೆಯ ಅವ್ಯವಸ್ಥೆಯನ್ನು ಸರಿಪಡಿಸಲು ಜಾಗೃತ ನಾಯಕ ಬಳಗ ಹಲವು ಸಂದರ್ಭಗಳಲ್ಲಿ ರಸ್ತೆತಡೆ, ಸತ್ಯಾಗ್ರಹ, ಮಾನವ ಸರಪಳಿ, ಹೊಸಪೇಟೆಬಂದ್ ಮಾಡುವಂತಹ ಅನೇಕ ಪ್ರತಿಭಟನಾ ಕಾರ್ಯಕ್ರಮಗಳ ಮೂಲಕ ಸಂಬಂಧಪಟ್ಟ ಅಧಿಕಾರಿಗಳ ಗಮನ ಸೆಳೆದು. ಈ ಅವ್ಯವಸ್ಥೆಗಳನ್ನು ಸರಿಪಡಿಸಲು ಶ್ರಮಿಸಿರುವುದು ಕಂಡು ಬರುತ್ತದೆ. ಸಾರ್ವಜನಿಕರ ಹಲವಾರು ಸಮಸ್ಯೆಗಳನ್ನು ಪರಿಹರಿಸುವ ವೇದಿಕೆಯಾಗಿ ರೂಪುಗೊಂಡಿದ್ದು ವಿಶೇಷ. ಒಂದು ನಿರ್ಧಿಷ್ಟ ಹಿಂದುಳಿದ ಜಾತಿಗಷ್ಟೇ ಸೀಮಿತವಾಗಿ ಸಮುದಾಯದ ಸಮಸ್ಯೆಗಳನ್ನು ಬಗೆಹರಿಸುವ ಉದ್ದೇಶದಿಂದ ಆರಂಭವಾದ ಈ ಸಂಘಟನೆ ಇತರೆಲ್ಲಾ ಸಮುದಾಯಗಳ ಬೆಂಬಲದೊಂದಿಗೆ ಸಾರ್ವಜನಿಕ ಸಮಸ್ಯೆಗಳ ಪರಿಹಾರಕ್ಕಾಗಿ ಕಾರ್ಯಕ್ರಮ ರೂಪಿಸಿದ್ದು ಈ ಸಂಘಟನೆಯ ವೈಶಿಷ್ಟ್ಯವಾಗಿದೆ.

## ೪.೬ : ಕಾರ್ಮಿಕ ಸಾಂಘಿಕ ನೆಲೆ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ರೈತರೊಂದಿಗೆ ಕಾರ್ಮಿಕವರ್ಗವೂ ಭಾಗವಹಿಸಿದೆ. ಸಾಮಾನ್ಯವಾಗಿ ಸ್ವಾತಂತ್ರ್ಯ ಹೋರಾಟವೆಂದರೆ ಕೇವಲ ರಾಷ್ಟ್ರೀಯ ನಾಯಕರ ನೇತೃತ್ವದ ಹೋರಾಟವನ್ನೇ ನಾವು ಹೇಳುತ್ತೇವೆ. ಸಾಮಾನ್ಯ ಜನ, ಅದರಲ್ಲೂ ನಿಜವಾದ ದುಡಿಯುವ ಜನವಿಭಾಗಗಳಾದ ರೈತರು, ಕಾರ್ಮಿಕರು, ಮಹಿಳೆಯರು ಹಾಗೂ ದಲಿತರು ನಡೆಸಿದ ಹೋರಾಟ, ಅವರ ಭಾಗವಹಿಸುವಿಕೆ ಯಿಂದ ಆ ಚಳುವಳಿಗಳ ಮೇಲಾದ ಪ್ರಭಾವ, ಸಾಮಾಜಿಕ ಆರ್ಥಿಕ, ರಾಜಕೀಯ ಬದಲಾವಣೆ ಗಳನ್ನು ಗಮನಿಸುವುದು ಸೂಕ್ತವಾಗುತ್ತದೆ. ಬಹಳ ಸಾರಿ ಈ ದುಡಿಯುವ ವರ್ಗವನ್ನು ಉದ್ದೇಶ ಪೂರ್ವಕವಾಗಿ ಸ್ವಾತಂತ್ರ್ಯ ಹೋರಾಟದ ಹಲವು ಮಜಲುಗಳಲ್ಲಿ ದೂರವೇ ಇಟ್ಟಿರುವುದನ್ನು ಹಲವು ಘಟನೆಗಳಿಂದ ನಾವು ತಿಳಿಯಬಹುದು. ಈ ಸ್ವಾತಂತ್ರ್ಯ ಹೋರಾಟದ ಆರಂಭದಿಂದಲೇ ಭಾರತದ ದುಡಿಯುವ ವರ್ಗ ಮೂಲಭೂತವಾಗಿ ಒಂದಕ್ಕೊಂದು ವಿರುದ್ಧವಾದ ಎರಡು ಶಕ್ತಿಗಳ ವಿರುದ್ಧ ಹೋರಾಟ ನಡೆಸಬೇಕಾಯಿತು. ಸಾಮ್ರಾಜ್ಯಶಾಹಿ ಆಡಳಿತ ಮತ್ತು ದೇಶೀಯ ಬಂಡವಾಳ ಶಾಹಿ ಶೋಷಣೆಯ ವಿರುದ್ಧದ ಆರ್ಥಿಕ ಹೋರಾಟ. ಇದರಿಂದಾಗಿ ದೇಶದ ಕಾರ್ಮಿಕ ಚಳುವಳಿ ಹಾಗೂ ರಾಷ್ಟ್ರೀಯ ವಿಮೋಚನಾ ಚಳುವಳಿ ಒಂದಕ್ಕೊಂದು ಬೆಸೆಯದಿರಲು ಸಾಧ್ಯವೇ ಇರಲಿಲ್ಲ. 1929ರ ಡಿಸೆಂಬರ್‌ನಲ್ಲಿ ಕೋಲ್ಕತ್ತಾ ಅಧಿವೇಶನದ ಸಂದರ್ಭದಲ್ಲಿ ಕಾರ್ಮಿಕರ ಒಂದು ಬೃಹತ್ ಮೆರವಣಿಗೆ ಕಾಂಗ್ರೇಸ್ ಅಧಿವೇಶನ ನಡೆಯುತ್ತಿದ್ದ ಸ್ಥಳಕ್ಕೆ ಬಂದು ನಿರ್ಣಯ ಅಂಗೀಕಾರಕ್ಕೆ ಕಾರಣವಾಯಿತು. ಏನೆಂದರೆ ರೈತ ಮತ್ತು ಕಾರ್ಮಿಕರನ್ನೊಳಗೊಂಡ ಇಂದಿನ ಈ ಬೃಹತ್ ಸಭೆಯು, ಈ ದೇಶಕ್ಕೆ ಸಂಪೂರ್ಣ ಸ್ವಾತಂತ್ರ್ಯ ಸಿಗುವವರೆಗೂ ಮತ್ತು ಬಂಡವಾಳಶಾಹಿಯ ಹಾಗೂ ಸಾಮ್ರಾಜ್ಯಶಾಹಿಯ ಶೋಷಣೆಯಿಂದ ಮುಕ್ತಿಸಿಗುವವರೆಗೂ ವಿಶ್ರಮಿಸುವುದಿಲ್ಲ. ರಾಷ್ಟ್ರೀಯ ಕಾಂಗ್ರೇಸ್ ಪಕ್ಷ ತನ್ನ ಮುಂದೆ ಇಂತಹ ಗುರಿಯನ್ನಿಟ್ಟುಕೊಂಡು ಅದಕ್ಕಾಗಿ ದೇಶದ ಜನತೆಯನ್ನು ಸಂಘಟಿಸಬೇಕೆಂದು ನಾವು ಕರೆ ನೀಡುತ್ತೇವೆ ಎಂದು ಸಾರಿತು.

ಭಾರತದ ಸ್ವಾತಂತ್ರ್ಯ ಹೋರಾಟದ ರಾಜಕೀಯ ಹೋರಾಟ ಎರಡು ಭಿನ್ನದಾರಿಗಳಲ್ಲಿ ನಡೆಯಿತು. ಒಂದಕ್ಕೆ ಬಂಡವಾಳಶಾಹಿಗಳ ನೇತೃತ್ವವಿದ್ದರೆ ಮತ್ತೊಂದಕ್ಕೆ ದುಡಿಯುವ ವರ್ಗದ ನೇತೃತ್ವ ನೀಡಿತು. ದೇಶೀ ಬಂಡವಾಳಗಾರರು ಸದಾ ಡೋಲಾಯಮಾನ ಸ್ಥಿತಿಯಲ್ಲಿಯೇ ಇದ್ದದ್ದು ಈ ಹೋರಾಟದುದ್ದಕ್ಕೂ ಕಂಡು ಬಂದಿತು. ಸಂಪೂರ್ಣ ಸ್ವಾತಂತ್ರ್ಯ ಪ್ರಶ್ನೆಯ ಬಗ್ಗೆ ಸ್ಪಷ್ಟನಿಲುವು ಅಂಗೀಕರಿಸುವುದರಲ್ಲೂ ಇದು ಕಂಡು ಬಂತು. ಇದಕ್ಕೆ ವ್ಯತಿರಿಕ್ತವಾಗಿ ಕಾರ್ಮಿಕರು ರಾಜಕೀಯ ಹೋರಾಟದಲ್ಲಿ ಸ್ಪಷ್ಟತೆಯನ್ನು ಹೊಂದಿದ್ದರು. ಅಷ್ಟೇ ಅಲ್ಲಿ ತಮ್ಮ ಆರ್ಥಿಕ ಬೇಡಿಕೆಗಳನ್ನು ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ರಾಜಕೀಯ ಹೋರಾಟದೊಂದಿಗೆ ಬೆಸೆಯಲು ಅವರಿಗೆ ಸಾಧ್ಯವಿತ್ತು. ಎಲ್ಲಾ ರೀತಿಯ ತ್ಯಾಗ, ಬಲಿದಾನಗಳಿಗೆ ಜೀವಕೊಡಲು ಸಿದ್ಧರಾಗದಿದ್ದರೆ ಖಂಡಿತವಾಗಿಯೂ ಯಾವುದೇ ಗುರಿ ತಲುಪಲು ಸಾಧ್ಯವಿಲ್ಲವೆಂಬ ಅರಿವನ್ನು, ಆ ಅರಿವಿನಿಂದ ಮೂಡುವ ಧೈರ್ಯವನ್ನು ಅವರು ತೋರ್ಪಡಿಸಿದರು. ಅವರ ಈ ತ್ಯಾಗದ ಫಲವಾಗಿಯೇ ನಾವಿಂದು ಸ್ವತಂತ್ರ್ಯರಾಗಿದ್ದೇವೆ. ಜೊತೆಗೆ ಅವರ ಈ ಹೋರಾಟದ ಅನುಭವದಿಂದ ಕಲಿತು ಈಗ ನಮಗೆ ಬಿಟ್ಟು ಹೋಗಿರುವ ಪಾಠ ನಮಗೆ ಈಗಲೂ ಪ್ರಸ್ತುತವಾಗಿದೆ ಎಂದರೆ ತಪ್ಪಾಗುವುದಿಲ್ಲ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮೇಲ್ಮಟ್ಟದ ನಾಯಕತ್ವದಲ್ಲಿದ್ದ ಚಂಚಲತೆ, ಅನೈಕ್ಯತೆಯ ಪರಿಸ್ಥಿತಿಯನ್ನು ಬಳಸಿಕೊಳ್ಳುವಲ್ಲಿ ಬ್ರಿಟೀಷರು ತಮ್ಮ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಾ ಈ ಪರಿಸ್ಥಿತಿಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿದ್ದರು. ಇಡೀ ದೇಶದಲ್ಲಿ ಸಾವಿರ, ಸಾವಿರ ಸಂಖ್ಯೆಯಲ್ಲಿ ಕಾರ್ಖಾನೆಗಳ ಕಾರ್ಮಿಕರು ವಿದ್ಯಾರ್ಥಿಗಳು, ರೈತರೊಂದಿಗೆ ಸೇರಿಕೊಂಡು ಮುಂಬೈ, ಕಲ್ಕತ್ತಾ, ಮತ್ತಿತರ ಪ್ರಮುಖ ನಗರಗಳಲ್ಲಿ ಸಾವಿಗಂಜದೆ ಪೋಲೀಸರ ಬಂದೂಕುಗಳನ್ನೆದುರಿಸಿ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ನಡೆದ ಪ್ರದರ್ಶನಗಳಲ್ಲಿ ಪಾಲ್ಗೊಂಡರು. ಮುಂಬೈ ಪ್ರಾಂತದಲ್ಲಿ ರಾಯಲ್ ಇಂಡಿಯನ್ ನೇವಿಯ ಸಿಪಾಯಿಗಳು ಬಹಿರಂಗವಾಗಿ ಬಂಡೆದ್ದರು. ಈ ಸಿಪಾಯಿಗಳ ಹೋರಾಟವನ್ನು ಬಗ್ಗು ಬಡಿಯಲು ಬ್ರಿಟೀಷ್ ಕೃಪಾ ಪೋಷಿತ ಸೇನಾಪಡೆ ಅನೇಕ ದಮನಕಾರಿ ಕ್ರಮಗಳನ್ನು ಕೈಗೊಂಡು ದೇಶಪ್ರೇಮಿ ಕೆಲಸಗಾರ ಸಿಪಾಯಿಗಳು ಯಾವುದೇ ಬೆದರಿಕೆಗೆ ಮಣಿಯದೆ ಪ್ರತಿಭಟನೆ ಮುಂದುವರೆಸಿದ್ದು ಮಾತ್ರವಲ್ಲದೆ ನಾಗರೀಕರಿಗೂ ಹರತಾಳ ಆಚರಿಸಲು ಕರೆನೀಡಿತು.

ಈ ಸ್ವಾತಂತ್ರ್ಯ ಹೋರಾಟಕ್ಕೆ ಮುಂಚೂಣಿನಾಯಕರು ನಿರೀಕ್ಷಿಸಿದಷ್ಟು ಬೆಂಬಲ ನೀಡಲಿಲ್ಲವಾದರೂ ಮುಂಬೈನ ಇನ್ನಿತರ ಕಾರ್ಮಿಕರ ವರ್ಗ ಸಂಪೂರ್ಣವಾಗಿ ಬೆಂಬಲಿಸಿತು. ಇವರೆಲ್ಲರ ಬೆಂಬಲದಿಂದ ಉತ್ತೇಜಿತರಾದ ಕಾರ್ಮಿಕರು ತೀವ್ರರೀತಿಯಲ್ಲಿ ಚಳುವಳಿಯನ್ನು ಮುಂದುವರೆಸಿದರು. ಬ್ರಿಟೀಷ್ ಸೇನೆ, ಪೋಲಿಸರು ಅಮಾನವೀಯ ದಮನಕಾರಿ ಕ್ರಮದ ಮೂಲಕ ಬಂದೂಕಿನಿಂದ ನೂರಾರು ಕಾರ್ಮಿಕರ ಮೇಲೆ ಗುಂಡಿನ ಮಳೆ ಗೈದರು. ಇದರಿಂದ ನೂರಾರು ಕಾರ್ಮಿಕರು ಪ್ರಾಣತ್ಯಾಗ ಮಾಡಿದರು. ಸರ್ಕಾರಿ ಲೆಕ್ಕದ ಪ್ರಕಾರ ೨೫೦ ಜನ ಸತ್ತರೆಂದು ವರದಿಯಾಯಿತು. ಈ ಹೋರಾಟ ಒಟ್ಟು ನಾಲ್ಕುದಿನಗಳ ಕಾಲ ನಡೆಯಿತು. ಇದರ ಭಾಗವಾಗಿ ಇಡೀ ದೇಶದ ತುಂಬೆಲ್ಲಾ ಪ್ರದರ್ಶನಗಳು ನಡೆದವು. ಇದರ ಪರಿಣಾಮವಾಗಿ ಇಡೀ ದೇಶದ ತುಂಬಾ ಕಾರ್ಮಿಕ ವರ್ಗ ಸ್ವಾತಂತ್ರ್ಯ ಚಳುವಳಿಯಲ್ಲಿ ಒಟ್ಟಾಗಿ ಧುಮುಕುವಂತಾಯಿತು.

೧೯೪೫-೪೬ ರ ಸಂದರ್ಭದಲ್ಲಿ ಭಾರತದ ರಾಜಕೀಯ ಸಂದರ್ಭದಲ್ಲಿ ಹೊಸ ವರ್ಗ ಸಾಮರಸ್ಯವನ್ನು ಹುಟ್ಟು ಹಾಕಿತೆನ್ನಬಹುದು. ಇಡೀ ದುಡಿಯುವ ಶ್ರಮ ಜೀವಿ ವರ್ಗ ಒಗ್ಗಟ್ಟನ್ನು ಮರೆಸಿ, ಎಂದೂ ತಲೆಬಾಗದೆ ಹೋರಾಟ ನಡೆಸುವ ಮನೋಭಾವ ಪ್ರದರ್ಶಿಸಿದ ಮಧ್ಯಮ ವರ್ಗಗಳು, ವಿದ್ಯಾರ್ಥಿಗಳು, ಸಾರ್ವಜನಿಕರು ರಾಜಕೀಯ ಹೋರಾಟಗಳಲ್ಲಿ ಪಾಲ್ಗೊಂಡು ಬ್ರಿಟೀಷ್ ವಿರುದ್ದದ ಹೋರಾಟವನ್ನು ಬಹು ಎತ್ತರಕ್ಕೆ ಏರಿಸಿದರು. ಈ ಹೋರಾಟದಿಂದ ಕೆಳಗೆ ಸರಿಯುವುದು ಸಾಧ್ಯವಿರಲಿಲ್ಲ. ದೇಶದ ಕಾರ್ಮಿಕರು ತಮ್ಮ ಆರ್ಥಿಕ ಬೇಡಿಕೆಗಳನ್ನು ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ರಾಜಕೀಯ ಹೋರಾಟದೊಂದಿಗೆ ಬೆಸೆಯಲು ಅವರಿಗೆ ಸಾಧ್ಯವಾಗಿತ್ತು. ಎಲ್ಲಾ ರೀತಿಯ ತ್ಯಾಗ, ಬಲಿದಾನಗಳಿಗೆ ಜೀವಕೊಡಲು ಸಾಧ್ಯವಾಗದಿದ್ದರೆ ಖಂಡಿತವಾಗಿಯೂ ಯಾವುದೇ ಗುರಿ ತಲುಪಲು ಸಾಧ್ಯವಿಲ್ಲವೆಂಬ ಅರಿವನ್ನು, ಆ ಅರಿವಿನಿಂದ ಮೂಡುವ ಧೈರ್ಯವನ್ನು ಅವರು ತೋರ್ಪಡಿಸಿದರು. ಆ ಶ್ರಮಜೀವಿಗಳ ಪರಿಶ್ರಮದಿಂದಲೇ ಭಾರತ ಸ್ವಾತಂತ್ರ್ಯ ಪಡೆಯಲು ಸಾಧ್ಯವಾಯಿತು ಎಂಬುದು ಸತ್ಯವಾದ ಮಾತೇ ಸರಿ.

ಸ್ವಾತಂತ್ರ್ಯ ನಂತರದಲ್ಲಿ ಭಾರತೀಯ ಕಾರ್ಮಿಕ ಎಚ್ಚೆತ್ತಿದ್ದಾನೆ. ಆತನಿಗೆ ತನ್ನ ಕಾರ್ಯಾತ್ಮಕ ಸ್ಥಿತಿಗತಿಗಳ ಉತ್ತಮೀಕರಣವಷ್ಟೇ ಅಲ್ಲ. ಉತ್ಪಾದನ ಸಾಧನಗಳ ಮೇಲೆ ನಿಯಂತ್ರಣ ಬೇಕಾಗಿದೆ. ಮತ್ತು ಕಾರ್ಮಿಕರ ಸ್ಥಿತಿಯ ಮೇಲೆ ಹತೋಟಿ ಬೇಕಾಗಿದೆ. ಕಾರ್ಮಿಕರ ಮುಖಂಡರಲ್ಲಿರುವ ಎಲ್ಲಾ ಸಂಘರ್ಷಗಳ ಪೈಕಿ ಚಳುವಳಿಯು ನಿಸ್ಸಂದೇಹವಾಗಿಯೂ ದೇಶದ ಕ್ರಿಯಾಶೀಲ ಸಮರ್ಥ ಶಕ್ತಿಯಾಗಿ ಪರಿಣಮಿಸಿದೆ.

ಆದರೆ ಯಾವುದೇ ಒಂದು ಚಳುವಳಿಯನ್ನು ಒಗ್ಗಟ್ಟಿನಿಂದ ಮತ್ತು ದುಡಿಯುವ ಎಲ್ಲಾ ಜನ ವಿಭಾಗಗಳ ಜೊತೆಗೆ ಒಟ್ಟಾಗಿ ನಡೆಸಬೇಕಾಗುತ್ತದೆ. ಮಾಲೀಕರ ವಿರುದ್ಧ ಈ ಹೋರಾಟ ಅನಿವಾರ್ಯವಾಗುವಂತೆ ಇವತ್ತಿನ ವ್ಯವಸ್ಥೆ ಮಾಡುತ್ತದೆ. ಯಾವ ಸಾಮಾಜಿಕ ವ್ಯವಸ್ಥೆಯಲ್ಲಿ ಭೂಮಿ, ಕಾರ್ಖಾನೆಗಳು, ಉಪಕರಣಗಳು ಕೆಲವೇ ಜನ ಭೂಮಾಲೀಕರ ಹಾಗೂ ಬಂಡವಾಳ ಶಾಹಿಗಳ ಸ್ವಾಧೀನದಲ್ಲಿದ್ದು, ಉಳಿದ ಪ್ರಜಾ ಸಮುದಾಯ ಆಸ್ತಿರಹಿತವಾಗಿ ಅಥವಾ ಚೂರು ಪಾರು ಆಸ್ತಿ ಮಾತ್ರ ಹೊಂದಿದ್ದು ತನ್ನನ್ನು ಬಂಡವಾಳಿಗರ ಅಥವಾ ಭೂಮಾಲೀಕರ ಸೇವೆಯ ದುಡಿಮೆಗಾರರಾಗಿ ಮಾರಿಕೊಳ್ಳಬೇಕಾದ ಅನಿವಾರ್ಯತೆ ಉದ್ಭವಿಸುತ್ತದೆ. ಕೈಗಾರಿಕೋದ್ಯಮಿಗಳು ಕಾರ್ಮಿಕರನ್ನು ಕೂಲಿಯ ಮೇಲೆ ನೇಮಿಸಿಕೊಂಡು ದುಡಿಸಿ ಆ ಮೂಲಕ ಸರಕುಗಳನ್ನು ಉತ್ಪಾದಿಸಿ ಮಾರುಕಟ್ಟೆಯಲ್ಲಿ ಮಾರುತ್ತಾರೆ. ಈ ಸಾಧನ ಸಂಪತ್ತುಗಳ ಒಡೆಯರು ಕಾರ್ಮಿಕರಿಗೆ ನಿಕೃಷ್ಟ ಜೀವನಾಧಾರಕ್ಕೆ ಬೇಕಾಗುವಷ್ಟು ಮಾತ್ರ ವೇತನ ನೀಡಿ ಅವರನ್ನು ಚೆನ್ನಾಗಿ ದುಡಿಸಿ, ಆದರಿಂದ ಬಂದ ಹೆಚ್ಚಿನ ಉತ್ಪಾದನೆಯನ್ನು ತಾವು ಗಳಿಸಿದ ಲಾಭವೆಂದೇ ತಾವು ಬಾಚಿಕೊಳ್ಳುತ್ತಾರೆ. ಇಂಥಹ ಆರ್ಥಿಕ ವ್ಯವಸ್ಥೆಯಲ್ಲಿ ಹೆಚ್ಚಿನ ಕಾರ್ಮಿಕರು ಕೇವಲ ಕೂಲಿಯಾಳುಗಳಾಗಿ ಮಾತ್ರ ಸೇವೆ ಸಲ್ಲಿಸುತ್ತಾರೆ. ಕೆಲಸಗಾರರಿಗೆ ಕಡಿಮೆ ವೇತನ ಕೊಟ್ಟಷ್ಟು ಮಾಲೀಕರಿಗೆ ಲಾಭ ಹೆಚ್ಚುತ್ತಾ ಹೋಗುತ್ತದೆ. ಇತ್ತ ಕಾರ್ಮಿಕರು ತಮಗೆ ಹಾಗೂ ತಮ್ಮ ಸಂಸಾರಕ್ಕೆ ಸಾಕಾಗುವಷ್ಟು ಮತ್ತು ಪೌಷ್ಠಿಕವಾದ ಆಹಾರ, ಬಟ್ಟೆ, ಮತ್ತಿತರ ಸೌಲಭ್ಯಗಳನ್ನು

ಪಡೆಯಲು ಹೆಚ್ಚು ಕೂಲಿಯ ಅವಶ್ಯಕತೆ ಇರುವುದರಿಂದ ಹೆಚ್ಚಿನ ಕೂಲಿಗಾಗಿ ಪ್ರಯತ್ನ ಅನಿವಾರ್ಯವಾಗುತ್ತದೆ. ಹೀಗೆ ಕಡಿಮೆ ವೇತನ ಕೊಡುವ ಮಾಲೀಕ ಹಾಗೂ ಹೆಚ್ಚು ವೇತನ ಪಡೆಯಲು ಯತ್ನಿಸುವ ಕಾರ್ಮಿಕರ ನಡುವೆ ಒಂದು ಸತತ ಹೋರಾಟ ನಡೆಯುತ್ತಲೇ ಇರುತ್ತದೆ.

ಆದರೆ ಇಂತಹ ಹೋರಾಟ ಕೇವಲ ಒಂಟಿ ಕಾರ್ಮಿಕನಿಂದ ನಡೆಸಲು ಸಾಧ್ಯವಿಲ್ಲ. ತನ್ನ ಹಾಗೆ ದುಡಿಯುವ ಕಾರ್ಮಿಕನೊಂದಿಗೆ ಸೇರುವುದು ಸಾಂಘಿಕ ಚಟುವಟಿಕೆ ನಡೆಸುವುದು ಅನಿವಾರ್ಯವೂ, ಸೂಕ್ತವೂ ಆಗಿರುತ್ತದೆ. ನಮಗೆಲ್ಲಾ ಗೊತ್ತಿರುವ ಹಾಗೆ ಮಾಲೀಕರ ಮತ್ತು ಕೂಲಿಕಾರರ ನಡುವೆ ಒಪ್ಪಂದಗಳ ಮೂಲಕವೇ ವೇತನ ಮತ್ತಿತರ ಸೌಲಭ್ಯಗಳ ಇತ್ಯರ್ಥವಾಗಿರುತ್ತದೆ. ಮಾಲೀಕರು ಕೂಲಿಯನ್ನು ತಮ್ಮಷ್ಟಕ್ಕೆ ತಾವೇ ಹೆಚ್ಚು ಮಾಡುವುದಿಲ್ಲ. ಕಾರ್ಮಿಕರು ತಾವೆಲ್ಲಾ ಒಟ್ಟಿಗೆ ಸಮಾಲೋಚಿಸಿ ಕೂಲಿಯನ್ನು ಹೆಚ್ಚು ಮಾಡಲು ಇತರ ಸೌಲಭ್ಯಗಳನ್ನು ಒದಗಿಸಲು ಬೇಡಿಕೆ ಇಡಬೇಕಾಗುತ್ತದೆ. ಬೇಡಿಕೆ ಇಟ್ಟು ಮಾಲೀಕರಿಗೆ ಸಾಕಷ್ಟು ಕಲಾವಕಾಶ ನೀಡಬೇಕಾಗುತ್ತದೆ. ಬೇಡಿಕೆ ಮಂಡಿಸಿ ಸಾಕಷ್ಟು ಕಾಲಾವಕಾಶ ನೀಡಿದ ನಂತರವೂ ಬೇಡಿಕೆಗಳಿಗೆ ಆಡಳಿತವರ್ಗ ಅಥವಾ ಮಾಲೀಕ ವರ್ಗ ಸ್ಪಂದಿಸದೇ ಇದ್ದರೆ ಕಾರ್ಮಿಕರು ಸಂಘಟಿತ ಮುಷ್ಕರ ನಡೆಸುವುದು ಅನಿವಾರ್ಯವಾಗುತ್ತದೆ.

ಕೈಗಾರಿಕಾ ರಂಗದ ಸಹಜ ಸ್ವಭಾವದಿಂದಲೇ ಹುಟ್ಟಿಕೊಳ್ಳುವ ಮುಷ್ಕರಗಳು ಅಂತಹ ಸಮಾಜ ವ್ಯವಸ್ಥೆಯ ವಿರುದ್ಧ ಕಾರ್ಮಿಕ ವರ್ಗದ ಹೋರಾಟ ಆರಂಭವಾಗುವುದನ್ನು ಸೂಚಿಸುತ್ತದೆ. ಆದ್ದರಿಂದಲೇ ಮುಷ್ಕರಗಳು ಯಾವಾಗಲೂ ಕಾರ್ಮಿಕರಿಗೆ ಒಗ್ಗಟ್ಟಿನಿಂದಿರುವಂತೆಯೂ, ಒಗ್ಗಟ್ಟಿನಿಂದ ಮಾತ್ರ ಯಾವುದೇ ಬೇಡಿಕೆಯನ್ನು ಈಡೇರಿಸಿಕೊಳ್ಳಬಹುದೆಂಬ ತಿಳುವಳಿಕೆಯನ್ನು ಕೊಡುತ್ತವೆ. ಮುಷ್ಕರ, ಪ್ರತಿಭಟನೆಗಳು ಕಾರ್ಖಾನೆಗಳ ಮಾಲೀಕರ ವಿರುದ್ಧ ಮತ್ತು ನಿರಂಕುಶ ಸರಕಾರದ ವಿರುದ್ಧ ಸಮಗ್ರ ಕಾರ್ಮಿಕವರ್ಗ ನಡೆಸುವ ಹೋರಾಟದ ಅವಶ್ಯಕತೆಯ ಬಗ್ಗೆ ಕಾರ್ಮಿಕರು ಚಿಂತಿಸುವುದನ್ನು ಕಲಿಸುತ್ತವೆ. ಈ ಕಾರಣದಿಂದಲೇ ಮುಷ್ಕರಗಳನ್ನು ''ಯುದ್ದ ಶಾಲೆ'' ಗಳೆಂದು ಸಮಾಜ ಶಾಸ್ತ್ರಜ್ಞರು ಕರೆದಿದ್ದಾರೆ. ಸಮಸ್ಥ ದುಡಿಯುವ ವರ್ಗದ ಜನ ಅಧಿಕಾರಿಶಾಹಿಗಳು ಬಂಡವಾಳಿಗರ ದಾಸ್ಯದಿಂದ ವಿಮೋಚನೆಗೊಳಿಸಲು ತನ್ನ ಶತ್ರುಗಳ ವಿರುದ್ಧ ಹೋರಾಡಲು ಕಾರ್ಮಿಕರಿಗೆ ಕಲಿಸುವ ಶಾಲೆಗಳೇ ಮುಷ್ಕರಗಳು. ಒಗ್ಗೂಡಿದ ಕಾರ್ಮಿಕರು ಚಳುವಳಿಯ ತನ್ನ ಬೆಳವಣಿಗೆಯ ಮೊದಲ ಹಂತದಲ್ಲಿದ್ದಾಗ ಮತ್ತು ಕಾರ್ಮಿಕರು ಹೆಚ್ಚು ಅನುಭವವನ್ನು ಪಡೆಯುವ ಮೂಲಕ ತನ್ನ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳುತ್ತದೆ.

ಭಾರತೀಯ ಕಾರ್ಮಿಕರು ಈ ರೀತಿಯ ಐಕ್ಯ ಹೋರಾಟದಿಂದ ಸ್ವಾತಂತ್ರ್ಯ ಪಡೆದ ಅನುಭವದಿಂದ ಅರಿತುಕೊಂಡಿದ್ದಾರೆ. ಒಂದು ಯಶಸ್ವಿ ಕಾರ್ಮಿಕ ಸಂಘಕ್ಕೆ ಕೆಳಗಿನ ಲಕ್ಷಣಗಳಿರಬೇಕಾಗುತ್ತದೆ.

೧. ಅದು ತಮ್ಮ ಸ್ಥಿತಿಯ ಬಗ್ಗೆ ಅರಿವನ್ನು ಹೊಂದಿರಬೇಕು. ಹಾಗಿದ್ದರೆ ಮಾತ್ರ ಅದು ಕಾರ್ಮಿಕ ಚಳುವಳಿಗೆ ಸರಿಯಾದ ಮಾರ್ಗದರ್ಶನ ಮತ್ತು ನಿರ್ದೇಶನವನ್ನು ನೀಡಬಲ್ಲದು. ಇದಕ್ಕೆ ಪೂರ್ವಭಾವಿಯಾಗಿ ಒಳ್ಳೆಯ ನಾಯಕತ್ವವಿರಬೇಕು. ಆ ನಾಯಕತ್ವವು ಕಾರ್ಮಿಕರ ಹಿತಾಸಕ್ತಿಗಳನ್ನು ಬೇರೆಯವರಿಂದ ಆಮದು ಮಾಡಿದ ಶುಷ್ಕ ತಾತ್ವಿಕ ಉತ್ಸಾಹ ಆವೇಶಗಳಿಗಾಗಿ ಬಲಿಕೊಡಲು ಸಿದ್ಧನಾಗಿರುವುದಿಲ್ಲ. ಆದರೆ ಆತನು ಅವರಿಗೆ ಹೊಸ ವ್ಯವಸ್ಥೆಯೊಂದರಲ್ಲಿ ಭಾಗವಹಿಸುವವರಾಗಿ ತಮ್ಮ ಸ್ಥಾನಮಾನವನ್ನು ಹೆದ್ದಾರಿಯನ್ನು ತೋರಿಸಲೆತ್ನಿಸುತ್ತಾನೆ.

೨. ದೃಢವಾದ ಭದ್ರವಾದ ಬುನಾದಿಯನ್ನು ಹೊಂದಿರಬೇಕು. ಇದರಿಂದಾಗಿ ಅವರ ಧ್ಯೇಯೋದ್ದೇಶಗಳೇನೆಂಬುದನ್ನು ಅರಿತುಕೊಳ್ಳುವಲ್ಲಿ ಯಶಸ್ಸನ್ನು ಸಾಧಿಸುವಷ್ಟರ ಮಟ್ಟಿಗೆ ಅದು ಬಲವಾಗಿರಬಹುದು.

೩. ಸ್ಪಷ್ಟವಾಗಿ ರೂಪಿಸಲಾದ ಗುರಿಗಳಿರಬೇಕು. ಧ್ಯೇಯೋದ್ದೇಶಗಳಿರಬೇಕು. ಮತ್ತು ಸುಭದ್ರವಾಗಿರುವ ಹಾಗೂ ಚೆನ್ನಾಗಿ ರೂಪಿಸಿಕೊಂಡ ನೀತಿ ಇರಬೇಕು. ಮತ್ತು ಅದು ತನ್ನನ್ನು ಒಂದು ವಾಣಿಜ್ಯ ಸಂಘಟನೆಯೆಂದು ಪರಿಗಣಿಸಬೇಕು. ಅದಕ್ಕೆ ಎಚ್ಚರಿಕೆಯ ಯೋಜನೆ ಬೇಕು ಮತ್ತು ಅದರ ಯಶಸ್ಸಿಗೆ ಸುಭದ್ರವಾದ ಸಂಘಟನಾತ್ಮಕ ವಿಧಾನಗಳಿರಬೇಕು.

೪. ಸದಸ್ಯರಿಗಾಗಿ ಸದಸ್ಯರಿಂದಲೇ ನಿರ್ವಹಿಸಲ್ಪಡಬೇಕು. ಅಂದರೆ ಅದರ ಸದಸ್ಯರ ಸ್ತರದಿಂದ ಹಾಗೂ ಫೈಲ್‌ನಿಂದಲೇ ಅದರ ನಾಯಕತ್ವವನ್ನು ಆಯ್ದುಕೊಳ್ಳಬೇಕು. ಮತ್ತು ಅದು ಸದಸ್ಯರ ಬೆಂಬಲ ಅಥವಾ ತಿರಸ್ಕಾರಕ್ಕೆ ಒಳಪಟ್ಟಿರಬೇಕು.

೫. ಉದ್ದೇಶಗಳ ಬಗ್ಗೆ ಪ್ರಾಮಾಣಿಕತೆ ಇರಬೇಕು. ಮತ್ತು ನೀತಿ ನಿಷ್ಠೆ ಇರಬೇಕು. ಅಂದರೆ ಅದು ಆರ್ಥಿಕ ವಿಷಯಗಳಲ್ಲಿ ಮಾತ್ರ ಪ್ರಾಮಾಣಿಕವಾಗಿದ್ದರೆ ಸಾಲದು. ಆದರೆ ಅದರ ನೀತಿ ನಿಷ್ಠೆಯು ಸಮಗ್ರವಾಗಿ ಎಲ್ಲವನ್ನು ಅಳವಡಿಸಿಕೊಂಡಿರಬೇಕು. ಮತ್ತು ನಿಯೋಜಕರವರೆಗೂ ಅದರ ಸಂಬಂಧವನ್ನು ವಿಸ್ತರಿಸಬೇಕು. ಅದರ ನೀತಿಗಳನ್ನು ರೂಪಿಸಲು ಮತ್ತು ಅದರ ಕಾರ್ಯ ನಿರ್ವಹಣೆಯ ಮೌಲ್ಯಾಂತರ ಮಾಡಲು ಮತ್ತು ಅವರದ್ದೇ ಸದಸ್ಯರಿಗಾಗಿ ಅದು ಹೃತ್ಪೂರ್ವಕವಾಗಿ ಕೆಲಸ ಮಾಡಬೇಕು.

೬. ಅದು ತನ್ನ ಸ್ವಂತ ದಿಗಂತದ ಆಚೆಗೂ ನೋಡಬೇಕು. ಮತ್ತು ರಾಷ್ಟ್ರದ ಜೀವನದಲ್ಲಿ ಹಾಗೂ ಅದು ಬದುಕುವ ಮತ್ತು ಕಾರ್ಯನಿರ್ವಹಿಸುವಂತಹ ಸಮುದಾಯಗಳ ಮಧ್ಯೆ ತನ್ನ ನಿಜವಾದ ಪಾತ್ರವೇನೆಂದು ಗುರುತಿಸಬೇಕು. ಮತ್ತು ಸರಿಯಾದ ಪಾತ್ರವನ್ನು ಪೂರೈಸಬೇಕು.

೭. ಹೊಣೆಗಾರಿಕೆ ಎಂದರೆ ಏನು ಎಂಬ ಬಗ್ಗೆ ಚೆನ್ನಾಗಿ ತಿಳಿದುಕೊಂಡಿರಬೇಕು. ಅಂದರೆ ಈ ಕೆಳಗಿನ ಅಂಶಗಳು ಅವಶ್ಯ, ಅವುಗಳೆಂದರೆ

ಅ) ಅದು ಆಂತರಿಕವಾಗಿ ಪ್ರಬಲವಾಗಿರಬೇಕು. ಆದರಿಂದಾಗಿ ಅದು ಕಾರ್ಮಿಕರ ಹಿತಾಸಕ್ತಿಗಳನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಸಂರಕ್ಷಿಸಬಲ್ಲದು.

ಆ) ಅದು ಅತ್ಯಂತ ಎಚ್ಚರಿಕೆಯಿಂದ ಮತ್ತು ಜವಾಬ್ದಾರಿಯುತ ರೀತಿಯಲ್ಲಿ ಆರ್ಥಿಕ ಶಕ್ತಿಯನ್ನು ಬಳಸಿಕೊಳ್ಳಬೇಕು. ಅಂದರೆ ಅದಕ್ಕೆ ಅವಕಾಶಗಳ ಸೃಷ್ಟಿಯಿಂದ ಅದು ಅಸ್ಥಿತ್ವದಲ್ಲಿರುವ ವಾಸ್ತವ ಸತ್ಯಗಳನ್ನು ತಿಳಿದುಕೊಂಡಿರಬೇಕು. ಅಲ್ಲದೆ ತನ್ನ ಸಮಸ್ತ ಸದಸ್ಯರ ಜೀವನ ಸ್ಥಿತಿಗತಿಯಲ್ಲಿ ಸುಧಾರಣೆಯನ್ನುಂಟು ಮಾಡಬೇಕು.

ಇ) ಅದು ಪ್ರಜಾಸತ್ತಾತ್ಮಕವಾಗಿರಬೇಕು. ಹೀಗಾದರೆ ಮಾತ್ರ ಸರ್ಕಾರದ ಬಗೆಗೆ ಇದ್ದ ಕಾರ್ಮಿಕರ ಹಕ್ಕು ಅದಕ್ಕೆ ವಾಸ್ತವತೆಯನ್ನು ಪಡೆದುಕೊಳ್ಳುತ್ತದೆ.

ಮೇಲಿನ ಗುಣಾತ್ಮಕ ಅಂಶಗಳ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ನಂತರದಲ್ಲಿ ಹೊಸಪೇಟೆಯಲ್ಲಿ ನಡೆದ ಕಾರ್ಮಿಕರ ಪ್ರಮುಖ ಚಳುವಳಿಗಳು, ಈ ಹಿನ್ನೆಲೆಯಲ್ಲಿ ಕಾರ್ಮಿಕರ ಜನಜೀವನದ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಪರಿಶೀಲಿಸಬಹುದು.

೧೯೪೪ ರವರೆಗೆ ಹೊಸಪೇಟೆಯ ಕಾರ್ಮಿಕ ರಂಗದಲ್ಲಿ ಯಾವ ಪ್ರಗತಿಯನ್ನು ಸಾಧಿಸಿಲ್ಲವೆಂದೇ ಹೇಳಬಹುದು. ಸ್ವಾತಂತ್ರ್ಯ ಹೋರಾಟಗಾರರಾದ ಎನ್. ಲಕ್ಷ್ಮಣ್ ಮೂರ್ತಿಯವರ ಸಾಹಸದಿಂದಾಗಿ ೧೯೪೪ ನೇ ಮೇ ೧೨ ರಂದು ರಾಯಲ ಸೀಮೆಯಲ್ಲೇ ಪ್ರಥಮವಾದ ಐ. ಎಸ್. ಆರ್. ಲೇಬರ್ ಯೂನಿಯನ್ ಹೊಸಪೇಟೆಯಲ್ಲಿ ಸ್ಥಾಪಿತವಾಯಿತು. ಈ ಸಂಘಟನೆಯಲ್ಲಿ ತಾಲೂಕಿನ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾದ ಅಸುಂಡಿ ತಿರುಮಲರಾವ್ ಮತ್ತು ಆರ್.ವಿ. ದೇಸಾಯಿಯವರು ಮುಖ್ಯವಾದ ಪಾತ್ರವಹಿಸಿ ಎನ್. ಲಕ್ಷ್ಮಣ್ ಮೂರ್ತಿಯವರಿಗೆ ಸಂಪೂರ್ಣ ಸಹಕಾರ ಬೆಂಬಲ ನೀಡಿದರು. ೧೯೪೫ ರಲ್ಲಿ ಜರುಗಿದ ಯೂನಿಯನ್ನಿನ ಪ್ರಥಮ ವಾರ್ಷಿಕೋತ್ಸವಕ್ಕೆ ಮದ್ರಾಸಿನಿಂದ ಕಾರ್ಮಿಕ ಧುರೀಣ ಪಿ. ಆರ್.ಕೆ. ಶರ್ಮಾರವರು ಆಗಮಿಸಿ ಕಾರ್ಮಿಕರ ಸಂಘಟನೆಗೆ ಪ್ರೋತ್ಸಾಹ ನೀಡಿದರು. ಆಗ ಕಾರ್ಮಿಕರ ಕನಿಷ್ಠ ಕೂಲಿ ಕೇವಲ ೨೫ ಪೈಸೆ ನಿಗದಿ ಪಡಿಸಬೇಕೆಂದು ಕಾರ್ಮಿಕ ಸಂಘಟನೆಯನ್ನು ಮನ್ನಿಸಬೇಕೆಂದು ಮಾಲೀಕರಿಗೆ ಕೋರಿಕೆ ಸಲ್ಲಿಸಲಾಯಿತು. ಆದರೆ ಕಾರ್ಖಾನೆಯ ಮಾಲೀಕರ ಅಸಹಕಾರದಿಂದಾಗಿ ೧೯೪೬ ರಲ್ಲಿ ೮ ದಿನಗಳವರೆಗೆ ಮುಷ್ಕರ ನಡೆಯಿತು. ಮದ್ರಾಸಿನ ಲೇಬರ್ ಕಮೀಷನ್‌ರವರ ಮಧ್ಯಸ್ಥಿಕೆಯಿಂದ ಮುಷ್ಕರ ಸಮಾಧಾನಕರವಾಗಿ ಬಗೆಹರಿಸಿತು. ೧೯೪೭ ರಲ್ಲಿ ಬೋನಸ್ಸಿಗೆ ಸಂಬಂಧಪಟ್ಟ ಸಮಸ್ಯೆಯನ್ನು ಸಹಾ ಸಮಾಧಾನಕರವಾಗಿ ಬಗೆಹರಿಸಲಾಗಿತ್ತು. ೧೯೪೯-೫೦ ರಲ್ಲಿ ಸಂಘದವರು ಮುಂದಿಟ್ಟ ಬೇಡಿಕೆ ಸ್ಕೇಲು ಮತ್ತು ಗ್ರೇಡಿಗೆ ಸಂಬಂಧಪಟ್ಟ ಬೇಡಿಕೆಯೂ ಸಹಾ ಕಾರ್ಮಿಕರ ಒಗ್ಗಟ್ಟಿನಿಂದ ಈಡೇರಿತು. ಈ ಸಂಘವು ಐ.ಎಸ್.ಆರ್. ಸ್ಟ್ಯಾಂಪ್ ಅಸೋಷಿಯೇಷನ್‌ದೊಂದಿಗೆ ಮಿಳಿತಗೊಂಡು ಸುಮಾರು ಅಂದಿನ ಕಾಲದಲ್ಲಿ ೨೦,೦೦೦ ರೂ.ಗಳಲ್ಲಿ ಸಂಘದ ಭವನವನ್ನು ಕಟ್ಟಿಸಲಾಗಿದೆ.

## ಸರೋಜ್ ಆಲಾಯ್ಸ್ ಕಾರ್ಮಿಕರ ಹೋರಾಟ

ಹೊಸಪೇಟೆ ತಾಲೂಕಿನ ಕಾರಿಗನೂರು ಸಮೀಪದಲ್ಲಿ ೧೯೭೮ ರಲ್ಲಿ ಅಸ್ತಿತ್ವಕ್ಕೆ ಬಂದ ಸರೋಜ್ ಅಲಾಯ್ಸ್ ಕಾರ್ಖಾನೆ ಎರಡು ಘಟಕಗಳನ್ನು ಹೊಂದಿತು. ಒಂದು ಕಬ್ಬಿಣದ ಸರಳುಗಳನ್ನು ಉತ್ಪಾದಿಸುವ ಘಟಕ (Rowling Mill) ಮತ್ತು ಎಸ್. ಎಂ. ಎಸ್. (Steel Melting Shop) ಈ ಎರಡೂ ಘಟಕಗಳು ೧೯೮೦ ರಿಂದ ಉತ್ಪಾದನೆ ಆರಂಭಿಸಿದವು. ಈ ಘಟಕಗಳಲ್ಲಿ ಅಧಿಕೃತ ಸಿಬ್ಬಂದಿಯಾಗಿ ಕೆಲಸ ಮಾಡುತ್ತಿದ್ದವರು ಒಟ್ಟು ೨೮೪ ಮಾತ್ರ. ಇವರೊಂದಿಗೆ ತಾತ್ಕಾಲಿಕವಾಗಿ ಕೆಲಸ ಮಾಡುತ್ತಿದ್ದ ಕಾರ್ಮಿಕರು (Casual labourers) ಸುಮಾರು ೫೫೦ ರಿಂದ ೬೦೦. ಹೀಗೆ ಒಟ್ಟು ೧೦೦೦ ಕಾರ್ಮಿಕರು ಈ ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಇದು ನೇರವಾಗಿ ಈ ಕಾರ್ಖಾನೆಯನ್ನು ಜೀವನಾಧಾರ ಮಾಡಿಕೊಂಡವರು ಇವರು. ಇವರಲ್ಲದೆ ಕಾರಿಗನೂರು, ವಡ್ಡರಹಳ್ಳಿ, ಪಾಪಿನಾಯಕನಹಳ್ಳಿಗಳಲ್ಲಿ ಕೆಲವು ಜನ ಕಾರ್ಮಿಕರು ತಮ್ಮ ಸ್ವಂತ ಕಾರಣಗಳಿಂದ ವಾಸವಾಗಿದ್ದರು. ಇವರೆಲ್ಲರ ನೆಲೆಸುವಿಕೆಯಿಂದ ಕೆಲವು ವರ್ತಕ ಕುಟುಂಬಗಳು ಇವರ ವ್ಯಾಪಾರ, ವಹಿವಾಟಿನಿಂದ ಜೀವನಕ್ಕೆ ಸಹಾಯವಾಗಿತ್ತು. ಇದಲ್ಲದೆ ಹೊಸಪೇಟೆ ನಗರದಲ್ಲಿಯೂ ಮಕ್ಕಳ ಶಾಲೆ ಕಾಲೇಜುಗಳಲ್ಲಿ ಮಕ್ಕಳ ವಿದ್ಯಾಭ್ಯಾಸದ ದೃಷ್ಠಿಯಿಂದ ಕೆಲವು ಕಾರ್ಮಿಕರು (ವಿಶೇಷವಾಗಿ ಪರರಾಜ್ಯದವರು) ವಾಸ ಮಾಡಿದ್ದರಿಂದ ಹೊಸಪೇಟೆಯ ಬಳ್ಳಾರಿ ರಸ್ತೆಯ ಮನೆಗಳಿಗೆ ಇವರ ವಾಸದಿಂದ ಒಳ್ಳೆಯ ಮನೆಬಾಡಿಗೆ ದೊರೆಯುತ್ತಿದ್ದರಿಂದ ಅಲ್ಲಿ ವಾಸದ ಮನೆಗಳನ್ನು ಕಟ್ಟಿಸುವವರ ಸಂಖ್ಯೆ ಹೆಚ್ಚಾಯಿತು. ಒಟ್ಟಿನಲ್ಲಿ ಅಂದಿನ ಸಂದರ್ಭದಲ್ಲಿ ಈ ಕಾರ್ಖಾನೆ ಸುತ್ತಲಿನ ನಗರ, ಗ್ರಾಮಗಳ ಆರ್ಥಿಕ, ಸಾಮಾಜಿಕ ಜೀವನದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತು.

ಕಾರ್ಮಿಕರ ದಕ್ಷತೆ ಮತ್ತು ಆಡಳಿತ ಮಂಡಳಿಯ ಚಾಣಾಕ್ಷತನದಿಂದ ಈ ಕಾರ್ಖಾನೆಯಲ್ಲಿ ಒಂದು ರೀತಿಯ ಸೌಹಾರ್ದಯುತವಾದ ವಾತಾವರಣದಿಂದಾಗಿ ಕಾರ್ಖಾನೆ ಒಳ್ಳೆಯ ಲಾಭವನ್ನೇ ಪಡೆಯುತ್ತಿತ್ತು. ಇದರಿಂದ ಖಾಸಗಿ ಕಾರ್ಖಾನೆಯೊಂದು ಕಬ್ಬಿಣದ ಸರಳುಗಳ ಉತ್ಪಾದನೆಯಲ್ಲಿ ಕರ್ನಾಟಕ ರಾಜ್ಯದಲ್ಲಿಯೇ ದ್ವಿತೀಯ ಸ್ಥಾನ ಪಡೆದ ಕಾರ್ಖಾನೆ ಇದಾಗಿತ್ತೆಂದು ತಿಳಿದು ಬರುತ್ತದೆ. ಇದರಿಂದ ಕಾರ್ಮಿಕರೆಲ್ಲರಿಗೂ ಕಾರ್ಖಾನೆಯವರು ಉಡುಗೊರೆಗಳನ್ನು ನೀಡಿದ್ದರು.

ಈ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರು ತಮ್ಮ ಕೌಟುಂಬಿಕ ಕಾರಣಗಳಿಂದ ಆತ್ಮಹತ್ಯೆ ಮಾಡಿಕೊಂಡ ನಂತರ ಈ ಕಾರ್ಖಾನೆಗೆ ಕೆಟ್ಟದಿನಗಳು ಪ್ರಾರಂಭವಾದವೆಂದೇ ಹೇಳಬಹುದು. ಇವರ ನಂತರ ಬಂದ ಎಂ.ಡಿ. ಯವರು ಕಾರ್ಖಾನೆಯನ್ನು ದಕ್ಷವಾಗಿ ನಿರ್ವಹಿಸದೇ ನಷ್ಟ ಅನುಭವಿಸಿತೆಂದು ಕಾರ್ಮಿಕರು ಆಪಾದಿಸುತ್ತಾರೆ. ಆದರೆ ಇದು ಕೇವಲ ಒಂದು ಕಾರಣವಾಗಿರಬಹುದು. ಮತ್ತೊಂದು ಬಹುಮುಖ್ಯ ಕಾರಣವೆಂದರೆ, ಕಾರ್ಖಾನೆಗೆ ಅವಶ್ಯವಿದ್ದ ವಿದ್ಯುಚ್ಛಕ್ತಿಯ ಅಭಾವದಿಂದಾಗಿ ಕಾರ್ಖಾನೆಯನ್ನು ೧೯೮೮ ನವಂಬರ್ ೭ ರಂದು ಕಾರ್ಖಾನೆಯ ಲಾಕ್ ಔಟ್ ಘೋಷಣೆ ಮಾಡಿದರು.

ಕಾರ್ಖಾನೆ ಬೀಗಮುದ್ರೆ ಘೋಷಣೆಯಾದ ಸಂದರ್ಭದಲ್ಲಿ ಹೊಸಪೇಟೆ ನಗರದಲ್ಲಿ ಆರಂಭವಾಗಿದ್ದ ಸಿ.ಐ.ಟಿ.ಯು (Centre Indian Trade Union) ಸಂಘಟನೆಯ ವತಿಯಿಂದ ಕಾರ್ಖಾನೆಯ ಮರು ಪ್ರಾರಂಭಕ್ಕೆ ಕಾರ್ಮಿಕರನ್ನು ಸಂಘಟಿಸಿ ಕಾರ್ಖಾನೆ ಲಾಕ್ ಔಟ್ ಆದ ನಾಲ್ಕು ದಿನಗಳ ನಂತರ ನವೆಂಬರ್ ೧೧ ರಿಂದ ಹೊಸಬಸ್ ನಿಲ್ದಾಣದ ಹತ್ತಿರದ ಸರಕಾರಿ ಬಾಲಕೀಯರ ಕಿರಿಯ ಮಹಾ ವಿದ್ಯಾಲಯದಲ್ಲಿ ಮುಂದಿದ್ದ ಬಯಲಿನಲ್ಲಿ ಟೆಂಟ್ ಹಾಕಿ ಧರಣಿ ಸತ್ಯಾಗ್ರಹ ಆರಂಭವಾಯಿತು. ಈ ಸತ್ಯಾಗ್ರಹದಲ್ಲಿ ಕಾರ್ಖಾನೆಯ ಮುಚ್ಚಳದಿಂದ ತೊಂದರೆಗೊಳಗಾಗಿದ್ದ ಎಲ್ಲಾ ಕಾರ್ಮಿಕರೂ ಮತ್ತು ಅವರನ್ನು ಅವಲಂಬಿತ ಕುಟುಂಬದ ಸದಸ್ಯರೂ ಭಾವಹಿಸಿದ್ದು ವಿಶೇಷವಾಗಿತ್ತು. ಈ ಮುಷ್ಕರ ಸತತ ಎರಡು ವರ್ಷಗಳವರೆಗೂ ನಡೆದಿದ್ದು, ಇದೊಂದು ಸಂಘಟಿತ ಸಮಾಜದ ಒಂದು ದಾಖಲೆಯೆಂದರೂ ತಪ್ಪಾಗುವುದಿಲ್ಲ.

ಈ ಎರಡೂ ವರ್ಷದ ನಿರಂತರ ಹೋರಾಟದಲ್ಲಿ ಮುಷ್ಕರದ ಇತರೆ ರೂಪಗಳಾದ ಬೆಂಗಳೂರು ರಾಜಧಾನಿ ಚಲೋ, ಜನಪ್ರತಿನಿಧಿಗಳ ಘೆರಾವ್, ಜಿಲ್ಲಾಧಿಕಾರಿಗಳಿಗೆ ಮನವಿ ನೀಡುವ ಜಿಲ್ಲಾ ಚಲೋದಂತಹ ಹಲವು ಮಾರ್ಗಗಳನ್ನು ಅನುಸರಿಸಲಾಯಿತು. ಎರಡು ಬಾರಿ ಬೆಂಗಳೂರು ಚಲೋ ಮಾಡಿ ಕಾರ್ಖಾನೆಗೆ ವಿದ್ಯುತ್ ಸರಬರಾಜು ಮಾಡುವಂತೆ ಕಾರ್ಮಿಕರ ನಿಯೋಗ ವಿದ್ಯುತ್ ಮಂತ್ರಿ, ಮುಖ್ಯಮಂತ್ರಿಗಳನ್ನು ಕೋರಲಾಗಿತ್ತು. ಅಂದಿನ ವಿದ್ಯುತ್ ಮಂತ್ರಿಗಳು ವಿದ್ಯುತ್ ಸರಬರಾಜು ಮಾಡುವುದಾಗಿ ಭರವಸೆಯನ್ನು ನೀಡಿದ್ದರೂ, ಕಾರ್ಮಿಕರ ನಿರೀಕ್ಷೆಯಂತೆ ಕಾರ್ಖಾನೆ ಆರಂಭವಾಗಲಿಲ್ಲ. ಇದರಿಂದ ಕಾರ್ಮಿಕರು ತೀವ್ರ ಹತಾಶೆಗೊಂಡರು ೧೯೮೯ ನವ್ಹೆಂಬರ್ ತಿಂಗಳಲ್ಲಿ ಒಮ್ಮೆ ಜಿಲ್ಲಾ ಉಸ್ತುವಾರಿ ಮಂತ್ರಿಗಳು ಹಂಪಿ ಕಾರ್ಯಕ್ರಮಕ್ಕೆಂದು ಬಂದಾಗ ಕಾರ್ಮಿಕರು ಹಂಪಿಯಲ್ಲಿಯೇ ಘೇರಾವ್ ಮಾಡಿದ್ದರು. ಹಾಗೆಯೇ ಪಾಪಿನಾಯಕನಹಳ್ಳಿ ರಸ್ತೆಬಂದ್ ಮಾಡುವ ''ರಸ್ತಾರೋಖೋ'' ಚಳುವಳಿಯನ್ನು ಮಾಡಿದ್ದರು. ಇಷ್ಟೆಲ್ಲಾ ಪ್ರಯತ್ನಗಳನ್ನು ನಡೆಸಿದರೂ ಕಾರ್ಖಾನೆಯು ಆರಂಭವಾಗಲೇ ಇಲ್ಲ. ಹತಾಶರಾದ ಕಾರ್ಮಿಕರು ಅಮರಣಾಂತರ ಸತ್ಯಾಗ್ರಹಕ್ಕೆ ಕೈಹಾಕಿದರು. ನಿರಂತರ ೨೪ ಗಂಟೆ ನಡೆದ ಈ ಅಮರಣಾಂತರ ಸತ್ಯಾಗ್ರಹವನ್ನು ಎಂಟು ಜನ ಕಾರ್ಮಿಕರು ೧೯೮೯, ಮಾರ್ಚ್ ೧೦ ರಿಂದ ಆರಂಭಿಸಿದರು. ೪ನೇ ದಿನ ೨ ಜನ ಕಾರ್ಮಿಕರ ಆರೋಗ್ಯದಲ್ಲಿ ಅಸ್ತವ್ಯಸ್ತವಾಯಿತು. ವೈದ್ಯರ ಸಲಹೆ ಮೇರೆಗೆ ಆಸ್ಪತ್ರೆಗೆ ಸೇರಿಸಿ, ಚಿಕಿತ್ಸೆ ನೀಡಲಾಯಿತು. ಚಿಕಿತ್ಸೆಗೆ ನಿರಾಕರಿಸಿದ ಕಾರ್ಮಿಕರನ್ನು ಬಲಾತ್ಕಾರವಾಗಿ ಪೋಲೀಸರು ಆಸ್ಪತ್ರೆಗೆ ಕರೆದುಕೊಂಡು ಹೋದರು. ಈ ಘಟನೆಯಾದ ಮೇಲೆ ಅಂದಿನ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ, ಕಾರ್ಖಾನೆ ಮಾಲೀಕರ, ಕಾರ್ಮಿಕ ಮುಖಂಡರ ಸಭೆ ನಡೆದರೂ ಕಾರ್ಖಾನೆ ಪುನರಾರಂಭವಾಗಬಹುದೆಂಬ ಕಾರ್ಮಿಕರ ಕನಸು ಈಡೇರಲೇ ಇಲ್ಲ. ೧೯೯೦ ರ ನವ್ಹೆಂಬರ್ ತಿಂಗಳವರೆಗೂ ನಡೆದ ಈ ಕಾರ್ಮಿಕ ಸಂಘಟಿತ ಚಳುವಳಿ ಯಾವುದೇ ಪ್ರಗತಿ ಕಾಣದೇ ಅಂತ್ಯವನ್ನು ಕಂಡಿತು. ಚಳುವಳಿಯ ಫಲಿತಾಂಶ ಈಡೇರದೇ ಇದ್ದರೂ ಚಳುವಳಿಯ ಸಂಘಟಿತ ಪ್ರಯತ್ನ ಮುಂದಿನ ದಿನಗಳಲ್ಲಿ ಕಾರ್ಮಿಕರ ಚಳುವಳಿಗೆ ಒಂದು ಪೂರಕ ಆಯಾಮವನ್ನು ಒದಗಿಸಿತು.

# ಹೊಸಪೇಟೆ ಆಟೋ ಚಾಲಕರ ಸಂಘ

೧೯೯೨ ರಲ್ಲಿ ಆಟೋ ಚಾಲಕರ ಸಂಘ ಹೊಸಪೇಟೆಯಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಹಿಂದೆ ಆಟೋ ಚಾಲಕರ ಸಂಘಟನೆಗೆ ಹಲವು ಪ್ರಯತ್ನಗಳು ನಡೆದಿದ್ದರೂ ಒಂದು ನಿರ್ದಿಷ್ಟ ಸಂಘಟನೆಯ ಚೌಕಟ್ಟು ಪ್ರಾರಂಭವಾಗಿದ್ದು, ಈಗಲೇ ಎಂದು ತಿಳಿದು ಬರುತ್ತದೆ. ಆಟೋ ಚಾಲಕರ ಮೊದಲನೆ ಬಹುಮುಖ್ಯ ಬೇಡಿಕೆಯಾಗಿದ್ದ ಆಟೋ ನಿಲ್ದಾಣಗಳನ್ನು ನಿರ್ಮಿಸಲು ಒತ್ತಾಯಿಸಿ ನಗರ ಸಭೆ ಆಯುಕ್ತರಿಗೆ ಬೇಡಿಕೆ ಮನವಿ ಪತ್ರಕೊಡಲಾಗಿತ್ತು. ಇದರ ಭಾಗವಾಗಿ ೧೯೯೨ ರ ಆಗಸ್ಟ್ ಮೊದಲನೆವಾರದಲ್ಲಿ ಆಟೋ ಚಾಲಕರು ಹೊಸಪೇಟೆಯಲ್ಲಿ ಇತರೆ ಕಾರ್ಮಿಕರ ಮುಖಂಡರೊಂದಿಗೆ ಮೆರವಣಿಗೆ ಮುಖಾಂತರ ಮನವಿ ಪತ್ರ ಸಲ್ಲಿಸಲಾಗಿತ್ತು. ಈ ಸಾಂಕೇತಿಕ ಪ್ರತಿಭಟನೆಯಿಂದ ಹೊಸಪೇಟೆ ನಗರದ ಪ್ರಮುಖ ಜನನಿಬಿಡ್ ಪ್ರದೇಶಗಳಾದ ಒಟ್ಟು ೧೦ ಕಡೆಗಳಲ್ಲಿ ಆಟೋ ನಿಲ್ದಾಣಗಳನ್ನು ನಿರ್ಮಿಸಲಾಯಿತು. ಇದಾದ ನಂತರ ಕೇಂದ್ರ ಸರಕಾರ ಆಟೋ ಚಾಲಕರಿಗೆ ಒಂದು ವರ್ಷಕ್ಕೆ ೧೪೦೦ ರೂ.ಗಳ ಸೇವಾ ತೆರಿಗೆಯನ್ನು ನಿಗಧಿ ಪಡಿಸಿ ಆದೇಶ ಹೊರಡಿಸಿತು. ಈ ಆದೇಶದ ವಿರುದ್ಧ ಇಡೀ ದೇಶದ ಎಲ್ಲಾ ಭಾಗಗಳಲ್ಲಿ ವ್ಯಾಪಕ ಪ್ರತಿಭಟನೆ ವ್ಯಕ್ತಿವಾಗಿತ್ತು. ಸಿ. ಐ.ಟಿ. ಯು ಸಂಘಟನೆ ದೇಶದಾದ್ಯಂತ ಆಟೋ ಚಾಲಕರ ಮುಷ್ಕರವನ್ನು ಆಯಾ ಪ್ರದೇಶಗಳ ಆದಾಯ ತೆರಿಗೆ ಕಛೇರಿಗಳ ಮುಂದೆ ಶಾಂತಿಯುತವಾಗಿ ನಡೆಸಲು ಕರೆನೀಡಿತ್ತು. ಇದರ ಭಾಗವಾಗಿ ಹೊಸಪೇಟೆ ಆಟೋ ಚಾಲಕರ ಸಂಘಟನೆ ಸ್ಥಳೀಯ ಆದಾಯ ತೆರಿಗೆ ಕಛೇರಿ ಮುತ್ತಿಗೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಹೊಸಪೇಟೆ ನಗರದ ಬಹುತೇಕ ಆಟೋ ಚಾಲಕರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಈ ಹೋರಾಟವನ್ನು ಯಶಸ್ವಿಗೊಳಿಸಿದರು. ಆದರೆ ಇದರಿಂದ ಬೇಡಿಕೆ ಈಡೇರುವ ಸಾಧ್ಯತೆಗಳು ಕಂಡು ಬರಲಿಲ್ಲ. ಈ ಹಿನ್ನೆಲೆಯಲ್ಲಿ ಅಂದಿನ ಕೇಂದ್ರ ಸಮಿತಿಯ ನವದೆಹಲಿಯ ನಿಯೋಗ ಅಂದಿನ ಹಣಕಾಸು ಮಂತ್ರಿಗಳನ್ನು ಭೇಟಿ ಮಾಡಿ ಬೇಡಿಕೆಯನ್ನು ಸಲ್ಲಿಸಿದಾಗ ಆವರು ಆಟೋ ಚಾಲಕರು ಈ ತೆರಿಗೆಯ ಹಣದಲ್ಲಿ ಸಾಧ್ಯವಾದಷ್ಟು ಕಟ್ಟಬಹುದೆಂದು ಹೇಳಿದರು. ಆದರೆ ಇದನ್ನು ಒಪ್ಪದೇ ಪೂರ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಒತ್ತಾಯಿಸಿದ್ದರಿಂದ ಕೇಂದ್ರ ಸರಕಾರ ಈ ಆದೇಶವನ್ನು ಹಿಂದಕ್ಕೆ ಪಡೆದದ್ದರಿಂದ ಆಟೋ ಚಾಲಕರ ಈ ಬೇಡಿಕೆ ಈಡೇರಿತು. ಅಖಿಲ ಭಾರತ ಮಟ್ಟದ ಈ ಬೇಡಿಕೆಯನ್ನು ಈಡೇರಿಸುವಲ್ಲಿ ಸ್ಥಳೀಯ ಆಟೋ ಚಾಲಕರು ಭಾಗವಹಿಸಿ ಅದರ ಯಶಸ್ವಿನಲ್ಲಿ ಪಾಲುದಾರರಾಗಿದ್ದಾರೆ.

ಇಷ್ಟೇ ಅಲ್ಲದೆ ಆಟೋ ಚಾಲಕರಿಗೆ ಪೋಲೀಸರಿಂದ ಮತ್ತು ಸಾರಿಗೆ ಇಲಾಖೆ ಅಧಿಕಾರಿಗಳಿಂದ ತಪಾಸಣೆಯ ನೆಪದಲ್ಲಿ ಆಗುತ್ತಿದ್ದ ಅನಾವಶ್ಯಕ ಕಿರುಕುಳದ ವಿರುದ್ಧ ಆಟೋ ಚಾಲಕರ ಸಂಘ ಪ್ರತಿಭಟನೆ ನಡೆಸುತ್ತಲೇ ಬಂದಿದೆ. ಒಂದು ಬಾರಿ ಪೋಲೀಸ್ ಅಧಿಕಾರಿಯೊಬ್ಬರ ದೌರ್ಜನ್ಯದ ವಿರುದ್ದ ನಗರ ಪೋಲಿಸ್ ಸ್ಟೇಷನ್ ಎದುರುಗಡೆ ಮಾಡಿದ ಭಾರೀ ಪ್ರತಿಭಟನೆಯಲ್ಲಿ ಸದ್ರಿ ಅಧಿಕಾರಿಯನ್ನು ಅಮಾನತ್ತು

ಮಾಡಲು ಬೇಡಿಕೆಯಿಟ್ಟು ಧರಣಿ ನಡೆಸಲಾಯಿತು. ತಹಶೀಲ್ದಾರವರಿಗೆ ಈ ಬಗ್ಗೆ ಮನವಿ ಸಲ್ಲಿಸಲಾಗಿತ್ತು. ಆಟೋ ಚಾಲಕರ ಈ ಹೋರಾಟದ ಪರಿಣಾಮವಾಗಿ ಈ ಅಧಿಕಾರಿ ವರ್ಗಾವಣೆಗೆ ಒಳಗಾಗಬೇಕಾಯಿತೆಂದು ಅಂದಿನ ಹೋರಾಟದ ಮುಂಚೂಣಿ ನಾಯಕರು ಹೇಳುತ್ತಾರೆ.

## ದಾಲ್ಮಿಯಾ ಗಣಿ ಕಾರ್ಮಿಕರ ಚಳುವಳಿ

ದಾಲ್ಮಿಯಾ ಇದೊಂದು ಬಾಂಬೆ ಮೂಲದ ಗಣಿಗಾರಿಕೆ. ಖಾಸಗಿ ಸಂಸ್ಥೆಯಾಗಿದ್ದು, ಇದರಲ್ಲಿ ಸುಮಾರು ೪೦೦ ಜನ ಕಾರ್ಮಿಕರು ಗಣಿಗಾರಿಕೆಯಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದರು. ಈ ಕಾರ್ಮಿಕರ ಸಂಘಟನೆಯನ್ನು ೧೯೯೦ ರಿಂದ ಎ. ಐ. ಟಿ.ಯು. ಸಿ. (AITUC) ಸಂಘಟಿಸಿದ್ದು, ಅದರ ನೇತೃತ್ವದಲ್ಲಿ ಗಣಿಗಾರಿಕೆಯ ಕಾರ್ಮಿಕರ ಬೇಡಿಕೆಗಳಿಗಾಗಿ ಹಲವು ಬಾರಿ ಹೋರಾಟದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಇದರ ಭಾಗವಾಗಿ ೧೯೯೭ ರಲ್ಲಿ ಗಣಿ ಕಾರ್ಮಿಕರ ಕೆಲವು ಪ್ರಮುಖ ಬೇಡಿಕೆಗಳನ್ನು ಈಡೇರಿಸುವಂತೆ ಬೇಡಿಕೆ ನೋಟೀಸ್ ನೀಡಲಾಗಿತ್ತು.

**೧. ಗಣಿ ಕಾರ್ಮಿಕರಿಗೆ ವೈದ್ಯಕೀಯ ಭತ್ಯೆ :** ಗಣಿಯ ಕೆಂಪು ಧೂಳಿನಿಂದ ಗಣಿ ಕಾರ್ಮಿಕರ ಮೇಲಾಗುವ ಧೀರ್ಘಕಾಲಿಕ ಖಾಯಿಲೆಯಂಥಹ ಅಸ್ತಮಾ, ಉಸಿರಾಟದ ತೊಂದರೆ, ಹೃದಯಾಘಾತ, ಆಕಸ್ಮಿಕ ಅಪಘಾತಗಳಿಂದುಂಟಾಗುವ ಗಾಯದ ಸಮಸ್ಯೆಗಳಿಗೆ ಅಗತ್ಯ ವೈದ್ಯಕೀಯ ವೆಚ್ಚಗಳಿಗಾಗಿ ಕಾರ್ಮಿಕರಿಗೆ ವೇತನದೊಂದಿಗೆ ಪ್ರತ್ಯೇಕವಾಗಿ ವೈದ್ಯಕೀಯ ವೆಚ್ಚವನ್ನು ಭರಿಸಲು ವೈದ್ಯಕೀಯ ಭತ್ಯೆ ನೀಡುವ ಬೇಡಿಕೆ ಅತ್ಯಂತ ನ್ಯಾಯಯುತವಾಗಿದ್ದು, ಈ ಬೇಡಿಕೆಯನ್ನು ಈ ಕಾರ್ಮಿಕರು ಮಂಡಿಸಿದ್ದರು.

**೨. ಬೋನಸ್ ನೀಡಿಕೆ :** ಹೊಸಪೇಟೆಯ ಕಬ್ಬಿಣದ ಅದಿರಿನಲ್ಲಿ ಶೇ 60.66 ರಷ್ಟು ಕಬ್ಬಿಣವಿರುವುದರಿಂದ ಈ ಅದಿರಿಗೆ ಭಾರೀ ಬೇಡಿಕೆ ಇದ್ದು, ಒಳ್ಳೆಯ ಲಾಭ ಪಡೆಯುತ್ತಿರುವ ದಾಲ್ಮಿಯಾ ಕಂಪನಿ ಕಾರ್ಮಿಕರಿಗೆ ಮಾತ್ರ ಲಾಭದಲ್ಲಿ ಸ್ವಲ್ಪ ಭಾಗವನ್ನಾದರೂ ಬೋನಸ್ ರೂಪದಲ್ಲಿ ನೀಡುವುದು ನ್ಯಾಯೋಚಿತವಾಗಿದೆ. ಆದರೆ ದಾಲ್ಮಿಯಾ ಕಂಪನಿ ಯಾವತ್ತೂ ಈ ಬೇಡಿಕೆಯನ್ನು ಪರಿಶೀಲಿಸುವ ಗೊಡವೆಗೆ ಹೋಗಿರಲಿಲ್ಲ. ಕೊನೆಗೆ ತಮ್ಮ ಸಂಘಟನೆಯ ಪರವಾಗಿ ಮಂಡಿಸಿದ ಬೇಡಿಕೆಗಳಲ್ಲಿ ಇದೂ ಒಂದು ಪ್ರಮುಖ ಬೇಡಿಕೆಯಾಗಿ ಹೊರ ಹೊಮ್ಮಿತ್ತು ೨ ತಿಂಗಳ ವೇತನಕ್ಕೆ ಸಮಾನವಾದ ಬೋನಸ್‌ನ್ನು ನೀಡಲು ಬೇಡಿಕೆ ಸಲ್ಲಿಸಲಾಗಿತ್ತು.

**೩. ವೇತನ ಹೆಚ್ಚಳ :** ದಾಲ್ಮಿಯಾ ಕಾರ್ಮಿಕರಿಗೆ ಸಿಗುತ್ತಿದ್ದ ವೇತನವೂ ಸಹಾ ಅತಿ ಕಡಿಮೆಯಾಗಿತ್ತು. ಹಲವು ವರ್ಷಗಳಿಂದ ವೇತನದ ಹೆಚ್ಚಳವನ್ನು ಮಾಡಿರಲೇ ಇಲ್ಲ. ಇದರಿಂದ ವೇತನವನ್ನು ಹೆಚ್ಚಿಸುವುದು ಅನಿವಾರ್ಯವಾಗಿತ್ತು ಈ ಬೇಡಿಕೆಯನ್ನು ಸಹಾ ಮಂಡಿಸಲಾಗಿತ್ತು.

**೪. ಗ್ರ್ಯಾಚ್ಯುಟಿ ಸೌಲಭ್ಯ ನೀಡಲು :** ಮುಂದಿನ ಭವಿಷ್ಯತ್ತಿನ ಬದುಕಿಗಾಗಿ ಕಾರ್ಮಿಕರಿಗೆ ನ್ಯಾಯಯುತವಾಗಿ ದೊರೆಯಬೇಕಾದ ಸೌಲಭ್ಯವೆಂದರೆ ಗ್ರ್ಯಾಚುಟಿ ಸೌಲಭ್ಯವೆಂದು ಹೇಳಬಹುದು. ಕನಿಷ್ಟ ಪಕ್ಷ ಈ ಸೌಲಭ್ಯವನ್ನು ದಾಲ್ಮಿಯಾ ಗಣಿ ಕಂಪನಿ ನೀಡಿದ್ದಿಲ್ಲ. ಇದರಿಂದಲೂ ಕಾರ್ಮಿಕರಿಗೆ ಕಂಪನಿಯ ಮೇಲೆ ಅಸಮಾಧಾನವಿತ್ತು.

**೫. ಪೂರಕ ಸುರಕ್ಷಾ ಕ್ರಮಗಳು :** ಗಣಿಗಾರಿಕೆಯ ಅಪಾಯಕಾರಿ ಕೆಲಸಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರಿಗೆ ಸುರಕ್ಷಾ ಕ್ರಮಗಳಿರಲಿಲ್ಲ. ಸೂಕ್ತ ಆಸ್ಪತ್ರೆಗಳಿರಲಿಲ್ಲ. ಅಪಘಾತ ಸಂಭವಿಸಿದರೆ ತಕ್ಷಣ ಸೂಕ್ತ ಚಿಕಿತ್ಸೆ ನೀಡುವಂಥಹ ಮೂಲಭೂತ ಸೌಕರ್ಯಗಳಿರಲಿಲ್ಲ. ಇದರಿಂದಲೂ ಕಾರ್ಮಿಕರಲ್ಲಿ ಕಂಪನಿ ಬಗ್ಗೆ ತೀವ್ರ ಅಸಮಾಧಾನ ತಾಂಡವಾಡುತ್ತಿತ್ತು. ಈ ಬೇಡಿಕೆಯನ್ನು ಸಹಾ ಬೇಡಿಕೆ ನೋಟೀಸಿನಲ್ಲಿ ಸಲ್ಲಿಸಲಾಗಿತ್ತು.

**೬. ಸಂಘಕ್ಕೆ ಮಾನ್ಯತೆ ನೀಡುವ ಬಗ್ಗೆ :** ಗಣಿ ಕಾರ್ಮಿಕ ಸಂಘಕ್ಕೆ ಕಂಪನಿಯ ಮಾನ್ಯತೆ ಕೊಟ್ಟಿರಲಿಲ್ಲ. ಮಾನ್ಯತೆಯಿರುವ ಸಂಘದೊಂದಿಗೆ ಕಂಪನಿ ಆಗಾಗ ಕಾರ್ಮಿಕರ ಬೇಕು ಬೇಡಗಳ ಬಗ್ಗೆ, ಅವರ ಸೌಲಭ್ಯಗಳ ಬಗ್ಗೆ ಚರ್ಚಿಸುವ, ನ್ಯಾಯಯುತವಾದ ಸೌಲಭ್ಯಗಳನ್ನು ಒದಗಿಸುವ ಅವಕಾಶವಿದ್ದುದರಿಂದ ಕಾರ್ಮಿಕ ಸಂಘಕ್ಕೆ ಮಾನ್ಯತೆ ಅವಶ್ಯಕವಾಗಿತ್ತು.

ಈ ಮೇಲಿನ ಪ್ರಮುಖ ಬೇಡಿಕೆಗಳನ್ನಿಟ್ಟು ಎ. ಐ. ಟಿ.ಯು.ಸಿ. ಸಂಘಟನೆ ಕಾರ್ಮಿಕರ ಪರವಾಗಿ ಹೋರಾಟದ ಹಲವು ಬಗೆಯ ಕಾರ್ಯಕ್ರಮಗಳನ್ನು ನಡೆಸಿತು. ಪಾಪಿನಾಯಕನ ಹಳ್ಳಿಯಲ್ಲಿ ರಸ್ತೆ ತಡೆ ಕಾರ್ಯಕ್ರಮ ನಡೆಸಿತು. ಇದಕ್ಕೆ ಪ್ರಮುಖವಾಗಿ ಎರಡು ಕಾರಣಗಳೆಂದು ಹೇಳಬಹುದು. ಮೊದಲನೆಯದು ದಾಲ್ಮೀಯಾ ಗಣಿಗಾರಿಕೆ ಪ್ರದೇಶ ಹತ್ತಿರವಿರುವುದರಿಂದ ಈ ಕಾರ್ಯಕ್ರಮ ಅಲ್ಲಿ ನಡೆಯಿತು. ಮತ್ತೊಂದು ಕಾರಣ ಪಾಪಿನಾಯಕನಹಳ್ಳಿಯಲ್ಲಿ ರಸ್ತೆ ತಡೆ ನಡೆಸಿದರೆ ವಾಹನಗಳು ಬಳ್ಳಾರಿ ಕಡೆಗೆ ಹೋಗಬೇಕೆಂದರೆ ಕಮಲಾಪುರ, ದೇವಲಾಪುರ ಮಾರ್ಗದಿಂದ ಸುತ್ತಾಗಿ ಬಳಸಬೇಕಾಗಿತ್ತು. ಆದ್ದರಿಂದ ಹೊಸಪೇಟೆಯಲ್ಲಿ ನಡೆಸುವುದಕ್ಕಿಂತ ಪಾಪಿನಾಯಕನಹಳ್ಳಿ ರಸ್ತೆ ತಡೆ ಕಾರ್ಯಕ್ರಮಕ್ಕೆ ಸೂಕ್ತ ಸ್ಥಳವಾಗಿದ್ದರಿಂದ ಈ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲಾಗಿತ್ತೆಂಬುದು ಇಲ್ಲಿಯ ಪ್ರಮುಖ ಸಂಗತಿ.

ಈ ಹೋರಾಟದ ಕಾರ್ಯಕ್ರಮಕ್ಕೂ ಕಂಪನಿ ಯಾವುದೇ ಪ್ರತಿಕ್ರಿಯೆ ನೀಡದೇಯಿದ್ದುದರಿಂದ ಹೊಸಪೇಟೆ ಬಂದ್ ಆಚರಿಸಲಾಯಿತು. ಅತ್ಯಂತ ಯಶಸ್ವಿಯಾಗಿ ಹೊಸಪೇಟೆಯನ್ನು ಬಂದ್ ಮಾಡಿ ಕಾರ್ಮಿಕರ ಹೋರಾಟಕ್ಕೆ ಮೌನ ಬೆಂಬಲ ನೀಡಲಾಗಿತ್ತು. ಹೊಸಪೇಟೆ ಬಂದ್ ಪ್ರಯುಕ್ತ ಕಾರ್ಮಿಕರು ಪಂಜಿನ ಮೆರವಣಿಗೆ ನಡೆಸಿದರು. ಇದ್ಯಾವುದಕ್ಕೂ ದಾಲ್ಮಿಯಾ ಕಂಪನಿಯವರು ಪ್ರತಿಕ್ರಿಯಿಸಲಿಲ್ಲ.

ಕೊನೆಗೆ ದಾಲ್ಮಿಯಾ ಕಛೇರಿಯ ಮುಂದೆ ಟೆಂಟ್ ಹಾಕಿ ಧರಣಿ ಸತ್ಯಾಗ್ರಹ ನಡೆಸಲಾಯಿತು. ಅತ್ಯಂತ ಬಿಗುವಿನ ವಾತಾವರಣದಿಂದ ಕೂಡಿದ ಈ ಪ್ರತಿಭಟನೆ ಕಾನೂನು ಸುವ್ಯವಸ್ಥೆಗೆ ಧಕ್ಕೆ ತರುತ್ತದೆಯೋ ಎನ್ನುವಂತೆ ವಾತಾವರಣ ಬಿಗಿಯಾಗಿತ್ತು. ಇಷ್ಟಾದರೂ ದಾಲ್ಮಿಯಾ ಕಂಪನಿಯವರು ಕಾರ್ಮಿಕರ ಬೇಡಿಕೆಗಳ ಕಿಂಚಿತ್ ಮಾತಾಡಲು ಮುಂದಾಗಲಿಲ್ಲ. ಈ ಹೋರಾಟ ಆರು ತಿಂಗಳವರೆಗೂ ನಡೆಯಿತು.

## ಹೊಸಪೇಟೆ ನಗರದ ರೈಸ್‌ಮಿಲ್ ಕಾರ್ಮಿಕರ ಚಳುವಳಿ

ಹೊಸಪೇಟೆಯಲ್ಲಿ ರೈಸ್‌ಮಿಲ್ಲು ಕಾರ್ಮಿಕರ ಸಂಘಟನೆ ಮೊದಲು ಆರಂಭಗೊಂಡಿದ್ದು, ೧೯೮೫ ರ ಫೆಬ್ರವರಿ ತಿಂಗಳಲ್ಲಿ ಹೇಳಬಹುದು. ಮೆಹತಾ ರೈಸ್‌ಮಿಲ್ ಮತ್ತು ಮಂಜುನಾಥ ರೈಸ್‌ಮಿಲ್‌ಗಳಲ್ಲಿರುವ ಕಾರ್ಮಿಕರ ಕೂಲಿ ನಿಗಧಿಗೆ ಸಂಬಂಧಿಸಿದಂತೆ ಶ್ರೀ ಸಿ. ಐ.ಟಿ. ಯು ಸಂಘಟನೆಯ ಮಾರ್ಗದರ್ಶನದಲ್ಲಿ ಸಂಘಟನೆ ಪ್ರಯತ್ನಗಳು ಸಾಗಿದವು. ಮೊದ ಮೊದಲು ಹಲವರು ಸಂಘಟನೆಯೆಂದರೆ ಮೂಗು ಮುರಿಯುವಂತೆ ವರ್ತಿಸುತ್ತಿದ್ದರು. ಇದಕ್ಕೆ ಕಾರಣ ಈ ಮೊದಲು ಅವರಿಗಾದಂತಹ ಅನುಭವದಿಂದ. ಈ ಹಿಂದೆ ಸ್ಥಳೀಯ ಮುಖಂಡತ್ವದಲ್ಲಿ ಈ ರೀತಿಯ ಪ್ರಯತ್ನ ನಡೆದಾಗ ಆ ನಾಯಕರು ಮಾಲೀಕರೊಂದಿಗೆ ಕೈಜೋಡಿಸಿದ್ದು, ಅವರ ಈ ಪ್ರತಿಕ್ರಿಯೆಗೆ ಕಾರಣವಾಗಿತ್ತು. ಇದರಿಂದ ವಿಚಲಿತರಾಗದ ಕಾರ್ಮಿಕ ಮುಖಂಡರು ರೈಸ್‌ಮಿಲ್ ಕಾರ್ಮಿಕರನ್ನು ಸಂಘಟಿಸಲು ಮುಂದಾದರು. ಇವರ ಬೆಂಬಿಡದ ಪ್ರಯತ್ನದಿಂದ ರೈಸ್‌ಮಿಲ್ ಕಾರ್ಮಿಕರು ಸಂಘಟನೆಯಾದರು. ಮೆಹತಾ ರೈಸ್‌ಮಿಲ್ ಮತ್ತು ಮಂಜುನಾಥ ರೈಸ್‌ಮಿಲ್‌ಗಳಲ್ಲಿ ಅಧಿಕೃತವಾಗಿ ಒಟ್ಟು ೧೫೦ ಜನ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದರು. ಕೆಲವೊಮ್ಮೆ ಸಾಂದರ್ಭಿಕವಾಗಿ ಈ ಸಂಖ್ಯೆ ಹೆಚ್ಚಾಗುತ್ತಿತ್ತು.

ಮೊದಲಿಗೆ ಕೂಲಿಯ ಹೆಚ್ಚಳವನ್ನು ಏಳು ವರ್ಷಗಳಿಂದಲೂ ಮಾಡಿರಲಿಲ್ಲ. ಅಲ್ಲದೆ ಬೋನಸ್ ನೀಡಿಕೆಯನ್ನು ಎಂದೂ ಕೂಡ ಪರಿಶೀಲಿಸಿದ್ದಿಲ್ಲ. ಈ ಎರಡೂ ಬೇಡಿಕೆಗಳ ಬಗ್ಗೆ ಮಾನ್ಯ ಸಹಾಯಕ ಆಯುಕ್ತರಿಗೆ ಮನವಿ ಕೊಡಲಾಯಿತು. ಮೊದಲು ಈ ಬಗ್ಗೆ ತಾತ್ಸಾರವಾಗಿ ನೋಡಿದ ರೈಸ್‌ಮಿಲ್ ಮಾಲೀಕರು, ಹಮಾಲರು ಕೆಲಸವನ್ನು ಬಹಿಷ್ಕರಿಸಿ ಮಿಲ್ಲಿನ ಕೆಲಸಕ್ಕೆ ಅಡ್ಡಿಪಡಿಸಿದ್ದರಿಂದ, ಅವರೆಲ್ಲರ ಐಕ್ಯತೆಯಿಂದಾಗಿ ಮಾಲೀಕರು ಕಾರ್ಮಿಕರ ಬೇಡಿಕೆ ಒಪ್ಪಿಕೊಳ್ಳುವುದು ಅನಿವಾರ್ಯವಾಯಿತು. ಏಳು ವರ್ಷಗಳ ನಂತರ ಪ್ರಪ್ರಥಮ ಬಾರಿಗೆ ರೈಸ್‌ಮಿಲ್ ಕಾರ್ಮಿಕರು, ಹಮಾಲರು ವೇತನ ಹೆಚ್ಚಿಸಿಕೊಂಡರು ಮಾತ್ರವಲ್ಲ, ಬೋನಸ್‌ನ್ನು ಪಡೆದುಕೊಂಡರು. ಯಾವುದೇ ಒಂದು ರೈಸ್‌ಮಿಲ್ಲಿನಲ್ಲಿ ಕಾರ್ಮಿಕರು ಬೋನಸ್ಸ್‌ನ್ನು ಪಡೆದವರೆಂದರೆ ಈ ಎರಡು ರೈಸ್‌ಮಿಲ್ಲುಗಳ ಕಾರ್ಮಿಕರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ಮೆಹತಾ ರೈಸ್‌ಮಿಲ್ ಕಾರಣಾಂತರಗಳಿಂದ ಬಂದ್ ಆಯಿತು. ಬಂದ್ ಆದ ಮೇಲೆ ಕಾರ್ಮಿಕರು ಸಹಜವಾಗಿ ನಿರುದ್ಯೋಗಿಗಳಾದರು. ಈ ರೈಸ್‌ಮಿಲ್ ಮಾಲೀಕರಿಂದ ಪರಿಹಾರ ಪಡೆಯಲು ಪುನಃ ಮನವಿ ಪತ್ರ ಕೊಡಲಾಯಿತು. ಇದಕ್ಕೆ ಓಗೊಡದ ಮಾಲೀಕರ ವಿರುದ್ಧ ೧೯೯೭ ಅಕ್ಟೋಬರ್ ೧೫ ರಂದು ಕಾರ್ಮಿಕರು ೧೦ ದಿನಗಳ ಮಿಲ್ಲಿನ ಮುಂದೆ ಇನ್ನಿತರ ಕಾರ್ಮಿಕರು, ಮುಖಂಡರೊಂದಿಗೆ ರೈಸ್‌ಮಿಲ್ಲಿನ ಮುಂದೆ ಟೆಂಟ್ ಹಾಕಲಾಯಿತು. ಇದಕ್ಕೂ ಮಾಲೀಕರು ಸ್ಪಂದಿಸದೇ ಇದ್ದಾಗ, ಕಾರ್ಮಿಕರು ಮುಷ್ಕರದ ನೋಟೀಸನ್ನು ಹೊಸಪೇಟೆಯ ಆಯುಕ್ತರಿಗೆ ನೀಡಿ ಮಾಲೀಕರು ಕಾರ್ಮಿಕರನ್ನು ಮಾತುಕತೆಗೆ ಕರೆಯದಿದ್ದರೆ ಮಾಲೀಕರ ಮನೆಯ ಮುಂದೆ ಟೆಂಟ್ ಹಾಕಿ ಪ್ರತಿಭಟನೆ ಮಾಡಲಾಗುತ್ತದೆ ಎಂದು ಎಚ್ಚರಿಕೆ ಕೊಡಲಾಯಿತು. ಇದರಿಂದ ಎ. ಸಿ. ಯವರ ಸಮಕ್ಷಮದಲ್ಲಿ ರೈಸ್‌ಮಿಲ್ ಮಾಲೀಕರೊಂದಿಗೆ ನಡೆದ ಮಾತುಕತೆಯ ಪರಿಣಾಮವಾಗಿ, ಕಾರ್ಮಿಕರು ಸೇವೆ ಸಲ್ಲಿಸಿದ ವರ್ಷ ಒಂದಕ್ಕೆ ೧೦೦೦ ರಂತೆ ಪರಿಹಾರವನ್ನು ಪಡೆಯಲು ಈ ಚಳುವಳಿ ಯಶಸ್ವಿಯಾಯಿತು. ರೈಸ್‌ಮಿಲ್ಲಿನ ಮುಚ್ಚುವಿಕೆಯಿಂದ ನಷ್ಟಪರಿಹಾರ ಪಡೆದದ್ದು ಸಹ ಮೊದಲ ಉದಾಹರಣೆ ಎಂದು ಕಾರ್ಮಿಕರು ಹೇಳುತ್ತಾರೆ. ಇದೇ ರೀತಿ ಮಂಜೂನಾಥ ರೈಸ್‌ಮಿಲ್ಲು ಸಹಾ ಕೌಟುಂಬಿಕ ಕಾರಣಗಳಿಂದಾಗಿ ನೀಡಿದಂತಹ ಪರಿಹಾರವನ್ನು ಯಾವುದೇ ತಕರಾರಿಗೆ ಅವಕಾಶವಿಲ್ಲದೆ ನೀಡಿದರು. ಯಾವುದೇ ಚಳುವಳಿಯಿಂದ ಪಡೆದ ಸೌಲಭ್ಯದ ಮಾದರಿ ವರ್ತಮಾನದಲ್ಲಿಯೂ ಈ ರೀತಿಯ ಸಂದರ್ಭಗಳಲ್ಲಿ ಅನುಕರಿಸಲು ಸಾಧ್ಯವಾಗುತ್ತದೆ ಎಂಬುದು ನಿಜವಾಗುತ್ತದೆಂಬುದಕ್ಕೆ ಮಂಜುನಾಥ ರೈಸ್‌ಮಿಲ್ ಕಾರ್ಮಿಕರು ಪಡೆದ ಪರಿಹಾರವೇ ಸಾಕ್ಷಿಯಾಗಿದೆ.

ಇಷ್ಟು ಮಾತ್ರವಲ್ಲದೆ ಕೌಟುಂಬಿಕ ಕಾರಣಕ್ಕೆ ನಿಂತಿದ್ದ ಈ ರೈಸ್‌ಮಿಲ್ ಕೆಲವೇ ತಿಂಗಳುಗಳ ನಂತರ ಮಿಲ್ಲು ಪುನರಾರಂಭವಾದ ಮೇಲೆ ಪುನಃ ಈ ಮೊದಲು ಕೆಲಸ ಮಾಡುತ್ತಿದ್ದ ಕಾರ್ಮಿಕರನ್ನೇ ಕೆಲಸಕ್ಕೆ ತೆಗೆದುಕೊಳ್ಳಲು ಮಾಲೀಕರು ತಕರಾರು ಮಾಡದಿರು. ಆಗ ಪುನಃ ಕಾರ್ಮಿಕ ಸಂಘಟನೆಯ ನೇತೃತ್ವದಲ್ಲಿ ಬೇಡಿಕೆ ಇಟ್ಟು ಟೆಂಟ್ ಹಾಕಿ ಸುಮಾರು ೧೫ ದಿನಗಳ ಕಾಲ ಧರಣಿ ಸತ್ಯಾಗ್ರಹ ಮಾಡಿದ ನಂತರ ಈ ಮೊದಲು ಕೆಲಸ ಮಾಡುತ್ತಿದ್ದ ಕಾರ್ಮಿಕರನ್ನೇ ಕೆಲಸಕ್ಕೆ ತೆಗೆದುಕೊಳ್ಳಲಾಯಿತು. ಒಗ್ಗಟ್ಟಿನಲ್ಲಿ ಬಲವಿದೆ ಎಂಬ ತತ್ವಕ್ಕೆ ಬದ್ಧರಾದ ಈ ಕಾರ್ಮಿಕ ಐಕ್ಯತೆ ಮತ್ತು ಒಗ್ಗಟ್ಟಿನಿಂದಾಗಿ ಇವರು ಮಾಡಿದ ಈ ಸಾಂಘಿಕ ಹೋರಾಟಗಳು ಯಶಸ್ವಿಯಾಗಿಯೇ ನಡೆದವು. ಅವರಿಟ್ಟ ಎಲ್ಲಾ ಬೇಡಿಕೆಗಳನ್ನು ಅನಕ್ಷರಸ್ಥ ಕಾರ್ಮಿಕರು ಪಡೆಯಲು ಸಾಧ್ಯವಾಯಿತೆಂದು ಹೇಳಬಹುದು.

## ಗೂಡ್‌ಶೆಡ್ ಹಮಾಲಿಗಳ ಸಾಂಘಿಕ ಚಳುವಳಿ

ರೈತರಿಗೆ ಅವಶ್ಯಕವಾಗಿ ಬೇಕಾಗಿರುವ ರಸಾಯನಿಕ ಗೊಬ್ಬರಗಳು ದೂರದ ಪ್ರದೇಶಗಳಿಂದ ರೈಲ್ವೆ ವ್ಯಾಗಿನ್‌ಗಳ ಮುಖಾಂತರ, ಲಾರಿಗಳ ಮುಖಾಂತರ ಸರಕಾರಿ ಮತ್ತು ಖಾಸಿಗ ಉಗ್ರಾಣಗಳಿಗೆ ಬರುತ್ತದೆ. ಇಂಥಹ ಉಗ್ರಾಣಗಳಿಂದ ಬೇಡಿಕೆಗಳಿಗನುಸಾರವಾಗಿ ಚಿಲ್ಲರೆ ಅಂಗಡಿ, ವ್ಯವಸಾಯ ಸೇವಾ ಸಹಕಾರಿ ಸಂಘ ಮತ್ತಿತರ ಸರಕಾರಿ ಇಲಾಖೆಗಳಿಂದ ರೈತರಿಗೆ ಅಗತ್ಯ ಗೊಬ್ಬರವನ್ನು ವಿತರಿಸಲಾಗುತ್ತದೆ.

ಚನ್ನೈಯಿಂದಲೇ ಬಹುಪಾಲು ರಾಸಾಯನಿಕ ಗೊಬ್ಬರ ರೈಲ್ವೆ ವ್ಯಾಗೀನ್‌ಗಳ ಮೂಲಕ ಇಲ್ಲಿಗೆ ಬರುತ್ತದೆ. ಚನ್ನೈ ಬಹುಮುಖ್ಯ ಬಂದರಾಗಿರುವುದರಿಂದ ಅಲ್ಲಿಂದ ಗೊಬ್ಬರ ಬರುತ್ತದೆ. ವ್ಯಾಗಿನ್‌ಗಳಿಂದ ಗೊಬ್ಬರ ಚೀಲಗಳನ್ನು ಇಳಿಸುವ ಮತ್ತು ಲಾರಿಗಳಿಗೆ ತುಂಬುವ ಮತ್ತು ಲಾರಿಗಳಿಂದ ಇಳಿಸುವಲ್ಲಿ ಹಮಾಲರ ಸೇವೆ ಅವಶ್ಯಕವಾಗಿದೆ. ಇಂಥಹ ದೈಹಿಕ ಶ್ರಮದ ಕೆಲಸ ನಿರ್ವಹಿಸುವ ಕಾರ್ಮಿಕರು ಬಹುತೇಕ ದೃಢಕಾಯರೂ, ಅನಕ್ಷರಸ್ಥರೂ, ಹಿಂದುಳಿದವರೂ, ದಲಿತರೇ ಆಗಿರುತ್ತಾರೆ. ಇಂಥಹ ನೂರಾರು ಕಾರ್ಮಿಕರನ್ನೇ ನಂಬಿ ಬದುಕುವ ನೂರಾರು ಕುಟುಂಬಗಳು ಹೊಸಪೇಟೆ ನಗರದಲ್ಲಿ ಬದುಕನ್ನು ಸಾಗಿಸುತ್ತಿವೆ.

ಇಂಥಹ ಗೂಡ್‌ಶೆಡ್ ಹಮಾಲರು ಹೊಸಪೇಟೆ ನಗರ ಒಂದರಲ್ಲಿಯೇ 450-500 ಜನ ಹಮಾಲರಿದ್ದಾರೆ. ಇವರಲ್ಲದೆ ಇನ್ನಿತರ ಹೋಲ್‌ಸೆಲ್ ಅಂಗಡಿಗಳಲ್ಲಿ ಹೋಲ್‌ಸೇಲ್ ತರಕಾರಿ ಮಾರುಕಟ್ಟೆ, ಇಟ್ಟಂಗಿ ಬಟ್ಟಿಗಳಲ್ಲಿ, ಉಸುಕು, ಕಲ್ಲು ಲಾರಿಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಎಲ್ಲರೂ ಸೇರಿದರೆ ಈ ಸಂಖ್ಯೆ ಸುಮಾರು ೨000 ದಾಟುತ್ತದೆ. ಇಂಥಹ ಹಮಾಲರ ಸಂಘಟನೆಗಾಗಿ ಸ್ವಾತಂತ್ರ್ಯ ನಂತರದಲ್ಲಿ ಬಹಳಷ್ಟು ಪ್ರಯತ್ನಗಳಾಗಿವೆ. ಆದರೆ ಈ ಎಲ್ಲಾ ಸಾಂಘಿಕ ಪ್ರಯತ್ನಗಳು ವ್ಯಕ್ತಿಗಳ ನೆಲೆಗಟ್ಟಿನಲ್ಲಿ ನಡೆದಿರುತ್ತವೆಯೇ ಹೊರತು ಸಾಂಘಿಕ ಸಮೂಹದ ನೆಲೆಗಟ್ಟಿನಲ್ಲಿ ನಡೆಯದೇ ಇರುವುದರಿಂದ ಈ ಎಲ್ಲಾ ವ್ಯಕ್ತಿಗತ ಪ್ರಯತ್ನಗಳು ಆಯಾ ಸಂದರ್ಭದಲ್ಲಿ ನಿಷ್ಕ್ರಿಯವಾಗಿರುವುದು ಕಂಡು ಬರುತ್ತದೆ.

೧೯೯೯ ರಲ್ಲಿ ಸಿ.ಐ.ಟಿ.ಯು ಸಂಘಟನೆಯ ನೇತೃತ್ವದಲ್ಲಿ ಸಾಂಘಿಕ ಚೌಕಟ್ಟಿನಲ್ಲಿ ಪ್ರಯತ್ನ ನಡೆಯಿತು. ಈ ಕಾರ್ಮಿಕ ಸಂಘಟನೆ ಗೂಡ್‌ಶೆಡ್ ಹಮಾಲರ ಕೆಲವೊಂದು ನೈಜ ಸಮಸ್ಯೆಗಳನ್ನು ಗುರುತಿಸಿತು.

೧. ಬಹಳ ವರ್ಷಗಳಿಂದಲೂ ಒಂದೇ ತೆರನಾದ ಕೂಲಿ ಕೂಲಿಗಾಗಿ ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾಗಿದ್ದರಿಂದ ಕೂಲಿಯ ಹೆಚ್ಚಳದ ಸಮಸ್ಯೆ ಬಹುಮುಖ್ಯವಾದ ಬೇಡಿಕೆಯಾಗಿತ್ತು.

೨. ದೈಹಿಕ ಶ್ರಮಾಧಾರಿತವಾದ ಈ ಕೆಲಸ ನಿರ್ವಹಿಸುವ ಹಮಾಲರಿಗೆ ಯಾವುದೇ ಜೀವನದ ಭದ್ರತೆಯಿರಲಿಲ್ಲ. ಹಮಾಲಿ ಕೆಲಸ ಮಾಡುವಾಗ ಕೆಲವು ಸಾರಿ ಅವರ ಪ್ರಾಣಕ್ಕೂ ಆಪತ್ತು ಸಂಭವಿಸುವ ಸಾಧ್ಯತೆಗಳಿದ್ದವು. ಈ ಹಿನ್ನೆಲೆಯಲ್ಲಿ ಹಮಾಲರಿಗೆ ಇನ್‌ಶೂರೆನ್ಸ್ ಸೌಲಭ್ಯವನ್ನು ಪಡೆಯುವ ಅವಶ್ಯಕತೆಯನ್ನು ಮನಗಂಡು ಈ ಬೇಡಿಕೆಯನ್ನು ಇಡಲಾಗಿತ್ತು. ಇನ್ಸ್‌ಶೂರೆನ್ಸ್‌ಗೆ ಒಳಗಾಗುವ ಕಾರ್ಮಿಕರ ವಿಮೆಯ ಕಂತನ್ನೂ ಪೂರ್ತಿಯಾಗಿ ಉಗ್ರಾಣದ ಗುತ್ತಿಗೆದಾರರೇ ಪಾವತಿಸುವಂತೆ ಬೇಡಿಕೆಯನ್ನು ಮಂಡಿಸಲಾಗಿತ್ತು.

೩. ಹಮಾಲರ ಪ್ರಾಣ ರಕ್ಷಣೆಗೆ ಸೂಕ್ತ ರಕ್ಷಣಾ ಕ್ರಮಗಳನ್ನು ಉಗ್ರಾಣದ ವ್ಯವಸ್ಥಾಪಕರು ಕೈಗೊಳ್ಳುವಂತೆ ಒತ್ತಾಯಿಸಲಾಗಿತ್ತು.

ಈ ಮೂರು ಪ್ರಮುಖ ಬೇಡಿಕೆಗಳನ್ನು ಈಡೇರಿಸಲು ಮನವಿ ಪತ್ರವನ್ನು ಅಧಿಕಾರಿಗಳ ಮೂಲಕ ಸಲ್ಲಿಸಲಾಗಿತ್ತು. ಆದರೆ ಈ ಮನವಿಗೆ ಉಗ್ರಾಣಗಳ ಗುತ್ತಿಗೆದಾರರು ಯಾವುದೇ ರೀತಿಯಲ್ಲಿ ಸ್ಪಂದಿಸದಿದ್ದರಿಂದ ಕಾರ್ಮಿಕ ಸಂಘಟನೆಯ ಸಲಹೆಯಂತೆ ಹಮಾಲರೆಲ್ಲರೂ ಒಂದಾಗಿ ರೈಲಿನ ವ್ಯಾಗಿನ್‌ಗಳಿಂದ ಬಂದ ಗೊಬ್ಬರದ ಚೀಲಗಳನ್ನು ಇಳಿಸಿಕೊಳ್ಳದೇ ಕೆಲಸವನ್ನು ಬಹಿಷ್ಕರಿಸಿದರು. ರೈಲ್ವೆ ಇಲಾಖೆಯವರು ಮೊದಲೇ ಇಂತಿಷ್ಟು ದಿನಗಳ ಒಳಗೆ ಅನ್‌ಲೋಡ್ ಮಾಡಿಕೊಳ್ಳಬೇಕೆಂದು ನಿಗಧಿ ಪಡಿಸಿರುತ್ತಾರೆ. ಆಕಸ್ಮಾತ್ ಏನಾದರೂ ನಿರ್ಧಿಷ್ಟ ದಿನದ ಒಳಗಾಗಿ ಅನ್‌ಲೋಡ್ ಮಾಡಿಕೊಳ್ಳದಿದ್ದರೆ ಆ ಸರಕಿನ ಮಾಲೀಕರಿಗೆ ನಿಯಮಾನುಸಾರ ದಂಡ ವಿಧಿಸುವ ಪದ್ಧತಿ ಇದೆ. ಇದರನ್ವಯ ಗೊಬ್ಬರ ಚೀಲ ಇಳಿಸಿಕೊಳ್ಳದಿರುವ ಹಮಾಲರ ಚಳುವಳಿಯಿಂದಾಗಿ ಉಗ್ರಾಣದ ಗುತ್ತಿಗೆದಾರರು ರೈಲ್ವೆ ಇಲಾಖೆಯವರಿಗೆ ದಂಡ ಕಟ್ಟುವುದು ಅನಿವಾರ್ಯವಾಯಿತು. ಇದರಿಂದ ಮಾಲೀಕರು ಹಮಾಲರ ಸಮಸ್ಯೆಗಳನ್ನು ಬಗೆಹರಿಸುವುದು ಅನಿವಾರ್ಯವಾಯಿತು.

## ೪.೭ ಸಾಂಸ್ಕೃತಿಕ ಸಾಂಘಿಕ ನೆಲೆ

ಹೊಸಪೇಟೆ ತಾಲೂಕಿನಲ್ಲಿ ೧೯೯೨ ರ ಡಿಸೆಂಬರ್ ತಿಂಗಳಲ್ಲಿ ಅಯೋಧ್ಯಯಲ್ಲಿ ಬಾಬರಿ ಮಸೀದಿ ನೆಲಸಮ ಮಾಡಿದ ನಂತರ ನಡೆದ ಕೋಮುಗಲಭೆಗಳ ಹಿನ್ನೆಲೆಯಲ್ಲಿ ಅಸ್ಥಿತ್ವಕ್ಕೆ ಬಂದ ಸಾಂಸ್ಕೃತಿಕ ಸಂಘಟನೆ ಭಾವೈಕ್ಯತಾ ವೇದಿಕೆ. ಹೆಸರೇ ಸೂಚಿಸುವಂತೆ ಹಿಂದೂ, ಮುಸ್ಲಿಂ ಜನತೆಯ ನಡುವೆ ಕೋಮು ಸೌಹಾರ್ದತೆ ಮೂಡಿಸುವ ಉದ್ದೇಶದೊಂದಿಗೆ ತನ್ನ ಚಟುವಟಿಕೆಗಳನ್ನು ಆರಂಭಿಸಿತು. ಇದೇ ಸಂದರ್ಭದಲ್ಲಿ ಹೊಸಪೇಟೆ ತಾಲೂಕಿನಲ್ಲಿ ಹಿಂದೂ - ಮುಸ್ಲಿಂರ ನಡುವೆ ಬನ್ನಿ ಮಹಾಂಕಾಳಮ್ಮ ದೇವಸ್ಥಾನದ ಮುಂದೆ ಅಹಿತಕರ ಘಟನೆ ನಡೆಯಿತು. ಈ ಘಟನೆಯಲ್ಲಿ ಹಲವಾರು ಅಮಾಯಕರು ಗಾಯಾಳುಗಳಾಗಿದ್ದರು. ಅಂದಿನ ಸಂದರ್ಭದಲ್ಲಿ ನಡೆದ ಈ ಘಟನೆ ಇಡೀ ಜಿಲ್ಲೆಯ ಶಾಂತಿಪ್ರಿಯ ಜನರಿಗೆ ತುಂಬಾ ಅನಿರೀಕ್ಷಿತ ಘಟನೆ ಇದಾಗಿತ್ತು. ಈ ಘಟನೆ ನಡೆದ ಸ್ಥಳ ಹೊಸಪೇಟೆ ನಗರದ ಸಿದ್ಧಲಿಮಗಪ್ಪ ಚೌಕಿ ಅತ್ಯಂತ ಸೂಕ್ಷ್ಮ ಪ್ರದೇಶವೆಂಬ ಖ್ಯಾತಿಗೆ ಒಳಗಾಗಿತ್ತು. ಬಳ್ಳಾರಿ ಜಿಲ್ಲೆಯಲ್ಲಿಯೇ ಅತೀ ಸೂಕ್ಷ್ಮ ಪ್ರದೇಶವೆಂಬ ಕುಖ್ಯಾತಿಗೆ ಒಳಗಾಗಿದ್ದ ಪ್ರದೇಶ ಇದಾಗಿತ್ತು. ಆದ್ದರಿಂದಲೇ ಅಂದಿನ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳು ಈ ಪ್ರದೇಶವನ್ನು ದತ್ತು ತೆಗೆದುಕೊಂಡು ಕಾನೂನು ಸುವ್ಯವಸ್ಥೆಯನ್ನು ಜಾರಿಗೊಳಿಸಲು ವಿಶೇಷವಾಗಿ ಶ್ರಮಿಸಿದ್ದರು.

ಇಂತಹ ಸೂಕ್ಷ್ಮ ಸನ್ನಿವೇಶದಲ್ಲಿ ಹೊಸಪೇಟೆಯಲ್ಲಿ ಭಾವೈಕ್ಯತಾ ವೇದಿಕೆಯ ನೇತೃತ್ವದಲ್ಲಿ ಮೊದಮೊದಲಿಗೆ ಜನರ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಹೋರಾಟಗಳನ್ನು ಮಾಡಲು ಆರಂಭಿಸಿತು. ಜನ ಸಾಮಾನ್ಯರ ಸಮಸ್ಯೆಗಳಿಗೆ ಸಂಬಂಧ ಪಟ್ಟ ನಾಟಕ, ಹಾಡುಗಳನ್ನು ಸ್ವತಃ ರಚಿಸಿಕೊಂಡು 'ಬೀದಿನಾಟಕ' ರೂಪದಲ್ಲಿ ಹೊಸಪೇಟೆಯ ವಿವಿಧ ಬಡಾವಣೆಗಳಲ್ಲಿ ಕಾರ್ಯಕ್ರಮಗಳನ್ನು ನಡೆಸಿತು. ಇದೇ ಸಂದರ್ಭದಲ್ಲಿ ಸಿದ್ದಲಿಂಗಪ್ಪ ಚೌಕಿನಲ್ಲಿ ಒಬ್ಬ ಮುಸ್ಲಿಂ ಮಹಿಳೆಯನ್ನು ಹಾಡು ಹಗಲೇ ವರದಕ್ಷಿಣೆ ಕಾರಣಕ್ಕಾಗಿ ಬಚ್ಚಲು ಮನೆಯಲ್ಲಿ ಸುಟ್ಟು ಹಾಕಿ, ಆತ್ಮಹತ್ಯೆ ಪ್ರಕರಣವೆಂದು ದಾಖಲಿಸಲು ವ್ಯವಸ್ಥಿತ ಜಾಲವನ್ನು ಹೂಡಿದ್ದ ಮನೆಯವರ ಕುರಿತು ವೇದಿಕೆ ಒಂದು ಹಾಡನ್ನು ರಚಿಸಿ ಹಾಡನ್ನು ಹೇಳಿದನಂತರ

ಘಟನೆಯ ಬಗ್ಗೆ ಭಾಷಣ ಮಾಡುವ ಕಾರ್ಯಕ್ರಮವು ಜನರಲ್ಲಿ ಜಾಗೃತಿ ಮೂಡಿಸಲು ಸಹಕಾರಿಯಾಯಿತು. ಈ ಕಾರ್ಯಕ್ರಮಕ್ಕೆ ಹೊಸಪೇಟೆಯ ಜನವಾದಿ ಮಹಿಳಾ ಸಂಘಟನೆ, ಭಾರತೀಯ ಪ್ರಜಾಸತ್ತಾತ್ಮಕ ಯುವಜನ ಫೆಡರೇಷನ್ನಿನ ಸದಸ್ಯರು ಸಂಪೂರ್ಣ ಬೆಂಬಲ ವ್ಯಕ್ತಪಡಿಸಿದರು. ಇದರಿಂದ ಇಡೀ ಪ್ರಕರಣವನ್ನು ಸಿ. ಓ. ಡಿ. ತನಿಖೆಗೆ ಒಳಪಡಿಸಲು ಒತ್ತಾ ಪಡಿಸಲು ಒಗ್ಗಟ್ಟಿನಿಂದ ಮನವಿ ಸಲ್ಲಿಸಲಾಯಿತು. ಈ ಸತ್ಯಾಗ್ರಹದ ಪ್ರಭಾವದಿಂದ ಸಮಸ್ಥ ನಾಗರೀಕರು, ಹೋರಾಟವನ್ನು ಬೆಂಬಲಿಸಿದರು. ಸುಮಾರು ೧೦,೦೦೦ ಜನ ಸೇರಿ ಒತ್ತಾಯಿಸಿದ ಈ ಹೋರಾಟ ಚಾರಿತ್ರಿಕವಾದುದಾಗಿತ್ತು. ಸರಕಾರ ಈ ಘಟನೆಯ ಇಲಾಖಾ ತನಿಖೆಗೊಳಪಡಿಸಿದರೂ ಅಪರಾಧಿಗಳಿಗೆ ಶಿಕ್ಷೆ ಆಗದೆ ವಿಳಂಬ ನೀತಿಯಲ್ಲಿ ಮುಚ್ಚಿ ಹೋಯಿತು.

ಅದೇ ರೀತಿ ಹೊಸಪೇಟೆ ತಾಲೂಕಿನ ಚಿನ್ನಾಪುರ ಗ್ರಾಮದಲ್ಲಿಯೂ ಇದೇ ರೀತಯ ಇದೇ ವರದಕ್ಷಿಣೆಯ ಕಿರುಕುಳ ಕಾರಣಕ್ಕೆ ಮುಸ್ಲಿಂ ಮಹಿಳೆಯನ್ನು ಗಂಡನೇ ಕೊಲೆ ಮಾಡಿ ಅದನ್ನು ವಿಷಸೇವಿಸಿದ ಆತ್ಮಹತ್ಯೆಯೆಂದು ಬಿಂಬಿಸಲು ಪ್ರಯತ್ನಿಸಿದ ಘಟನೆಯನ್ನು ವಿರೋಧಿಸಿ ಮುಸ್ಲಿಂ ಮಹಿಳೆಯರೇ ಅಧಿಕವಾಗಿದ್ದ, ಅದರಲ್ಲೂ ಬುರ್ಕಾಧರಿಸಿದ್ದ ಮಹಿಳೆಯರೇ ಅಧಿಕವಾಗಿದ್ದ ಭಾರೀ ದೊಡ್ಡ ಮೆರವಣಿಗೆಯನ್ನು ಹೊಸಪೇಟೆಯಲ್ಲಿ ನಡೆಸಿ ಸಿ. ಓ. ಡಿ. ತನಿಖೆಗೆ ಒತ್ತಾಯಿಸಿದ ಚಳುವಳಿ ಅಲ್ಪಸಂಖ್ಯಾತ ಮಹಿಳೆಯರಲ್ಲಿ ಹೊಸ ಉತ್ಸಾಹವನ್ನು ತಂದುಕೊಟ್ಟ ಚಳುವಳಿಯಾಗಿದ್ದಿತು. ಮೆರವಣಿಗೆಗೆ ಬಂದಿದ ಬುರ್ಕಾ ಧರಿಸಿದ್ದ, ಮುಸ್ಲಿಂ ಮಹಿಳೆಯರು ತಮ್ಮ ಮಕ್ಕಳೊಂದಿಗೆ ಈ ಚಳುವಳಿಯಲ್ಲಿ ಭಾಗವಹಿಸಿದ್ದು ವಿಶೇಷವಾಗಿತ್ತು. ಹೋರಾಟದ ಪರಿಣಾಮವಾಗಿ ಇದನ್ನು ಸಿ. ಓ. ಡಿ. ಗೆ ವಹಿಸಿದ ಸರಕಾರ ಅಪರಾಧಿಗಳಿಗೆ ಶಿಕ್ಷೆ ವಿಧಿಸಲು ಸಾಧ್ಯವಾಯಿತು.

ಸಿದ್ಧಲಿಂಗಪ್ಪ ಚೌಕಿಯಲ್ಲಿ ತನ್ನ ಚಟುವಟಿಕೆಗಳನ್ನು ಕೇಂದ್ರೀಕರಿಸಿರುವ ಭಾವೈಕ್ಯತಾ ವೇದಿಕೆಯು ಒಮ್ಮೆ ಸಿದ್ಧಲಿಂಗಪ್ಪ ಚೌಕಿಯ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ರಸ್ತೆಗಳ ನಿರ್ಮಾಣ, ರಸ್ತೆಗಳ ದುರಸ್ತಿ ಒಳಚರಂಡಿ ನಿರ್ಮಾಣದಂತಹ ಮೂಲಭೂತ ಸೌಕರ್ಯಗಳನ್ನು ನೀಡದ್ದರಿಂದ ಅದೇ ವರ್ಷ ನಡೆದ ಲೋಕಸಭಾ ಚುನಾವಣೆಗೆ ಮತದಾನ ಮಾಡದೆ ಬಹಿಷ್ಕರಿಸಲು ಭಾವೈಕ್ಯತಾ ವೇದಿಕೆಯಿಂದ ಉಂಟು ಮಾಡಿದ್ದ ಜನಜಾಗೃತಿಯೇ ಕಾರಣವೆಂದು ಹೇಳಲಾಗುತ್ತದೆ. ರಾಜಕೀಯ ಪಕ್ಷಗಳ ಮುಖಂಡರು ಎಷ್ಟೇ ಆಸೆ ಆಮಿಷಗಳನ್ನು ತೋರಿಸಿದರೂ ಈ ತೀರ್ಮಾನಕ್ಕೆ ಬದ್ದರಾಗಿ ಚುನಾವಣೆಯನ್ನು ಬಹಿಷ್ಕರಿಸಿದ್ದು ಭಾವೈಕ್ಯತಾ ವೇದಿಕೆಗೆ ಇರುವ ಜನಬೆಂಬಲಕ್ಕೆ ಸಾಕ್ಷಿಯಾಗಿದೆ.

ಈ ರೀತಿಯ ಜನ ಪರ ಹೋರಾಟಗಳಿಗೆ ಎಡ ಪಂಥೀಯ ಸಂಘಟನೆಗಳ ಬೆಂಬಲವೂ ಈ ಹೋರಾಟಗಳ ಯಶಸ್ವಿಗೆ ಕಾರಣವೆಂದು ತಿಳಿದು ಬರುತ್ತದೆ. ವಿದ್ಯಾರ್ಥಿಗಳ ಬಿಡುವಿನ ವೇಳೆಯಲ್ಲಿ ಅವರಿಗೆ ಜನರ ಸಮಸ್ಯೆಗಳ ಕುರಿತು ಸೂಕ್ತ ತಿಳುವಳಿಕೆ ನೀಡಿ ಅವರಲ್ಲಿಯೇ ಪ್ರತಿಭಾವಂತರನ್ನು ಗುರುತಿಸಿ, ಅವರಲ್ಲಿರುವ ವಿವಿಧ ಕಲೆ, ಚಿತ್ರಕಲೆ, ರಂಗಕಲೆ, ನಿರ್ದೇಶನಗಳನ್ನು ಕಲಿಸಿದ್ದು, ಹೆಗ್ಗಳಿಕೆಯೆಂದು

ಹೇಳಬಹುದು. ಜನರ ಸಮಸ್ಯೆಗಳನ್ನೇ ನಾಟಕ, ಹಾಡು, ಬೀದಿ ನಾಟಕ ಮಾಡಿ ರಂಗ ತರಬೇತಿ ಶಿಬಿರಗಳನ್ನು ನಡೆಸಿ ನಾಟಕ ತಂಡವನ್ನು ರೂಪಿಸಿ, ಅನಂತರ ಪ್ರತಿಯೊಂದು ಕೇರಿಗಳಲ್ಲಿ ಗ್ರಾಮೀಣ ಪ್ರದೇಶದ ಹಳ್ಳಿಗಳಲ್ಲಿ ನಾಟಕ, ಹಾಡು, ಬೀದಿನಾಟಕಗಳನ್ನು ಮಾಡಿ ಜನರಲ್ಲಿ, ರೈತರಲ್ಲಿ, ದಲಿತರಲ್ಲಿ ಮಹಿಳೆಯರಲ್ಲಿ, ವಿದ್ಯಾರ್ಥಿಗಳಲ್ಲಿ ಜನ ಜಾಗೃತಿ ಮೂಡಿಸಿದ ಹೆಗ್ಗಳಿಕೆ ಭಾವೈಕ್ಯತಾ ವೇದಿಕೆಗೆ ಸಲ್ಲಬೇಕು.

## ೪.೮ : ಯುವಜನ ಸಾಂಘಿಕ ನೆಲೆ

ಸ್ವಾತಂತ್ರ್ಯ ಹೋರಾಟ ಸೇರಿದಂತೆ ರಾಷ್ಟ್ರೀಯ ಆಂದೋಲನಗಳಲ್ಲಿ ಯುವಕರು ಸಾಕಷ್ಟು ಸಂಖ್ಯೆ ಮತ್ತು ಯಶಸ್ಸಿನಿಂದಲೇ ಭಾಗವಹಿಸುತ್ತಿದ್ದರು. ಚರಿತ್ರೆಯ ಪುಟಗಳಲ್ಲಿ ಹೊಸಪೇಟೆ ತಾಲೂಕಿನ ಯುವಕರು ವ್ಯಾಯಾಮದಲ್ಲಿ ಆಸಕ್ತಿ ತೋರುತ್ತಿದ್ದುದು ಕಂಡು ಬರುತ್ತದೆ. ಹಲವಾರು ಗರಡಿ ಮನೆಗಳು ಇಂದಿಗೂ ಕ್ರಿಯಾಶೀಲವಾಗಿರುವುದು ಕಂಡು ಬರುತ್ತದೆ. ಬಳ್ಳಾರಿಯ ವ್ಯಾಯಾಮ ಶಾಲೆಯು ಹೊಸಪೇಟೆಯ ವ್ಯಾಯಾಮ ಶಾಲೆಗೆ ಪ್ರೇರಕವಾಗಿ ಸಂಸ್ಥಾಪಿತವಾಗಿದ್ದು ಇಂದಿಗೂ ಎಳೆಯರ ಸಾಂಸ್ಕೃತಿಕ ಕೇಂದ್ರಗಳಾಗಿ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ. ೧೯೪೮ರಲ್ಲಿ ಹೈದ್ರಾಬಾದ್ ನಿಜಾಮನ ವಿರುದ್ಧ ಮುನಿರಾಬಾದ್‌ದಲ್ಲಿ ನಡೆದ ಪೊಲೀಸ್ ಕಾರ್ಯಾಚರಣೆಯಲ್ಲಿ ತಾರುಣ್ಯಕ್ಕೆ ಯೋಗ್ಯವಾದ ಸೇವೆ ಸಲ್ಲಿಸುವ ಅವಕಾಶ ದೊರೆಯಿತು. ಸ್ವಯಂ ಸೇವಕರಾಗಿ ಸೈನ್ಯಕ್ಕೆ ವಿಶೇಷ ಸಹಾಯ ದೊರೆತು ಚಟುವಟಿಕೆಗಳಿಗೆ ಚಾಲನೆ ದೊರೆಯಿತು. ೧೯೫೨ರಲ್ಲಿ ಹೊಸಪೇಟೆಯಲ್ಲಿ ಜರುಗಿದ ಯುವ ಜನೋತ್ಸವದಲ್ಲಿ ಹೊಸಪೇಟೆ ತಾಲೂಕಿನ ಯುವಕರು ಅತ್ಯಂತ ಆಸಕ್ತಿಯಿಂದ ಭಾಗವಹಿಸಿದ್ದರು.

೧೯೫೬ರಲ್ಲಿ ರಾಜ್ಯ ಪುನರ್ ವಿಂಗಡಣಾ ಆಯೋಗವು ಬಳ್ಳಾರಿ ಜಿಲ್ಲೆಯ ಬಹುಭಾಗವನ್ನು ಆಂಧ್ರ ರಾಜ್ಯಕ್ಕೆ ಸೇರಿಸಬೇಕೆಂಬ ಅಸಾಧುವಾದ ಶಿಫಾರಸ್ಸಿನ ಹಿನ್ನೆಲೆಯಲ್ಲಿ ಹೊಸಪೇಟೆ ಸೇರಿದಂತೆ ಇಡೀ ಬಳ್ಳಾರಿ ಜಿಲ್ಲೆ ಮೈಸೂರು ಪ್ರಾಂತ್ಯಕ್ಕೆ ಸೇರಲು ಯುವಕರು ನಡೆಸಿದ ಚಳುವಳಿಯೇ ಪ್ರಮುಖ ಕಾರಣವಾಯಿತು. ಇವರು ಮಾಡಿದ ಈ ಹೋರಾಟದಿಂದಾಗಿ ಸಂಸತ್ತು ಬಳ್ಳಾರಿ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ರಕ್ಕೆ ಸೇರಿಸುವ ಚಾರಿತ್ರಿಕ ನಿರ್ಣಯ ಕೈಗೊಂಡಿತು.

ಹೊಸಪೇಟೆ ತಾಲೂಕಿನಾದ್ಯಂತ ಸಾಮಾನ್ಯವಾಗಿ ಗಣೇಶ ಚತುರ್ಥಿಯ ಸಂದರ್ಭದಲ್ಲಿ ಯುವಕರು ಸಂಘಟಿತವಾಗಿ ಗಜಾನನೋತ್ಸವವನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುವ ಪರಂಪರೆ ವ್ಯಾಪಕವಾಗಿ ನಡೆದುಕೊಂಡು ಬಂದಿದೆ. ಹಾಗೆಯೇ ಸಾಂಸ್ಕೃತಿಕ ಕಲಾ ಕಾರ್ಯಕ್ರಮಗಳು, ರಾಷ್ಟ್ರೀಯ ದಿನಾಚರಣೆಯಾದ ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವ ಹಾಗೂ ಗಾಂಧೀ ಜಯಂತಿಗಳು, ಕರ್ನಾಟಕ ರಾಜ್ಯೋತ್ಸವ ಮೊದಲಾದ ರಾಷ್ಟ್ರೀಯ ಹಬ್ಬಗಳನ್ನು ಯುವಕರು ತಮ್ಮ ಸಮಾನ ವಯಸ್ಕರೊಂದಿಗೆ ತಾತ್ಕಾಲಿಕವಾದ ಸಂಘಟನೆ ಕೆಲವೊಮ್ಮೆ ಶಾಶ್ವತವಾದ ಸಾಂಘಿಕ ನೆಲೆಗಳಿಂದಲೇ ಈ ಉತ್ಸವಗಳನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಂಡು ಬಂದಿರುವುದು ಸ್ವಾತಂತ್ರ್ಯ ನಂತರ ಹೊಸಪೇಟೆಯಲ್ಲಿ ಕಂಡು

ಬರುತ್ತದೆ. ಹೊಸಪೇಟೆಯ ರೈಫಲ್ ಕ್ಲಬ್ ಯುವಕರಿಗೆ ರೈಫಲ್ ತರಬೇತಿ ನೀಡಲು ೧೯೯೧ರಲ್ಲಿ ಸಂಘಟಿತವಾದ ಈ ಸಂಸ್ಥೆಯಲ್ಲಿ ಹಲವಾರು ಯುವಕರು ತರಬೇತಿ ಪಡೆದಿದ್ದು ಇವರು ರೈಫಲ್ ಶೂಟಿಂಗ್‌ನಲ್ಲಿ ಜಿಲ್ಲಾ/ರಾಜ್ಯ ಮಟ್ಟದ ಸ್ಪರ್ಧೆಗಳಲ್ಲಿ ಭಾಗವಹಿಸಿ ಪ್ರಶಸ್ತಿ ಗಳಿಸಿದ್ದಾರೆ. ಇದರಲ್ಲಿ ಸೊಂಡೂರಿನ ಮಹಾರಾಜರಾಗಿದ್ದ ಎಂ.ವೈ. ಘೋರ್ಪಡೆಯಂತವರು ಮುಖ್ಯ ಪೋಷಕರಾಗಿದ್ದರು. ದುರ್ಗಾಪ್ರಸಾದ್, ಶಿವಶಂಕರಪ್ಪ, ಎಂ.ಪದ್ಮನಾಭ ಹಾಗೂ ರತ್ನವೇಲುರವರು ಈ ಯತ್ನದಲ್ಲಿ ಭಾಗವಹಿಸಿದವರಾಗಿದ್ದಾರೆ.

ಭಾರತ ಪ್ರಜಾಸತ್ತಾತ್ಮಕ ಯುವಜನ ಸಂಘಟನೆಯ ವತಿಯಿಂದ ಹೊಸಪೇಟೆ ತಾಲೂಕಿನಲ್ಲಿ ವಿಜಯನಗರದ ಉಕ್ಕಿನ ಕಾರ್ಖಾನೆಯ ಆರಂಭಕ್ಕಾಗಿ ಹಲವಾರು ಹೋರಾಟಗಳು ನಡೆದಿವೆ. ಕಬ್ಬಿಣದ ಅದಿರಿಗೆ ಬಳ್ಳಾರಿ ಜಿಲ್ಲೆ (ಹೊಸಪೇಟೆ ಸೇರಿದಂತೆ) ಅತ್ಯಂತ ಹೆಸರುವಾಸಿಯಾಗಿದೆ. ಅತ್ಯಂತ ಉತ್ತಮ ದರ್ಜೆಯ ಕಬ್ಬಿಣದ ಅಂಶವುಳ್ಳ ಗಣಿಗಳು ಇಲ್ಲಿವೆ. ಈ ಸಮೃದ್ಧಿಯ ಗುರುತಾಗಿ ಸೊಂಡೂರು ತಾಲೂಕಿನ ಕಮ್ಮತ್ತರವು ಗ್ರಾಮದಲ್ಲಿ ೧೫೦ ಅಡಿ ಎತ್ತರದ ಬರೆ ಕಬ್ಬಿಣದ ಅಂಶವುಳ್ಳ ಬಂಡೆಯೊಂದಿದ್ದುದನ್ನು ಜಿಲ್ಲೆಯ ಗೆಜಿಟಿಯರ್‌ನಲ್ಲಿ ಉಲ್ಲೇಖಿಸಲಾಗಿದೆ. ೧೯೪೭ ರಿಂದೀಚೆಗೆ ಜಿಲ್ಲೆಯ ಕಬ್ಬಿಣದ ಅದಿರಿನ ಸಂಪತ್ತು ದೇಶವಿದೇಶಗಳಿಗೆ ರಫ್ತಾಗುತ್ತದೆ. ಮ್ಯಾಂಗನೀಸ್ ಕೂಡ ಈ ಪ್ರದೇಶದಲ್ಲಿ ಹೇರಳವಾಗಿ ದೊರಕುತ್ತದೆ. ವಿದೇಶಿಗರು ಇಲ್ಲಿಯ ಅದಿರನ್ನು ವಿಶೇಷ ಪರಿಶ್ರಮದಿಂದ ಒಯ್ದು ಅಲ್ಲಿ ಅದನ್ನು ಕರಗಿಸಿ ಕಬ್ಬಿಣ ಅಥವಾ ಉಕ್ಕನ್ನಾಗಿ ಮಾಡಿ ಮತ್ತೆ ಭಾರತಕ್ಕೆ ತಯಾರಾದ ಕಬ್ಬಿಣವನ್ನು ಆಮದು ಮಾಡುವ ಕ್ರಮಕ್ಕಿಂತ ಇಲ್ಲಿಯೇ ಉಕ್ಕಿನ ಕಾರ್ಖಾನೆಯೊಂದನ್ನು ಪ್ರಾರಂಭಿಸಿದರೆ ಕಾರ್ಖಾನೆಯಲ್ಲಿ ಸಾವಿರಾರು ಯುವಕರಿಗೆ ಉದ್ಯೋಗಾವಕಾಶ ಒದಗಿಸಬಹುದು, ಇದರಿಂದ ಸ್ಥಳೀಯ ನಿರುದ್ಯೋಗಿ ಯುವಕರಿಗೂ ಉದ್ಯೋಗಾವಕಾಶ ಸಿಗುತ್ತದೆಂದು ಉಕ್ಕಿನ ಕಾರ್ಖಾನೆಗಾಗಿ ಸ್ವಾತಂತ್ರ್ಯ ದೊರೆತಂದಿನಿಂದಲೂ ಪ್ರಯತ್ನಗಳಾಗುತ್ತಿದ್ದರೂ ಯಾವುದೇ ಸರಕಾರ ಇದರ ಬಗ್ಗೆ ಗಮನ ನೀಡಿದ್ದಿಲ್ಲ. ಹೊಸಪೇಟೆ ವಲಯದಲ್ಲಿರುವ ಅಪರಿಮಿತ ಹಾಗೂ ಉತ್ಕೃಷ್ಟವಾದ ಅದಿರು, ನೀರು ಹಾಗೂ ವಿದ್ಯುಚ್ಛಕ್ತಿ ಹಾಗೂ ರಾಯಲಸೀಮೆಯ ಪ್ರದೇಶದ ಬಿಜಾಪುರದಲ್ಲಿ ಸಿಗುವ ಸುಣ್ಣದಕಲ್ಲುಗಳು ಕಾರ್ಖಾನೆಯನ್ನು ಲಾಭದಾಯಕಗೊಳಿಸಬಲ್ಲವು. ಕಲ್ಲಿದ್ದಲಿನ ಅಭಾವವೊಂದೆ ತೊಡಕನ್ನು ತಂದೊಡ್ಡುವ ವಿಷಯವಾಗಿತ್ತು. ಇದಕ್ಕೆ ಪೂರಕವಾಗಿ ಕಚ್ಚಾ ಅದಿರನ್ನು ಒಯ್ಯುತ್ತಿರುವ ದೇಶಗಳಿಂದ ಬರುವ ಹಡಗುಗಳಲ್ಲಿ ಕಲ್ಲಿದ್ದಲನ್ನು ತರಿಸಿಕೊಂಡರೆ ಈ ಸಮಸ್ಯೆಯೂ ಬಗೆಹರಿಯುತ್ತಿತ್ತು.

ಹೊಸಪೇಟೆಯಿಂದ ಅದಿರನ್ನು ಬಂದರುಗಳಿಗೆ ಒಯ್ಯುವ ರೈಲ್ವೆ ವ್ಯಾಗನ್ನುಗಳು ಖಾಲಿಯಾಗಿ ವಾಪಾಸ್ಸು ಬರುವಾಗ ಕಲ್ಲಿದ್ದಲನ್ನು ತರಬಹುದಾದ ಅವಕಾಶವಿತ್ತು. ಹೀಗೆ ಕಲ್ಲಿದ್ದಲಿನ ಪೂರೈಕೆ ಅಷ್ಟೊಂದು ಸಮಸ್ಯೆಯಾಗುತ್ತಿರಲಿಲ್ಲ. ಹೊಸಪೇಟೆ ಪ್ರದೇಶದಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಆರಂಭಕ್ಕೆ ಇಷ್ಟೆಲ್ಲಾ ಒಳ್ಳೆಯ ಅವಕಾಶಗಳಿದ್ದುದರಿಂದ ಕಬ್ಬಿಣ ಕಾರ್ಖಾನೆಯ ಅವಶ್ಯಕತೆಯನ್ನು ಸ್ಥಳೀಯರು ಮನಗಂಡು ಸ್ವಾತಂತ್ರ್ಯ ದೊರೆತಾಗಿನಿಂದಲೂ ಈ ಬೇಡಿಕೆಗಾಗಿ ಶ್ರಮಿಸುತ್ತಿದ್ದರು.

ಈ ಕಾರ್ಖಾನೆಯನ್ನು ಸಂಸ್ಥಾಪಿಸುವ ಅವಶ್ಯಕತೆ ದಸ್ತೂರ ಅಂಡ್ ಕಂಪನಿಯವರು ಈ ಎಲ್ಲಾ ನೈಸರ್ಗಿಕ ಪರಿಸ್ಥಿತಿಯನ್ನು ಪರಿಶೀಲಿಸಿ ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ಕಾರ್ಖಾನೆಯನ್ನು ಆರಂಭಿಸಲು ಸಲಹೆ ನೀಡಿದ್ದರು. ಪ್ರಾರಂಭದ ಹಂತದಲ್ಲಿ ೧೫ ಲಕ್ಷ ಟನ್ ಸಾಮರ್ಥ್ಯದ ವಾರ್ಷಿಕ ಉತ್ಪಾದನಾ ಸಾಮರ್ಥ್ಯ ಉಳ್ಳ ಕಾರ್ಖಾನೆಯನ್ನು ಪ್ರಾರಂಭಿಸಲು ಶಿಫಾರಸ್ಸು ಮಾಡಿದ್ದರು. ಉತ್ಪಾದನಾ ಸಾಮರ್ಥ್ಯವನ್ನು ಕಾಲಾನುಕ್ರಮೇಣ ೪೦ ಲಕ್ಷ ಟನ್‌ಗೇರಿಸಬಹು ದೆಂದು ಸಲಹೆ ಮಾಡಿದ್ದರು. ಈ ಉದ್ದೇಶಿತ ಕಾರ್ಖಾನೆಗೆ ಪ್ರಾರಂಭದ ಬಂಡವಾಳ ೫೦೦ ಕೋಟಿ ರೂಪಾಯಿ ಬೇಕಾಗಬಹುದೆಂದು ಅಂದಾಜು ಮಾಡಲಾಗಿತ್ತು. ತಜ್ಞರ ವರದಿಯ ನಂತರ ಸುಮಾರು ವರ್ಷಗಳ ನಂತರ ೧೯೭೧ ರಲ್ಲಿ ಅಂದಿನ ಪ್ರಧಾನ ಮಂತ್ರಿಗಳಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರು ತೋರಣಗಲ್ಲು ಬಳಿ ವಿಜಯನಗರ ಉಕ್ಕಿನ ಕಾರ್ಖಾನೆಗೆ ಶಂಖು ಸ್ಥಾಪನೆ ನೆರವೇರಿಸಿದ್ದರು. ಅಂದು ಕರ್ನಾಟಕದ ಮುಖ್ಯಮಂತ್ರಿಗಳು ದೇವರಾಜ ಅರಸ್‌ರವರಿದ್ದರು. ಶಂಖು ಸ್ಥಾಪನೆ ನಡೆದು ಹತ್ತು ವರ್ಷಗಳಾದರೂ ಶಂಖು ಸ್ಥಾಪನೆ ನಂತರ ಪ್ರಾಥಮಿಕ ಕೆಲಸಗಳಾದ ಪರಿಹಾರ ಹಣಪಾವತಿ ಭೂ ಸ್ವಾಧೀನಗೊಳಿಸಿ ಕೊಳ್ಳುವುದು, ಕಚ್ಚಾ ದೊರೆಯುವ ಸಾಧ್ಯತೆಯನ್ನು ಪರಿಶೀಲಿಸುವುದು, ಉದ್ದೇಶಿತ ಕಾರ್ಖಾನೆ ಆರಂಭವಾಗುವ ಲಕ್ಷಣಗಳೇ ಕಾಣಲಿಲ್ಲ. ಇದರಿಂದ ಹತಾಶರಾದ ಇಲ್ಲಿಯ ಯುವಜನರು, ಪ್ರಗತಿಪರರೂ ಬುದ್ಧಿ ಜೀವಿಗಳು, ''ವಿಜಯನಗರದ ಉಕ್ಕು ನಮ್ಮೆಲ್ಲರ ಹಕ್ಕು'' ''ವಿಜಯನಗರದ ಉಕ್ಕು ಕರ್ನಾಟಕದ ಹಕ್ಕು'' ಎಂಬ ಘೋಷಣೆಗಳೊಂದಿಗೆ ತೀವ್ರ ಚಳುವಳಿಗಳಲ್ಲಿ ತೊಡಗಿಸಿಕೊಂಡರು.

೧೯೮೦-೮೪ರವರೆಗೆ ಈ ರೀತಿಯ ಧರಣಿ, ರಸ್ತಾ ರೋಕೋ ಮೆರವಣಿಗೆ ಮುಖಾಂತರ ಇಡೀ ಬಳ್ಳಾರಿ ಜಿಲ್ಲೆಯ ತಹಶೀಲ್ದಾರರು ಮತ್ತು ಜಿಲ್ಲಾಧಿಕಾರಿಗಳಿಗೆ ಹಲವು ಬಾರಿ ವಿಜಯನಗರ ಉಕ್ಕಿನ ಕಾರ್ಖಾನೆಯ ಪ್ರಾರಂಭಕ್ಕೆ ಪ್ರತಿಭಟನೆ ಮಾಡಲಾಗಿದೆ. ಹೊಸಪೇಟೆ ತಾಲೂಕಿನ ಪ್ರಜಾಸತ್ತಾತ್ಮಕ ಯುವಜನ ಫೆಡರೇಶನ್ನಿನ ನೇತೃತ್ವದಲ್ಲಿ ಸುಮಾರು ೨೦೦ ಜನ ಯುವಕರು ಸೈಕಲ್‌ಗಳನ್ನು ತುಳಿದುಕೊಂಡು ಹೊಸಪೇಟೆಯ ಜಂಬಯ್ಯ ನಾಯಕ, ಪರಶುರಾಮ ಕಲಾಲ್, ಸಿದ್ಧಲಿಂಗಪ್ಪ, ಹುಸೇನ್ ತಂಬ್ರಹಳ್ಳಿ ಇವರ ಮುಂದಾಳತ್ವದಲ್ಲಿ ಅನಂತಶಯನಗುಡಿಯ ಜೆ.ಪಿ.ರಾಮನಾಥ, ಪಾಂಡುರಂಗ ಮತ್ತಿತರರೂ ಸೇರಿದಂತೆ ಹೊಸಪೇಟೆ ನಗರದಲ್ಲಿ ೧೯೮೦ರ ಸೆಪ್ಟಂಬರ್ ೧೪ ರಂದು ಸೈಕಲ್ ಮೆರವಣಿಗೆಯೊಂದಿಗೆ ಸೈಕಲ್ ಜಾಥಾ ನಿಜಕ್ಕೂ ಉಕ್ಕಿನ ಕಾರ್ಖಾನೆಯ ಅವಶ್ಯಕತೆಯ ಬಗ್ಗೆ, ಅದರಿಂದ ಸ್ಥಳೀಯ ಬಳ್ಳಾರಿ ಜಿಲ್ಲೆಯ ನಿರುದ್ಯೋಗಿಗಳಿಗೆ ಒಂದು ರೀತಿಯ ನವಚೇತನ, ಸಂಚಲನ ಮಾಡುವಲ್ಲಿ ಈ ಜಾಥಾ ಯಶಸ್ವಿಯಾಯಿತು. ಹೊಸಪೇಟೆಯಿಂದ ಬಳ್ಳಾರಿವರೆಗೆ ಬರುವ ಪ್ರತಿ ಹಳ್ಳಿಗಳಲ್ಲಿ ಜಾಥಾದ ಸದಸ್ಯರು ಸ್ಥಳೀಯ ಸಭೆಗಳನ್ನು ನಡೆಸುವ ಮೂಲಕ ಉಕ್ಕಿನ ಕಾರ್ಖಾನೆಯ ಬಗ್ಗೆ ಜಾಗೃತಿ ಮೂಡಿಸುತ್ತಿದ್ದರು. ಇವರ ಸ್ಫೂರ್ತಿಯುತ ಹೋರಾಟಕ್ಕೆ ಹಳ್ಳಿಯ ಜನರು ಹೋರಾಟದ ನಿಧಿ, ಊಟ ಒದಗಿಸುವ ಮೂಲಕ ಬೆಂಬಲ ನೀಡುತ್ತಿದ್ದರು. ಹಾಗೆಯೇ ಆ ಹಳ್ಳಿಗಳ ಉತ್ಸಾಹಿ ತರುಣರು ತಮ್ಮ ಸೈಕಲ್ಲುಗಳೊಂದಿಗೆ ತಾವು ಸಹಾ ಜಾಥಾದೊಂದಿಗೆ ಹೊರಡುತ್ತಿದ್ದರು. ಹೀಗಾಗಿ ಹೊಸಪೇಟೆಯಲ್ಲಿ

ಜಾಥಾ ಪ್ರಾರಂಭವಾದಾಗ ಕೇವಲ ೨೫೦ ಸದಸ್ಯರಿದ್ದ ಸೈಕಲ್ ಜಾಥಾ ಬಳ್ಳಾರಿ ತಲುಪುವುದರೊಳಗಾಗಿ ಈ ಸದಸ್ಯರ ಸಂಖ್ಯೆ ೪೦೦ ಆಗಿತ್ತೆಂದು ಅಂದಿನ ಹೋರಾಟದ ಮುಂಚೂಣಿಯಲ್ಲಿದ್ದ ಸಿದ್ದಲಿಂಗಪ್ಪ, ಪರಶುರಾಮ್ ಕಲಾಲ್‌ರವರು ಸ್ಮರಿಸುತ್ತಾರೆ. ಈ ಜಾಥಾದ ಮತ್ತೊಂದು ಬೆಳವಣಿಗೆಯೆಂದರೆ ಜಾಥಾದ ಸದಸ್ಯರಲ್ಲಿ ಕೆಲವರು ಕ್ರಾಂತಿಗೀತೆಗಳನ್ನು ಹಾಡುತ್ತಿದ್ದರಿಂದ ಇದರಿಂದ ಪ್ರಭಾವಕ್ಕೆ ಒಳಗಾದ ಮಾರ್ಗದ ಹಳ್ಳಿಗಳ ಕೆಲವು ಯುವಕರೂ ಈ ಹಾಡುಗಳನ್ನು ಇಷ್ಟಪಟ್ಟು ಆ ಹಾಡನ್ನು ತಾವು ಕಲಿತುಕೊಳ್ಳಲು ಹಂಬಲಿಸಿದ್ದು, ಇದು ಸಮುದಾಯದಂತಹ ಸಾಂಸ್ಕೃತಿಕ ಸಂಘಟನೆಗೆ ಬುನಾದಿ ಹಾಕಿತೆಂದು ತಿಳಿದುಬರುತ್ತದೆ. ಅಂದು ಬಳ್ಳಾರಿಯಲ್ಲಿ ಕೆಲವು ಮುಖಂಡರೂ ಸೇರಿದಂತೆ ಒಂದು ದೊಡ್ಡ ಚಳುವಳಿಯಾಗಿದ್ದ ಸೈಕಲ್ ಜಾಥಾ ಪ್ರಯುಕ್ತ ಅಂದಿನ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿ ವಿಜಯನಗರ ಉಕ್ಕಿನ ಕಾರ್ಖಾನೆಗೆ ಒತ್ತಾಯ ಪಡಿಸಲಾಗಿತ್ತು.

ಬಿ.ಟಿ. ರಣದಿವೆಯೆಂದರೆ ಕಾರ್ಮಿಕರ ಪಾಲಿಗೆ ರೋಚಕವಾದ ದಂತಕಥೆ, ದುಡಿಯುವ ಜನ ವರ್ಗದ ದೈವತಾರೆಯೆಂದೇ ಖ್ಯಾತಿ ಪಡೆದಿರುವ ಬಿ.ಟಿ. ಆರ್. ರವರು ಒಬ್ಬ ಸ್ವತಂತ್ರ್ಯ ಹೋರಾಟಗಾರರು ಕಾರ್ಮಿಕ ಮುಂದಾಳಾಗಿ, ಉತ್ತಮ ಸಂಸದೀಯ ಪಟುವಾಗಿ ದುಡಿಯುವ ಜನತೆಯ ಆಶಾಕಿರಣವಾಗಿ ಜೀವನ ಪೂರ್ತಿ ಕಮ್ಯುನಿಸ್ಟ್ ಪಕ್ಷದ ಒಬ್ಬ ನಿಷ್ಠಾವಂತ ಕಾರ್ಯಕರ್ತರಾಗಿದ್ದ ಬಿ.ಟಿ.ರಣದಿವೆಯವರು ಅನಾರೋಗ್ಯ ಪೀಡಿತರಾಗಿ ಏಪ್ರಿಲ್ ೬, ೧೯೯೧ ರಂದು ಕೊನೆ ಉಸಿರೆಳೆದರು. ಇವರ ಸ್ಮರಣಾರ್ಥ ಇವರು ಸತ್ತ ದಿನದಂದೇ ಹೊಸಪೇಟೆ ನಗರದ ಆರ್.ಟಿ.ಓ. ಕಛೇರಿಯ ಹಿಂಭಾಗದ ಪ್ರದೇಶದಲ್ಲಿ ಕೂಲಿಕಾರರ, ಕಾರ್ಮಿಕರ ದುಡಿಯುವ ಜನರ ವಾಸದ ಹೊಸ ನಗರವನ್ನು ಬಿ.ಟಿ.ರಣದಿವೆ ನಗರವೆಂದು ನಾಮಕರಣ ಮಾಡಿ ಈ ಹೊಸ ಪ್ರದೇಶವನ್ನು ಉದ್ಘಾಟಿಸಲಾಯಿತು. ಈ ನಗರದ ಉದಯಕ್ಕೆ ತನ್ನದೇ ಆದ ಚರಿತ್ರೆಯಿದೆ.

ಮೆಹತಾ ರೈಸ್ ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರಾದ ಹನುಮಂತಪ್ಪ, ಮೊಮ್ಮಣ್ಣರವರು ಚಿತ್ತವಾಡ್ಗಿಯ ಅತಿಥಿ ಗೃಹದ ಹಿಂಭಾಗದ ಬಯಲು ಜಾಗದಲ್ಲಿ ಇತರೆ ಕಾರ್ಮಿಕರೊಂದಿಗೆ ಗುಡಿಸಲುಗಳನ್ನು ಹಾಕಿಕೊಂಡು ಬಹಳ ವರ್ಷಗಳಿಂದ ವಾಸ ಮಾಡುತ್ತಿದ್ದರು. ಹೀಗಿದ್ದಾಗ ಅಂದಿನ ಪ್ರದೇಶಾಭಿವೃದ್ಧ ಮಂಡಳಿ (C.I.T.B.) ಯವರು ಈ ಗುಡಿಸಲಿನಲ್ಲಿ ನೆಲೆಸಿದ್ದ ಬಹುತೇಕ ಕಾರ್ಮಿಕರನ್ನು ಒಕ್ಕಲೆಬ್ಬಿಸಲು ಕ್ರಮ ತೆಗೆದುಕೊಂಡರು. ಮೆಹತಾ ರೈಸ್ ಮಿಲ್ಲಿನ ಕಾರ್ಮಿಕರೂ ಇದರಲ್ಲಿದ್ದುದರಿಂದ ರೈಸ್ ಮಿಲ್ಲಿನ ಕಾರ್ಮಿಕರ ಚಳುವಳಿಯಲ್ಲಿ ಇವರೂ ಸಕ್ರಿಯ ಸದಸ್ಯರಾಗಿದ್ದರಿಂದ ಕಾರ್ಮಿಕ ಮುಖಂಡರಿಗೆ ಈ ವಿಷಯ ಗೊತ್ತಾಗಿ ಮತ್ತೊಂದು ಯುವಜನ ಸಂಘಟನೆಯಾದ ಭಾರತ ಪ್ರಜಾಸತ್ತಾತ್ಮಕ ಸಂಘಟನೆಯ ನೆರವಿನೊಂದಿಗೆ ಈ ಕಾರ್ಮಿಕರನ್ನು ಒಕ್ಕಲೆಬ್ಬಿಸುವ ಮಂಡಳಿಯ ಕ್ರಮದ ವಿರುದ್ಧ ಹೋರಾಟವನ್ನು ರೂಪಿಸಲಾಯಿತು. ಒಕ್ಕಲೆಬ್ಬಿಸುವಿಕೆಯ ವಿರುದ್ದ ಆ ಕಾರ್ಮಿಕರ ಪರವಾಗಿ ಪ್ರಜಾ ಸತ್ತಾತ್ಮಕ ಯುವಜನ ಫೆಡರೇಶನ್ ವತಿಯಿಂದ ಈ

ಸಮಸ್ಯೆಯನ್ನು ತೆಗೆದುಕೊಂಡು ಮನವಿ ಪತ್ರ ಸಲ್ಲಿಸಲಾಯಿತು. ಪ್ರದೇಶಾಭಿವೃದ್ಧಿ ಮಂಡಳಿಯ ಅಧ್ಯಕ್ಷರು ಮತ್ತು ಸಹಾಯಕ ಆಯುಕ್ತರು ಈ ಸ್ಥಳದ ಬದಲಿಗೆ ಸೂಕ್ತವಾದ ಸರಕಾರಿ ಜಾಗವನ್ನು ಆರಿಸಿಕೊಳ್ಳಲು ಸಲಹೆ ನೀಡಿದ ಮೇರೆಗೆ ಡಿ.ವೈ. ಎಫ್.ಐ. ಸಂಘಟನೆಯ ಮುಖಂಡರು ಸೂಕ್ತ ಸ್ಥಳಕ್ಕಾಗಿ ಹಲವು ಜಾಗಗಳನ್ನು ಪರಿಶೀಲಿಸಿದರು. ಕೊನೆಗೆ ಈಗ ರಚಿಸಲಾಗಿರುವ ಬಿ.ಟಿ.ಆರ್. ನಗರದ ಜಮೀನು ಸೂಕ್ತವಾದುದೆಂದು ಅದನ್ನು ಪರ್ಯಾಯವಾಗಿ ಒದಗಿಸಲು ಕೋರಲಾಯಿತು.

ಈ ಜಾಗವು ನೀರಾವರಿ ಇಲಾಖೆಗೆ ಲೀಜ್ ಆಧಾರದ ಮೇಲೆ ಕೊಡಲಾಗಿದೆಯೆಂದು ಬಲಿಷ್ಠ ಜಾತಿಯ ಗುಂಪೊಂದು ಅಡ್ಡಿ ಪಡಿಸಲು ಆರಂಭಿಸಿತು. ಅವರ ಎಲ್ಲಾ ಅಡೆತಡೆಗಳನ್ನು ಸರಕಾರದ ಬೆಂಬಲದೊಂದಿಗೆ ಹಿಮೆಟ್ಟಿಸಲಾಯಿತು. ಪ್ರಾರಂಭದಲ್ಲಿ ಕೆಲವು ಗುಡಿಸಲುಗಳನ್ನು ಮಾತ್ರ ಹಾಕಲಾಗಿತ್ತು. ಹಾಕಿರುವ ಗುಡಿಸಲುಗಳನ್ನು ತೆರೆಸಲು ಏನೆಲ್ಲಾ ಪ್ರಯತ್ನಗಳನ್ನು ಮಾಡಿದರೂ, ಗುಡಿಸಲಿಗೆ ಬೆಂಕಿ ತಾಗಲೆಂದು, ಬೇಕೆಂದೇ ಗುಡ್ಡದ ಹುಲ್ಲಿಗೆ ಬೆಂಕಿ ಹಚ್ಚಿ ತೊಂದರೆ ಕೊಡಲೂ ಆರಂಭಿಸಿದರು. ಕಾರ್ಮಿಕರು ಹಗಲು ಕೆಲಸಕ್ಕೆ ಹೋದಾಗ ಗುಡಿಸಲಲ್ಲಿರುತ್ತಿದ್ದ ಹೆಣ್ಣು ಮಕ್ಕಳನ್ನು ಬೆದರಿಸುವ ತಂತ್ರವೂ ನಡೆಯಿತು. ಈ ಎಲ್ಲಾ ಕಿರುಕುಳಗಳನ್ನು ಕಾರ್ಮಿಕರ ಒಗ್ಗಟ್ಟಿನಿಂದ ಸಮರ್ಥವಾಗಿ ವಿರೋಧಿಸಿ ಈ ನಗರದ ಅಭಿವೃದ್ಧಿಗೆ ಶ್ರಮಿಸಲಾಯಿತೆಂದು ತಿಳಿದು ಬರುತ್ತದೆ.

ಈ ಎಲ್ಲಾ ಪ್ರತಿರೋಧದ ನಡುವೆ ಈ ಸ್ಥಳದಲ್ಲಿ ೨೦'x ೪೦' ಅಳತೆಯ ನಿವೇಶನಗಳಾಗಿ ವಿಂಗಡಿಸಿ ವಸತಿ ವಂಚಿತರೊಂದಿಗೆ ಇತರೆ ಕೆಲವು ಕಾರ್ಮಿಕರಿಗೂ, ಕಾರ್ಮಿಕ ಮುಂಖಂಡರಿಗೂ ಒಟ್ಟು ೧೮೦ ನಿವೇಶನಗಳನ್ನು ಹಂಚಿಕೆ ಮಾಡಲಾಗಿದ್ದು, ಇದರಲ್ಲಿ ಹಣಕಾಸಿನ ಅನುಕೂಲವಿದ್ದವರು ತಮ್ಮ ಹೆಸರಿಗೆ ನೋಂದಣಿ ಮಾಡಿಸಿದ್ದಾರೆ. ಇನ್ನು ಕೆಲವರು ಹಣಕಾಸಿನ ತೊಂದರೆಯಿಂದಾಗಿ ಇನ್ನೂ ತಮ್ಮ ಹೆಸರಿಗೆ ನೋಂದಣಿ ಮಾಡಿಸಿಕೊಂಡಿಲ್ಲ. ಆದರೆ ತಮ್ಮ ಸ್ವಂತ ವೆಚ್ಚದಿಂದ ಮನೆಗಳನ್ನು, ಗುಡಿಸಲುಗಳನ್ನು ಕಟ್ಟಿಸಿಕೊಂಡಿರುತ್ತಾರೆ. ಈ ಪ್ರದೇಶದಲ್ಲಿ ಒಟ್ಟು ೨೮೦ ಕುಟುಂಬಗಳು ವಾಸವಾಗಿದ್ದು ಇದರಲ್ಲಿ ಶೇ.೯೦ ರಷ್ಟು ಪರಿಶಿಷ್ಠ ಪಂಗಡ, ಪರಿಶಿಷ್ಠ ಜಾತಿಯವರಿದ್ದಾರೆ. ಲಿಂಗಾಯತ, ನೇಕಾರ, ಮುಸ್ಲಿಂ, ವೈಶ್ಯರ ಕೆಲವು ಕುಟುಂಬಗಳು ವಾಸ ಮಾಡುತ್ತಿವೆ.

## ೪.೯ : ವಿದ್ಯಾರ್ಥಿ ಸಾಂಘಿಕ ನೆಲೆ

ಸ್ವಾತಂತ್ರ್ಯ ಹೋರಾಟದಲ್ಲಿ ಮಹಾತ್ಮ ಗಾಂಧೀಜಿಯವರ ಕರೆಯ ಮೇರೆಗೆ ''ಬ್ರಿಟಿಷರೆ ಭಾರತ ಬಿಟ್ಟು ತೊಲಗಿರಿ'' ಚಳುವಳಿಯಲ್ಲಿ ಶಾಲಾ ಕಾಲೇಜುಗಳನ್ನು ತೊರೆದು ದೇಶದ ಬೇರೆಲ್ಲಾ ಕಡೆ ಸಕ್ರಿಯವಾಗಿ ಭಾಗವಹಿಸಿದಂತೆ ಹೊಸಪೇಟೆ ತಾಲೂಕಿನಲ್ಲಿಯೂ ವಿದ್ಯಾರ್ಥಿಗಳು ಶಾಲೆಗಳನ್ನು ತೊರೆದು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ಸ್ವಾತಂತ್ರ್ಯ ಹೋರಾಟದ ಚಳುವಳಿಯಲ್ಲಿ ಭಾಗವಹಿಸಿದ್ದ ಪ್ರಮುಖ ವಿದ್ಯಾರ್ಥಿಗಳೆಂದರೆ ಕೋರಿಶೆಟ್ರ ಜಂಬಣ್ಣ, ರಾರಾವಿ ವೀರಣ್ಣ, ಅಸುಂಡಿ ತಿರುಮಲರಾವ್, ಕಟ್ಟೆ ಶ್ರೀನಿವಾಸರಾವ್ ಮೊದಲಾದವರು. ಹೊಸಪೇಟೆ ತಾಲೂಕಿನ ಹಳ್ಳಿಗಳಿಗೆ ಹೋಗಿ ಇವರೆಲ್ಲಾ ಭಾಷಣ

ಮಾಡಿ ರೈತರು, ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕುವಂತೆ ಹುರಿದುಂಬಿಸುತ್ತಿದ್ದರು. ಇವರೆಲ್ಲರ ಶ್ರಮದಿಂದಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಹೊಸಪೇಟೆ ತಾಲೂಕಿನ ಕೊಡುಗೆ ಸ್ಮರಣೀಯವಾಗಿದೆ.

ಸ್ವಾತಂತ್ರ್ಯ ನಂತರದಲ್ಲಿಯೂ ವಿದ್ಯಾರ್ಥಿಗಳ ಸಾಮಾಜಿಕ ಸೇವೆ ನಾನಾ ರೂಪಗಳಲ್ಲಿ ವ್ಯಕ್ತವಾಗಿರುವುದು ಕಂಡು ಬರುತ್ತದೆ. ಆಚಾರ್ಯ ವಿನೋಭಭಾವೆಯವರು ಪ್ರಾರಂಭಿಸಿದ್ದ ಭೂದಾನ ಚಳುವಳಿಯಲ್ಲಿ ಹೊಸಪೇಟೆ ಮುನ್ಸಿಪಲ್ ಹೈಸ್ಕೂಲಿನ ಶಿಕ್ಷಕರಾದ ಕೆ.ನಾರಾಯಣಭಟ್ಟರ ಸಮರ್ಥ ಮಾರ್ಗದರ್ಶನದಲ್ಲಿ ಹೊಸಪೇಟೆ ತಾಲೂಕಿನ ಕಡ್ಡಿರಾಂಪುರ, ಅನಂತಶಯನಗುಡಿ ಗ್ರಾಮಗಳಲ್ಲಿ ಭೂದಾನ ಚಳುವಳಿಯ ಬಗ್ಗೆ ಜನಜಾಗೃತಿ ಉಂಟು ಮಾಡುತ್ತಿದ್ದರು. ಸ್ವದೇಶಿ ವಸ್ತುಗಳ ಬಳಕೆಯ ಬಗ್ಗೆ, ಅಕ್ಷರ ತಿಳುವಳಿಕೆಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನಗಳು ನಡೆದಿರುವುದು ಕಂಡು ಬರುತ್ತದೆ. ವಿಶೇಷವಾಗಿ ಖಾದಿ ಬಟ್ಟೆ ಧರಿಸುವ ಬಗ್ಗೆ, ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವ ಕುರಿತು ವ್ಯಾಪಕ ಜಾಗೃತಿ ಮೂಡಿಸುವ ಕೆಲಸವನ್ನು ತಾಲೂಕಿನ ವಿದ್ಯಾರ್ಥಿಗಳು ಶಿಕ್ಷಕರ ಮಾರ್ಗದರ್ಶನದಲ್ಲಿ ಮಾಡುತ್ತಿದ್ದರು. ಇದರ ಜೊತೆಗೆ 'ಸಾರಾಯಿ ಮಾರಾಟದ ವಿರುದ್ಧ' ಶಾಲೆಗಳ ಅಕ್ಕಪಕ್ಕದಲ್ಲಿ ಸರಾಯಿ ಅಂಗಡಿಗಳನ್ನು ತೆರೆಯುವುದರ ವಿರುದ್ಧ ಶಾಲಾ ವಿದ್ಯಾರ್ಥಿಗಳು ಪ್ರತಿಭಟನೆ ಮಾಡಿರುವುದು ಕಂಡು ಬರುತ್ತದೆ. ತಾಲೂಕಿನಾದ್ಯಂತ ಹಲವು ಗ್ರಾಮಗಳಲ್ಲಿ ಸ್ವಚ್ಛತಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಮಕ್ಕಳಲ್ಲಿ ಸೇವಾ ಮನೋಭಾವ ಜಾಗೃತಿ ಮೂಡಿಸುವ ಕಾರ್ಯಕ್ರಮಗಳು ಜರುಗಿರುವುದು ಕಂಡು ಬರುತ್ತದೆ.

ರಾಷ್ಟ್ರಮಟ್ಟದಲ್ಲಿ ಅಸ್ತಿತ್ವದಲ್ಲಿದ್ದ ಎರಡು ಪ್ರಮುಖ ವಿದ್ಯಾರ್ಥಿ ಸಂಘಟನೆಗಳಾದ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತು ಮತ್ತು ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್ನಿನ ಘಟಕಗಳಿದ್ದರೂ ಇವು ಕೇವಲ ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದಕ್ಕಷ್ಟೇ ಸೀಮಿತ ಮಾಡಿಕೊಂಡ ನಿದರ್ಶನಗಳು ಕಾಣುತ್ತವೆ. ದೇಶದಲ್ಲಿ ತುರ್ತು ಪರಿಸ್ಥಿತಿಯ ನಂತರ ಬೆಳೆದು ಬಂದ ಜನಾಂದೋಲನದ ಭಾಗವಾಗಿ ಹೊಸಪೇಟೆ ತಾಲೂಕಿನಲ್ಲಿಯೂ ವಿದ್ಯಾರ್ಥಿ ಸಾಂಘಿಕ ನೆಲೆ ಹೆಚ್ಚು ಕ್ರಿಯಾಶೀಲವಾಗಿ ರೂಪುಗೊಂಡಿದ್ದು ಕಂಡು ಬರುತ್ತದೆ. ಸೈದ್ಧಾಂತಿಕ ಭಿನ್ನಾಭಿಪ್ರಾಯದಿಂದಾಗಿ ಮಾರ್ಕ್ಸ್‌ವಾದಿ ಕಮ್ಯುನಿಷ್ಟ ಪಕ್ಷದ ವಿದ್ಯಾರ್ಥಿ ಸಂಘಟನೆ ಭಾರತ ವಿದ್ಯಾರ್ಥಿ ಫೆಡರೇಷನ್ ಘಟಕ ವಿದ್ಯಾರ್ಥಿ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವುದು ತಿಳಿದು ಬರುತ್ತದೆ. ಜನಸಂಘ ಪರಿವಾರದ ವಿದ್ಯಾರ್ಥಿ ಸಂಘಟನೆಯಾದ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತು ಸಹಾ ಜೊತೆ ಜೊತೆಗೆ ಹೊಸಪೇಟೆ ತಾಲೂಕಿನಲ್ಲಿ ಚಟುವಟಿಕೆಗಳನ್ನು ನಡೆಸಿರುವುದು ತಿಳಿದುಬರುತ್ತದೆ. ಸೈದ್ಧಾಂತಿಕ ಭಿನ್ನ ತಳಹದಿಯನ್ನು ಹೊಂದಿದ್ದು, ಈ ಸಂಘಟನೆಗಳು ಪರಸ್ಪರ ವಿರುದ್ಧವಾದ ಬೇಡಿಕೆಗಳನ್ನಿಟ್ಟು ವಿದ್ಯಾರ್ಥಿಗಳಲ್ಲಿ ಗೊಂದಲವನ್ನು ಸೃಷ್ಟಿಸಿದ ಉದಾಹರಣೆಗಳಿವೆ. ರಾಜ್ಯ ಹಾಗೂ ಕೇಂದ್ರ, ಸಮಿತಿಗಳ ಕರೆಯ ಮೇರೆಗೆ ನಡೆದ ಅನೇಕ ಚಳುವಳಿಗಳನ್ನು ಆಯೋಜಿಸುವುದರ ಜೊತೆಗೆ ಸ್ಥಳೀಯ ವಿದ್ಯಾರ್ಥಿಗಳ ದೈನಂದಿನ ಸಮಸ್ಯೆಗಳ ಬಗ್ಗೆಯೂ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಿರುವ ನಿದರ್ಶನಗಳು ಕಂಡು ಬರುತ್ತವೆ.

ಭಾರತ ವಿದ್ಯಾರ್ಥಿ ಫೆಡರೇಷನ್ ವಿದ್ಯಾರ್ಥಿ ಸಂಘಟನೆ ತುರ್ತುಪರಿಸ್ಥಿತಿಯ ನಂತರ ಅನೇಕ ಜನಪದ ಹೋರಾಟಗಳಿಗೆ, ಪ್ರಗತಿಪರ ಸಂಘಟನೆಗಳಿಗೆ 'ಕೇಡರ್'ಗಳನ್ನು ಒದಗಿಸಿದ ಖ್ಯಾತಿಗೆ ಒಳಗಾಗಿದೆ. ವಿದ್ಯಾರ್ಥಿ ದೆಸೆಯಿಂದಲೇ ಹೋರಾಟದಲ್ಲಿ ನಾಯಕತ್ವವಹಿಸಿದ್ದ ಅನೇಕ ಮುಖಂಡರು ಯುವಜನರ ಕಾರ್ಮಿಕರ, ರೈತರ ಮತ್ತು ದುರ್ಬಲರ ಸಂಘಟನೆಗಳಲ್ಲಿ ಇಂದು ರಾಜ್ಯಮಟ್ಟ ನಾಯಕರಾಗಿ ಬೆಳೆದಿರುವುದು ಕಂಡು ಬರುತ್ತದೆ. ದಲಿತ ಸಂಘಟನೆಯಲ್ಲಿಯೂ ಮುಂಚೂಣಿ ನಾಯಕರನ್ನು ಕೊಟ್ಟ ಹೆಗ್ಗಳಿಕೆ ಎಡಪಂಥೀಯ ವಿದ್ಯಾರ್ಥಿಸಂಘಟನೆಯಾದ ಎಸ್. ಎಫ್.ಐ. ಸಂಘಟನೆಗೆ ಸೇರುತ್ತದೆ. ಇಂದಿಗೂ ಹೊಸಪೇಟೆ ತಾಲೂಕಿನಲ್ಲಿ ಸಕ್ರಿಯವಾಗಿರುವ ಎರಡು ಪ್ರಮುಖ ಸಂಘಟನೆಗಳೆಂದರೆ ಎಸ್.ಎಫ್.ಐ. ಮತ್ತು ಎ. ಬಿ. ವಿ.ಪಿ. ಸಂಘಟನೆಗಳು. ತಮ್ಮ ವಿಭಿನ್ನ ಬೇಡಿಕೆ ಮತ್ತು ಸಿದ್ಧಾಂತಗಳ ಆಧಾರದ ಮೇಲೆ ಸ್ಥಳೀಯ ವಿದ್ಯಾರ್ಥಿಗಳ ಸಾಮಾನ್ಯ ಬೇಡಿಕೆಗಳಾದ ಹಾಸ್ಟೆಲ್ ಸೌಲಭ್ಯ, ಕಾಲೇಜುಗಳ ಹೆಚ್ಚಳ, ಕ್ಯಾಪಿಟೇಶನ್, ಡೊನೇಷನ್ ಹಾವಳಿ ವಿರುದ್ಧ ಇವತ್ತಿಗೂ ಪರಿಣಾಮಕಾರಿಯಾಗಿ ವಿದ್ಯಾರ್ಥಿಗಳನ್ನು ಸಂಘಟಿಸುವುದರಲ್ಲಿ ಶ್ರಮಿಸುತ್ತಿರುವುದು ಕಂಡು ಬರುತ್ತದೆ.

## ೪.೧೦ : ಧಾರ್ಮಿಕ ಸಾಂಘಿಕ ನೆಲೆ

ಹೊಸಪೇಟೆ ತಾಲೂಕಿನ ವಿಭಿನ್ನ ಧರ್ಮಗಳ ಜನರು ವಾಸಿಸುತ್ತಿದ್ದಾರೆ. ಪ್ರಮುಖ ಧರ್ಮಗಳೆಂದರೆ ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ, ಸಿಖ್, ಪಾರ್ಸಿ. ಪ್ರತಿಯೊಂದು ಧರ್ಮದವರೂ ತಮ್ಮದೇ ಆದ ವಿವಿಧ ಮಠಗಳು, ಆಶ್ರಮಗಳು, ಮಸೀದಿಗಳು, ಚರ್ಚುಗಳು, ಮಂದಿರಗಳು ವಿಪುಲವಾಗಿ ಕಂಡು ಬರುತ್ತಿರುವುದನ್ನು ನೋಡಬಹುದಾಗಿದೆ. ಪ್ರತಿಯೊಂದು ಧರ್ಮಗಳು ಪ್ರತ್ಯೇಕ ದೈವ, ಆಚರಣೆಗಳನ್ನು ಹೊಂದಿದ್ದರೂ, ವಿವಿಧ ಧರ್ಮಗಳ ನಡುವೆ ಸಾಮರಸ್ಯ ಹೆಚ್ಚಾಗಿ ಕಂಡುಬರುತ್ತದೆ. ಹೀಗಾಗಿ ಹೊಸಪೇಟೆ ತಾಲೂಕಿನಲ್ಲಿ ಕೋಮು ಗಲಭೆಗಳು ಬಹಳ ವಿರಳವೆಂದೇ ಹೇಳಬಹುದು. ಹಿಂದೂ ಮತ್ತು ಮುಸ್ಲೀಂ ಧರ್ಮಿಯರಲ್ಲಿ ಸಾಮರಸ್ಯವನ್ನು ವೃದ್ಧಿಸುವ ನಿಟ್ಟಿನಲ್ಲಿ ಪ್ರತಿವರ್ಷವೂ ನಡೆಯಲಿರುವ ''ಪೀರಲು'' ದೇವರ ಹಬ್ಬ ಎರಡೂ ಧರ್ಮಗಳ ಜನರನ್ನು ಸಾಂಸ್ಕೃತಿಕವಾಗಿ ಒಗ್ಗೂಡಿಸುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಜಿಲ್ಲಾ 'ಗೆಜಿಟಿಯರ್'ನಲ್ಲಿ ಉಲ್ಲೇಖವಾಗಿರುವಂತೆ ಹಿಂದೂ-ಮುಸ್ಲಿಂ ಸಹಜೀವನ ಇಲ್ಲಿದ್ದಷ್ಟು ಹಾರ್ದಿಕವಾಗಿ ಎಲ್ಲಿಯೂ ಇಲ್ಲವೆನ್ನುವ ಉಲ್ಲೇಖ ಸ್ಮರಣೀಯವಾದುದು.

ಹಿಂದೂ, ಮುಸ್ಲೀಂರಂತೆ ಜೈನರೂ ಸ್ಥಳೀಯ ಜನರಾಗಿದ್ದಾರೆ. ಧಾರ್ಮಿಕ ವಿಷಯಗಳನ್ನು ಬಿಟ್ಟರೆ ಹಿಂದೂಗಳಿಗೂ, ಜೈನರಿಗೂ ಅಂಥಹ ಭೇದಗಳಿರುವುದಿಲ್ಲ. ಆಧುನಿಕ ಹಾಗೂ ವೈಜ್ಞಾನಿಕ ವರ್ಚಸ್ಸು ಬೆಳೆದಂತೆ ಭೇದ ಕಡಿಮೆಯಾಗುತ್ತ ನಡೆದಿದೆ.

ಹೊಸಪೇಟೆ ತಾಲೂಕಿನಲ್ಲಿ ಹಿಂದುಳಿದ ಜಾತಿಗಳಾದ ನಾಯಕ, ವಾಲ್ಮೀಕಿ, ಕುರುಬ, ಗಂಗಾಮತ, ಹರಿಜನ, ಬೋವಿ ಸಮುದಾಯಗಳು ಹೆಣ್ಣು ದೇವತೆಗಳ ಆರಾಧಕರಾಗಿದ್ದು, ಮೇಲ್ಜಾತಿಗಳಾದ ಬ್ರಾಹ್ಮಣ, ಲಿಂಗಾಯತರು ಪುರುಷ ಪ್ರಧಾನ ದೇವತೆಗಳನ್ನು ಆರಾಧಿಸುತ್ತಿರುವುದು ಕಂಡು ಬರುತ್ತದೆ. ಹೀಗಾಗಿ ಹೊಸಪೇಟೆ ತಾಲೂಕಿನಾದ್ಯಂತೆ ಪುರುಷ ದೇವಾಲಯಗಳಿಗಿಂತ ಸ್ತ್ರೀ ದೇವಾಲಯಗಳನ್ನೇ ಹೆಚ್ಚಾಗಿ ಕಾಣಬಹುದಾಗಿದೆ.

ಧಾರ್ಮಿಕ ಸಾಮರಸ್ಯವನ್ನೇ ತನ್ನ ಕಾರ್ಯ ಚಟುವಟಿಕೆ ಮಾಡಿಕೊಂಡ ಅನೇಕ ಸಂಘಟನೆಗಳು ಹೊಸಪೇಟೆಯಲ್ಲಿರುವುದು ತಿಳಿದು ಬರುತ್ತದೆ. ಖಾದರ್ ಲಿಂಗೇಶ್ವರ ಸ್ವಾಮಿಯ ಹೆಸರಿನಲ್ಲಿರುವ ಸಂಘಟನೆ ಹೊಸಪೇಟೆಯ ಚಿತ್ತವಾಡಿಗಿಯಲ್ಲಿದ್ದು ಈ ಸಂಘದ ಪ್ರಮುಖ ಉದ್ದೇಶವೇ ತನ್ನ ಪ್ರದೇಶದಲ್ಲಿ ವಿವಿಧ ಧರ್ಮಗಳ ನಡುವೆ ಸೌಹಾರ್ದತೆಯನ್ನು ಕಾಪಾಡುವುದಾಗಿದೆ. ಆಂಜಿನೇಯ ಮತ್ತು ದರ್ಗಾಗಳೆರಡನ್ನು ಒಂದೇ ಕಟ್ಟಡದಲ್ಲಿ ಸ್ಥಾಪಿಸಿ ಆ ಮೂಲಕ ಕೋಮು ಗಲಭೆಗಳನ್ನು ತಡೆಗಟ್ಟಲು ಶ್ರಮಿಸುತ್ತಿರುವುದು ಮಾದರಿಯಾಗಿದೆ. ಅದೇ ರೀತಿ ಹೊಸಪೇಟೆ ಪಟ್ಟಣದಲ್ಲಿ ಭಾವೈಕ್ಯತಾ ವೇದಿಕೆಯ ನೇತೃತ್ವದಲ್ಲಿ ಹಿಂದೂ ಮುಸ್ಲೀಂ ಧರ್ಮಿಯರ ನಡುವೆ ಸಾಮರಸ್ಯವನ್ನು ಕಾಪಾಡುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದು ಇದೂ ಸಹಾ ಶ್ಲಾಘನೀಯವಾಗಿದೆ ಎಂದು ಹೇಳಬಹುದು. ಈ ರೀತಿಯ ಪ್ರಯತ್ನಗಳು ಇತರೆ ಪ್ರದೇಶಗಳಿಗೂ ವಿಸ್ತರಿಸುವ ಅವಶ್ಯಕತೆ ಇದೆ.

## ೪.೧೧: ಅಲಕ್ಷಿತ ವಲಯಗಳ ಸಾಂಘಿಕ ನೆಲೆಗಳು

ಸ್ವಾತಂತ್ರ್ಯ ನಂತರದಲ್ಲಿ ಸ್ವಾತಂತ್ರ ಭಾರತದ ದೇಶೀಯ ಸರಕಾರ ಹಮ್ಮಿಕೊಂಡ ಹಲವು ಯೋಜನೆಗಳಲ್ಲಿ ದೇಶದ ಕೃಷಿ ಅವಲಂಬಿತ ರೈತರ ಜೀವನ ಮಟ್ಟವನ್ನು ಉತ್ತಮ ಪಡಿಸುವುದು ಒಂದಾಗಿದೆ. ಅದರಲ್ಲೂ ಪಂಚವಾರ್ಷಿಕ ಯೋಜನೆಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕೃಷಿಗೆ ನೀಡಲಾಗಿದ್ದರೂ ಕೃಷಿ ಬೆಳವಣಿಗೆಯ ಮೇಲೆ, ಇದನ್ನೇ ನಂಬಿ ಬದುಕು ಸಾಗಿಸುತ್ತಿರುವ ದೇಶದ ಒಟ್ಟು ಜನಸಂಖ್ಯೆ ಶೇ.೭೦ ರಷ್ಟು ಜನರ ಬದುಕು ಮಾತ್ರ ನಿರೀಕ್ಷೆಗೆ ತಕ್ಕಷ್ಟು ಉತ್ತಮವಾಗಿಲ್ಲ. ಈ ಹಿನ್ನೆಲೆಯಲ್ಲಿ ಹೊಸಪೇಟೆ ತಾಲೂಕಿನ ಅತ್ಯಂತ ಪ್ರಮುಖ ವಲಯ ಕೃಷಿ ಕ್ಷೇತ್ರವನ್ನು ಕಳೆದ ಒಂದು ವರ್ಷದಲ್ಲಿ ಗಮನಿಸಿದಾಗ ಹಲವು ವಿಚಾರಗಳು ನನ್ನ ಗಮನ ಸೆಳೆದವು.

ಹೊಸಪೇಟೆ ತಾಲೂಕಿನ ಪ್ರಮುಖ ಸಾಂಘಿಕ ನೆಲೆಗಳಲ್ಲಿ ಕೃಷಿ ಕ್ಷೇತ್ರದ ಸಾಂಘಿಕ ನೆಲೆ ಪ್ರಧಾನವಾದುದು, ಎರಡು ದೃಷ್ಠಿಯಿಂದ ಈ ವಲಯವನ್ನು ನೋಡಬಹುದು. ಒಂದು ಈ ಕ್ಷೇತ್ರದಲ್ಲಿ ಈಗಾಗಲೇ ಆಗಿರುವ ಸಾಂಘಿಕ ಪ್ರಯತ್ನ, ಮತ್ತೊಂದು ಹೇರಳವಾದ ಸಾಂಘಿಕ ನೆಲೆ ಇದ್ದರೂ ಸಾಂಘಿಕ ನಿರ್ಲಕ್ಷತನ ಕಂಡು ಬರುವುದು. ಈ ಎರಡು ಪ್ರಮುಖ ಸಂಗತಿಗಳ ಹಿನ್ನೆಲೆಯಲ್ಲಿ ನಾನು ನನ್ನ ಬರವಣಿಗೆಯನ್ನು ಕೇಂದ್ರೀಕರಿಸಬಯಸುತ್ತೇನೆ.

ಹೊಸಪೇಟೆ ತಾಲೂಕಿನ ೪ ಕಂದಾಯ ಹೋಬಳಿಗಳೆಂದರೆ ಕಮಲಾಪುರ, ಕಂಪ್ಲಿ, ಗಾದಿಗನೂರು ಹಾಗೂ ಮರಿಯಮ್ಮನಹಳ್ಳಿ ಹೋಬಳಿಗಳು ಸ್ವಾತಂತ್ರ ಹೋರಾಟದ ಹಿನ್ನೆಲೆಯಲ್ಲಿ ಈ ಹೋಬಳಿಗಳಿಗೆ ವೈವಿದ್ಯಮಯ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಬೆಳವಣಿಗೆಗಳನ್ನು ಹೊಂದಿದೆ. ೧೯೪೬ರಲ್ಲಿ ಆರಂಭಗೊಂಡ ಈ ಭಾಗದ ಪ್ರಮುಖ ನೀರಾವರಿ ಮೂಲವಾದ ತುಂಗಭದ್ರಾ ಜಲಾಶಯದ ನೀರಾವರಿ ಪ್ರದೇಶವನ್ನು ಕಮಲಾಪುರ ಮತ್ತು ಕಂಪ್ಲಿ ಹೋಬಳಿಗಳು ಹೊಂದಿದ್ದರೆ, ತುಂಗಭದ್ರಾ ನದಿಯನ್ನು ಪಕ್ಕದಲ್ಲಿಯೇ ಹೊಂದಿದ್ದರೂ ಮರಿಯಮ್ಮನಹಳ್ಳಿ ಹೋಬಳಿಯ ಬಹುತೇಕ ಗ್ರಾಮಗಳು ನೀರಾವರಿ ಅನುಕೂಲ ಒತ್ತಟ್ಟಿಗಿರಲಿ, ಕನಿಷ್ಠ ಪಕ್ಷ ಎಲ್ಲರಿಗೂ ಕುಡಿಯುವ ನೀರೂ ಸಹಾ ಸಿಕ್ಕಲಾರದು. ಕುಡಿಯುವ ನೀರಿನ ಸೂಕ್ತ ಯೋಜನೆಗಳನ್ನು ಕೈಗೊಳ್ಳಲು ಸ್ವಾತಂತ್ರ್ಯ ಭಾರತದ ಸರಕಾರಕ್ಕೆ ಈವರೆಗೂ ಸಾಧ್ಯವಾಗಿಲ್ಲ, ಗಾದಿಗನೂರು ಹೋಬಳಿಯ ಪರಿಸ್ಥಿತಿ ಇದಕ್ಕಿಂತಲೂ ಭಿನ್ನವಾಗಿಲ್ಲ. ಇತ್ತ ಹೊಸಪೇಟೆ, ಅತ್ತ ಸಂಡೂರು ತಾಲೂಕು ಕೇಂದ್ರಗಳಿಂದ ಸಮಾನ ದೂರದಲ್ಲಿರುವ ಗಾದಿಗನೂರು, ಹೋಬಳಿ ಗ್ರಾಮಗಳು ಅನೇಕ ಆಡಳಿತಾತ್ಮಕ ಸಮಸ್ಯೆಗಳ ನಡುವೆ ಬದುಕಬೇಕಾಗಿದೆ. ನೀರಾವರಿ ಅನುಕೂಲದಿಂದ ದೂರವೇ ಉಳಿದಿರುವ ಈ ಪ್ರದೇಶದ ಕೆಲವು ಗ್ರಾಮಗಳಲ್ಲಿ ಕುಡಿಯುವ ನೀರೂ ಸಿಗುವುದಿಲ್ಲ. ಇತ್ತೀಚೆಗೆ ತುಂಗಾಭದ್ರಾ ಜಲಾಶಯದಿಂದ ಜಿಂದಾಲ್ ವಿಜಯನಗರ ಕಾರ್ಖಾನೆಯವರು ನೀರು ಪಡೆಯಲು ಕೊಳವೆ ಮಾರ್ಗ ಅಳವಡಿಸಿದ್ದು ಮಾರ್ಗ ಮಧ್ಯದಲ್ಲಿ ಗಾದಿಗನೂರಿನ ಕೆಲವು ಗ್ರಾಮಗಳ ನಾಗರೀಕರಿಗೆ ಅಲ್ಲಲ್ಲಿ ಕುಡಿಯುವ ಅನುಕೂಲ ಕಲ್ಪಿಸಲಾಗಿದೆ. ಅಲ್ಲದೆ ಸಾಧ್ಯವಾದ ಕಡೆ ಗೋಕಟ್ಟೆಗಳನ್ನು ನಿರ್ಮಿಸಿದ್ದು ಜಾನುವಾರುಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಿದ್ದರೂ ಒಟ್ಟಾರೆ ಜನಸಂಖ್ಯೆಯ ದೃಷ್ಠಿಯಿಂದ ಇದು ಸಾಕಾಗಲಾರದು. ಹೊಸಪೇಟೆ ತಾಲೂಕಿನ ಕೃಷಿ ಕಾರ್ಮಿಕರ ಬಗ್ಗೆ ನಾವು ಅಧ್ಯಯನ ಮಾಡುವಾಗ ಮೇಲಿನ ಪರಿಸ್ಥಿತಿಯನ್ನು ಗಮನಿಸುವ ಅವಶ್ಯಕತೆಯ ಹಿನ್ನೆಲೆಯಲ್ಲಿ ಸಾಂಕೇತಿಕವಾಗಿ ಪ್ರಸ್ಥಾಪಿಸಿದ್ದೇನೆ. ಕೃಷಿ ಕೂಲಿಕಾರರಲ್ಲಿ ಶೇ.೮೦ ರಷ್ಟು ಮಹಿಳೆಯರಿದ್ದಾರೆ ಎಂದರೆ ತಪ್ಪಾಗುವುದಿಲ್ಲ. ಏಕೆಂದರೆ ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಪುರುಷ ವರ್ಗ ಯಾವುದೇ ಜಾತಿ, ಧರ್ಮದ್ದಾಗಿದ್ದರೂ ಮಹಿಳೆಯರ ಮೇಲಿನ ತನ್ನ ನಿಯಂತ್ರಣ ಅಥವಾ ಅಧಿಕಾರ ಬಿಟ್ಟುಕೊಟ್ಟಿಲ್ಲ. ನಮ್ಮ ಸಂವಿಧಾನದಲ್ಲಿ ಲಿಂಗಭೇದ ಸಲ್ಲದೆಂದು ಸ್ಪಷ್ಟವಾಗಿ ಹೇಳಿದ್ದರೂ ಸರಕಾರ ಸಾರ್ವಜನಿಕ ಸಂಘ, ಸಂಸ್ಥೆಗಳು ಮಹಿಳಾ ಸಮಾನತೆಯ ಅಗತ್ಯವನ್ನು ಪ್ರತಿಪಾದಿ ಸುತ್ತಿದ್ದರೂ ವಿಚಿತ್ರವೆಂದರೆ ಭಾರತದಲ್ಲಿ ಇಂದಿಗೂ ಮಹಿಳೆಯರಿಗೆ ನಿಜವಾದ ಅರ್ಥದಲ್ಲಿ ಸಮಾನತೆ ಸಿಕ್ಕಿಲ್ಲವೆಂದೇ ಹೇಳಬಹುದು. ಈ ಹಿನ್ನೆಲೆಯಲ್ಲಿ ಹೊಸಪೇಟೆ ತಾಲೂಕಿನಲ್ಲಿಯೂ ವಿಶೇಷವಾಗಿ ಕೃಷಿ ಕೂಲಿಕಾರರ ಕುಟುಂಬಗಳಲ್ಲಿ ಹೆಚ್ಚಿನವರು ಮಹಿಳಾ ಕೃಷಿ ಕೂಲಿಕಾರರಿದ್ದಾರೆ. ಪುರುಷರು ಮಹಿಳೆಯರ ದುಡಿಮೆಯ ಕೂಲಿಯನ್ನು ಖರ್ಚು ಮಾಡುವ ಅಧಿಕಾರವನ್ನು ಹೊಂದಿದ್ದಾರೆ. ಕೃಷಿ ಕೂಲಿಕಾರ ಮಹಿಳೆಯರು ಎರಡು ರೀತಿಯ ದುಡಿಮೆಯನ್ನು ನಿರ್ವಹಿಸುತ್ತಾರೆ. ಒಂದು ತನ್ನ ಮನೆಯ ಸಂಸಾರಕ್ಕೆ ಅಗತ್ಯವಾದ ಮನೆ ಕೆಲಸ, ಆಹಾರ ತಯಾರಿಸುವ, ಮನೆಯನ್ನು ಸ್ವಚ್ಛಗೊಳಿಸುವ, ಮಕ್ಕಳ ಮೂಲಭೂತ ಅಗತ್ಯಗಳನ್ನು ಪೂರೈಸುವ ಮಹತ್ತರ ಜವಾಬ್ದಾರಿಯ ಜೊತೆಗೆ ತನ್ನ ಸಂಸಾರದ ನಿರ್ವಹಣೆಗೆ ಅಗತ್ಯವಾದ ಆರ್ಥಿಕ ನೆರವಿಗಾಗಿ ತಾನು ಇತರೆ ಹೊಲಗದ್ದೆಗಳಲ್ಲಿ ದುಡಿದು ತನ್ನ ಗಂಡನಿಗೆ

ಹಣ ನೀಡುವುದು. ಇದು ಎಷ್ಟರ ಮಟ್ಟಿಗೆ ನಡೆಯುತ್ತದೆ ಎಂದರೆ ತಾನು ದುಡಿದ ಹಣವನ್ನು ತನಗಾಗಿ ಅಥವಾ ತನಗೆ ಇಷ್ಟ ಬಂದಂತೆ ಖರ್ಚು ಮಾಡುವ ಅಧಿಕಾರವೂ ಇಲ್ಲ. ಕೃಷಿ ಕೂಲಿಕಾರ ಮಹಿಳೆಯರ ಗಂಡಂದಿರಲ್ಲಿ ಬಹುತೇಕ ಅರೆ ಉದ್ಯೋಗಿಗಳನ್ನೂ ನಾವು ನೋಡಬಹುದಾಗಿದೆ. ತನ್ನ ಅಲ್ಪ ಉದ್ಯೋಗದಿಂದ ಬಂದ ಹಣವನ್ನು ಸಂಸಾರಕ್ಕೆ ಖರ್ಚು ಮಾಡಬಹುದು ಅಥವಾ ತನ್ನ ವ್ಯಕ್ತಿಗತ ದುಶ್ಚಟಗಳಿಗೆ ಖರ್ಚು ಮಾಡುವ ನಿದರ್ಶನಗಳೇ ಹೆಚ್ಚಿವೆ. ಕೆಲವು ಕುಟುಂಬಗಳಲ್ಲಿ ಮಹಿಳೆಯರ ಕೂಲಿಯಿಂದಲೇ ಇಡೀ ಕುಟುಂಬ ನಿಂತಿರುವದನ್ನ ಗಮನಿಸಬಹುದಾಗಿದೆ.

ಸರಕಾರದ ಕನಿಷ್ಠ ಕೂಲಿಯ ನಿಯಮ ಬಹುತೇಕ ಕೃಷಿ ಕೂಲಿಕಾರರಿಗೆ ಸಂಬಂಧವೇ ಹೊಂದಿರುವುದಿಲ್ಲವೆಂದು ನಿಷ್ಠುರವಾಗಿ ಹೇಳಲೇಬೇಕಾಗುತ್ತದೆ. ಕನಿಷ್ಠ ಹೆಣ್ಣಾಳಿಗೆ ಇಂತಿಷ್ಟು, ಗಂಡಾಳಿಗೆ ಇಂತಿಷ್ಟು ಸಮಾನ ಕೂಲಿ ಎಂದು ಸರಕಾರ ಹೇಳುವ ಸ್ಥಿತಿಯಲ್ಲಿ ಇಲ್ಲ. ಹೇಳಿದರೂ ಪ್ರಾಯೋಗಿಕವಾಗಿ ಅದು ಅನುಷ್ಠಾನಗೊಳ್ಳುವ ಸ್ಥಿತಿಯಲಿಲ್ಲ. ಹೊಸಪೇಟೆ ತಾಲೂಕಿನ ಒಂದೊಂದು ಕಂದಾಯದ ಹೋಬಳಿಗಳಲ್ಲಿ ಒಂದೊಂದು ರೀತಿಯ ಕೂಲಿಯ ಧರ ಇರುವುದನ್ನು ಗಮನಿಸಬಹುದು. ತುಂಗಭದ್ರಾ ಜಲಾಶಯದ ನೀರಾವರಿ ಪ್ರದೇಶದ ಆಯಕಟ್ಟು ಪ್ರದೇಶದ ಜಮೀನುಗಳಲ್ಲಿ ದುಡಿಯುವ ಕೃಷಿ ಕೂಲಿಕಾರರ ಕೂಲಿ, ಮಳೆ ಆಶ್ರಿತ ಪ್ರದೇಶದಲ್ಲಿ ದುಡಿಯುವ ಕೃಷಿ ಕೂಲಿಕಾರರಿಗಿಂತ ಹೆಚ್ಚಿರುವುದು ಸಹಜವಾಗಿ ಎದ್ದು ಕಾಣುತ್ತದೆ. ಮಳೆ ಆಶ್ರಿತ ಪ್ರದೇಶದ ಕೃಷಿ ಕೂಲಿಕಾರರು ನೀರಾವರಿ ಪ್ರದೇಶದ ಜಮೀನುಗಳಲ್ಲಿ ಹೆಚ್ಚಿನ ಕೂಲಿಯ ಆಸೆಗಾಗಿ ವಲಸೆ ಹೋಗುವ ಪರಿಪಾಠವಿದೆ. ನೀರಾವರಿ ಪ್ರದೇಶದ ಮಾಲೀಕರೂ ತಮ್ಮ ಟ್ರ್ಯಾಕ್ಟರ್ ಟ್ರಕ್ಕುಗಳಲ್ಲಿ ಮಳೆ ಆಶ್ರಿತ ಗ್ರಾಮಗಳ ಕೂಲಿಕಾರರನ್ನು ಬೆಳಿಗ್ಗೆ ಕರೆದುಕೊಂಡು ಹೋಗಿ ಸಂಜೆ ಹೊತ್ತು ಅದೇ ವಾಹನಗಳಲ್ಲಿ ಪುನಃ ಅವರವರ ಗ್ರಾಮಗಳಿಗೆ ತಂದು ಬಿಟ್ಟು ಹೋಗುವ ಪರಿಪಾಠ ಬೆಳೆದಿರುವುದನ್ನು ಗಮನಿಸಬಹುದು.

ಹೀಗೆ ಹೊಲ ಗದ್ದೆಗಳಲ್ಲಿ ದುಡಿಯುವ ಕೃಷಿ ಕೂಲಿಕಾರರಲ್ಲಿ ವಿವಿಧ ಜಾತಿ, ಧರ್ಮ, ಅಕ್ಷರಸ್ಥ, ಅನಕ್ಷರಸ್ಥ ಪುರುಷರಿದ್ದಾರೆ. ಹೆಚ್ಚಿನ ಸಂಖ್ಯೆ ಮಹಿಳೆಯರಿದ್ದಾರೆ. ಇವರೆಲ್ಲರ ಪ್ರಮುಖ ಉದ್ದೇಶ ಕೂಲಿಯನ್ನು ಗಳಿಸುವುದು ಆ ಮೂಲಕ ತಮ್ಮ ಹೊಟ್ಟೆ ಬಟ್ಟೆಯನ್ನು ಒದಗಿಸಿಕೊಳ್ಳುವುದು. ಅವರಿಗೆ ಧರ್ಮದ ಭೇದಗಳಿಲ್ಲ, ಜಾತಿಯ ಭೇದಗಳಿಲ್ಲ, ವರ್ಗದ ವ್ಯತ್ಯಾಸವಿಲ್ಲ ಇವರೆಲ್ಲಾ ಒಂದೇ ಜಾತಿ, ಒಂದೇ ಕೃಷಿಕೂಲಿಕಾರರು, ಇವರ ಆರ್ಥಿಕ ಜೀವನಕ್ಕಾಗಿ ಒಟ್ಟಾಗಿದ್ದಾರೆ, ನಿಜವಾದ ಜಾತ್ಯಾತೀತ ಬದುಕು ಎಂದರೆ ಇದು. ಅವರ ಮನೆಯಲ್ಲಿ ಮಾಡಿಕೊಂಡು ಬಂದ ಆಹಾರ ಪದಾರ್ಥಗಳನ್ನು ತಂದು ದುಡಿಮೆಯ ಮಧ್ಯದಲ್ಲಿ ಒಟ್ಟಾಗಿ ಕುಳಿತು ಸಾಮೂಹಿಕ ಭೋಜನ ಮಾಡುವರು. ಪರಸ್ಪರ ಹಂಚಿಕೊಂಡು ಆಹಾರ ಸೇವಿಸುವುದರಿಂದ ಇಲ್ಲಿ ಮೇಲು ಕೀಳೆಂಬ ಭಾವನೆ ಬರಲು ಸಾಧ್ಯವೇ ಇಲ್ಲ. ಕೆಲವು ಸಂದರ್ಭದಲ್ಲಿ ಬುತ್ತಿ ತರದ ತಮ್ಮ ಸಹಪಾಠಿಗಳಿಗೆ ಎಲ್ಲರೂ ತುತ್ತು ನೀಡಿ ನಿಜವಾದ ಅರ್ಥದಲ್ಲಿ ಮಾನವೀಯತೆ ತೋರಿಸುತ್ತಾರೆ.

ಆದರೆ, ದುರಂತವೆಂದರೆ ಇವತ್ತಿನ ಸಾರ್ವಜನಿಕ ಜೀವನದಲ್ಲಿ ಜಾತೀಯತೆ, ಧರ್ಮ ಪ್ರತಿಯೊಂದು ರಂಗದಲ್ಲಿ ವ್ಯಾಪಕವಾಗಿರುವುದನ್ನು ಕಾಣಬಹುದು. ಜಾತಿ ಧರ್ಮಗಳು ಇವತ್ತು ರಾಜಕಾರಣಿಗಳಿಗೆ ತಮ್ಮ ರಾಜಕೀಯ ಹಿತಾಸಕ್ತಿಯನ್ನು ಈಡೇರಿಸಿಕೊಳ್ಳಲು ಮಾತ್ರ ಬಳಕೆ ಆಗುತ್ತಿವೆ. ಸಾಮಾನ್ಯ ಜನರಿಗೆ ಇದರಿಂದ ಯಾವುದೇ ಪ್ರಯೋಜನವಿಲ್ಲ. ಸಾಮಾನ್ಯ ದುಡಿಯುವ ಜನ, ಜಾತಿ, ಧರ್ಮದಿಂದ ಯಾವುದೇ ಪ್ರಯೋಜನ ಪಡೆಯಲು ಸಾಧ್ಯವೇ ಇಲ್ಲ. ಸ್ವಾತಂತ್ರ್ಯ ಬಂದು ೫೮ ವರ್ಷಗಳಾದರೂ ಇಂದಿಗೂ ನಮ್ಮಲ್ಲಿ ಜಾತೀಯತೆ ಮನೆ ಮಾಡಿದೆ ಎಂದರೆ ಇದಕ್ಕಿಂತ ಘೋರವಾದ ದುರಂತ ಮತ್ತೊಂದಿಲ್ಲ.

ಕೃಷಿ ಕೂಲಿಕಾರರಲ್ಲಿ ಜಾಗೃತಿ ಮೂಡಿಸಬೇಕಾದ ಅವಶ್ಯಕತೆ ತುಂಬಾ ಇದೆ. ತಮ್ಮ ಸಂಘಟಿತ ಈ ದುಡಿಮೆಗೆ ಸೂಕ್ತವಾದ, ಸಮಾನವಾದ ಕೂಲಿಗಾಗಿ ಈ ಅಲಕ್ಷಿತವಲಯವನ್ನು ಸಾಂಘಿಕ ಪ್ರವೃತ್ತಿಯಲ್ಲಿ ಸಮಗ್ರವಾಗಿ ತೊಡಗಿಸುವ ಅವಶ್ಯಕತೆ ತುಂಬಾ ಇದೆ. ಈವರೆಗೂ ನಡೆಸಿರುವ ಸಾಂಘಿಕ ಪ್ರಯತ್ನಗಳು ಏತಕ್ಕೂ ಸಾಲದು. ಏಕೆಂದರೆ ಕೃಷಿ ಕೂಲಿಕಾರರು ತಮ್ಮ ಅಷ್ಟೆಲ್ಲ ದುಡಿಮೆಯಿಂದ ತಮ್ಮ ಹೊಟ್ಟೆ, ಬಟ್ಟೆಗೆ ಸೀಮಿತವಾಗಿರುವಾಗ ಅವರ ವಿದ್ಯೆ, ಕನಿಷ್ಠ ಸೂರು, ಆರೋಗ್ಯ ಮುಂತಾದ ಕನಿಷ್ಠ ಅವಶ್ಯಕತೆಗಳನ್ನು ಸ್ವತಂತ್ರ ಭಾರತದ ೫೮ ವರ್ಷಗಳ ಆಡಳಿತದಲ್ಲಿ ಈಡೇರಿಸದೇ ಇರುವುದು ನಾಚಿಕೆ ಪಟ್ಟುಕೊಳ್ಳಬೇಕಾಗಿದೆ.

ಈ ಅಲಕ್ಷಿತ ಸಾಂಘಿಕ ನೆಲೆಯನ್ನು ಗಮನದಲ್ಲಿಟ್ಟುಕೊಂಡು ಸಾಂಘಿಕ ಚಳುವಳಿಯನ್ನು ರೂಪಿಸಬೇಕಾಗಿದೆ. ಕೃಷಿ ಕೂಲಿಕಾರರಿಗೆ ಸರಕಾರದಿಂದಲೇ ಕನಿಷ್ಠ ಕೂಲಿ ನಿಗದಿ ಪಡಿಸುವ ಜೊತೆಗೆ ಸದ್ರಿ ಕೂಲಿಯನ್ನು ಪರಿಣಾಮಕಾರಿಯಾಗಿ ಜಾರಿಯಾಗುವಂತೆ ಸರಕಾರದ ನಿಯಂತ್ರಣದಲ್ಲಿಯೇ ಜಾರಿಗೊಳಿಸಬೇಕಾಗಿದೆ.

# ಅಧ್ಯಾಯ - ೫

## ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳ ಪರಿಣಾಮಗಳು

ಹೊಸಪೇಟೆ ತಾಲೂಕಿನಲ್ಲಿ ಸ್ವಾತಂತ್ರ್ಯ ನಂತರ ಸಮಸ್ತ ಜನ ವಿಭಾಗಗಳು ಸಾಂಘಿಕ ಪ್ರವೃತ್ತಿಗಳಲ್ಲಿ ತೊಡಗಿಸಿಕೊಂಡಿರುವುದು ತಿಳಿದುಬರುತ್ತದೆ. ಕೃಷಿ, ಕೈಗಾರಿಕೆ, ಸಾಂಸ್ಕೃತಿಕ ಪರಿಸರಗಳಲ್ಲಿ ಕಂಡು ಬರುವ ರೈತರು, ಕಾರ್ಮಿಕರು, ಕಲಾವಿದರು ತಮ್ಮ ತಮ್ಮ ಹಿತಾಸಕ್ತಿಗಳ ಈಡೇರಿಕೆಯಾಗಿ ಒಗ್ಗೂಡಿ ಸಾಂಘಿಕ ಪ್ರಯತ್ನಗಳನ್ನು ನಡೆಸಿರುವುದು ನಿಜ. ದುಡಿಯುವ ಜನವಿಭಾಗಗಳಲ್ಲದೆ, ಮಹಿಳೆಯರು, ದಲಿತರು, ದುರ್ಬಲರು, ನೌಕರದಾರ ವರ್ಗ ಹೀಗೆ ಸಮಸ್ತ ಜನಸಮುದಾಯಗಳು ವರ್ಗ ಹಾಗೂ ಜಾತಿ, ಧಾರ್ಮಿಕ ನೆಲೆಯಲ್ಲಿ ವಿಭಿನ್ನವಾಗಿ ಸಾಂಘಿಕ ಚಟುವಟಿಕೆಗಳನ್ನು ನಡೆಸಿರುವುದು ಆ ಮೂಲಕ ಸಕಲ ಪರಿವಾರವರ್ಗ ಸ್ವಾವಲಂಬನೆ, ಸ್ವಾಭಿಮಾನ, ಸಾಂಸ್ಕೃತಿಕ ಪರಂಪರೆಯನ್ನು ಮೈಗೂಡಿಸಿಕೊಂಡು ಬಂದಿರುವುದು ಕಂಡು ಬರುತ್ತದೆ. ಬದಲಾದ ಆಧುನಿಕ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಸರಕಾರದ ಸೌಲಭ್ಯಗಳ ಹೆಚ್ಚಳಕ್ಕಾಗಿ ಪೈಪೋಟಿ ನಡೆಸಿರುವುದು. ಅವುಗಳ ಸಾಂಘಿಕ ಚಟುವಟಿಕೆಗಳನ್ನು ಗಮನಿಸಿದಾಗ ತಿಳಿದು ಬರುತ್ತದೆ.

ಸ್ವಾತಂತ್ರ್ಯ ನಂತರ ದೇಶದಲ್ಲಿ ಭಾಷಾವಾರು ಪ್ರಾಂತಗಳ ಆಧಾರದಲ್ಲಿ ರಾಜ್ಯಗಳ ಅಸ್ಥಿತ್ವಕ್ಕಾಗಿ ಏಕೀಕರಣ ಚಳುವಳಿಗಳು ನಡೆದವು. ಕನ್ನಡ, ತೆಲುಗು, ಉರ್ದು ಭಾಷಿಕರ ಈ ಪ್ರದೇಶ ಸ್ಥಳೀಯ ಭಾಷೆಯಲ್ಲದ ತಮಿಳು ಭಾಷಿಕ ಪ್ರದೇಶವಾದ ಮದ್ರಾಸ್ ಪ್ರಾಂತದಿಂದ ಮೈಸೂರು ಪ್ರಾಂತಕ್ಕೆ ಅಂದರೆ ಕನ್ನಡ ನಾಡಿಗೆ ಸೇರಿದ್ದೇ ಒಂದು ದೊಡ್ಡ ಸಾಧನೆಯೇ ಸರಿ. ಇದರ ಸವಿನೆನಪಿಗಾಗಿ ಏಕೀಕರಣಕ್ಕೂ ಮುಂಚೆ ಅಖಂಡ ಕರ್ನಾಟಕ ರಾಷ್ಟ್ರ ನಿರ್ಮಾಣ ಪರಿಷತ್ತಿನ ಸಭೆ ಐತಿಹಾಸಿಕ ಹಂಪಿಯಲ್ಲಿ ನಡೆಯಿತು. ಈ ಸಭೆಯಲ್ಲಿ ಅಖಂಡ ಕರ್ನಾಟಕದ ಸಮಗ್ರ ನಕಾಶೆಯನ್ನು ರಚಿಸುವ ಸಂದರ್ಭದಲ್ಲಿ ಹೊಸಪೇಟೆಗಿಂತಲೂ ಬಳ್ಳಾರಿಗೆ ಹೆಚ್ಚಿನ ಮಹತ್ವ ನೀಡುವ ಮೂಲಕ ಆಂಧ್ರದವರ ಪ್ರಭಾವವನ್ನು ಕಡಿಮೆಗೊಳಿಸುವ ಇರಾದೆಯನ್ನು ಅಂದಿನ ಏಕೀಕರಣ ಮುಂದಾಳುಗಳು ಹೊಂದಿದ್ದರು. ಹೊಸಪೇಟೆ ತಾಲೂಕು ಕೇಂದ್ರ ಸ್ಥಾನಮಾನದಿಂದಲೇ ತೃಪ್ತಿಪಟ್ಟುಕೊಳ್ಳ ಬೇಕಾಯಿತು. ಕನ್ನಡ, ತೆಲುಗು, ಉರ್ದು ಭಾಷಿಕರನ್ನು ಹೊಂದಿದ್ದರೂ ಅಪ್ಪಟ ಕನ್ನಡ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಈ ತಾಲೂಕು ಶಾಂತಿ, ಸೌಹಾರ್ದತೆಗೆ ಹೆಸರು ವಾಸಿಯಾಗಿದೆ. ಸ್ವಾತಂತ್ರ್ಯ ನಂತರ ಇಂದಿನವರೆಗೂ ಹೊಸಪೇಟೆ ತಾಲೂಕಿನಲ್ಲಿ ಅಲ್ಲೊಂದು ಇಲ್ಲೊಂದು ಸಣ್ಣಪುಟ್ಟ ಕೋಮು ಗಲಭೆ ಬಿಟ್ಟರೆ ಸಂಪೂರ್ಣ ಕೋಮು ಸೌಹಾರ್ದತೆಯನ್ನು ಮೆರೆದ ತಾಲೂಕೆಂದು ಹೇಳಬಹುದು.

ಬಳ್ಳಾರಿ ಜಿಲ್ಲೆಯಲ್ಲಿ ಹುಟ್ಟಿಕೊಂಡ ಜನಪರ ಚಳುವಳಿಗಳು ಪ್ರಾರಂಭವಾಗಿದ್ದೇ ಹೊಸಪೇಟೆ ತಾಲೂಕಿನಿಂದ ಎಂದು ಹೇಳಬಹುದು. ಏಕೀಕರಣ ಚಳುವಳಿಯ ನಂತರ ಕರ್ನಾಟಕ ರಾಜ್ಯ ಅಸ್ತಿತ್ವಕ್ಕೆ ಬಂದ ನಂತರ ಜನಪರ ಚಳುವಳಿಗಳ ಅತಿ ಪ್ರಾರಂಭವಾಗಿದ್ದೇ ತುರ್ತು ಪರಿಸ್ಥಿತಿಯ ನಂತರವೇ. ೧೯೭೯ರಲ್ಲಿ 'ಹೊಸ ಮೌಲ್ಯಗಳತ್ತ ಸಾಂಸ್ಕೃತಿಕ ಜಾಥಾ' ಬಳ್ಳಾರಿ ಜಿಲ್ಲೆಯಾದ್ಯಂತ ಹಮ್ಮಿಕೊಂಡ ಕಾರ್ಯಕ್ರಮವನ್ನು ಹೊಸಪೇಟೆಯ ಅನೇಕ ಪ್ರಗತಿಪರರ ಮುಖಂಡತ್ವದಲ್ಲಿಯೇ ನಡೆದಿರುವುದು ವಿಶೇಷ. ದಲಿತ ಸಂಘರ್ಷ ಸಮಿತಿಯು ಆಗಲೇ ರಾಜ್ಯದಾದ್ಯಂತ ತೀವ್ರ ಚಟುವಟಿಕೆಗಳನ್ನು ನಡೆಸುತ್ತಿದ್ದರೂ ಹೊಸಪೇಟೆ ತಾಲೂಕಿನಲ್ಲಿ ಮಾತ್ರ ಈ ಕಾರ್ಯಕ್ರಮದ ಪ್ರಭಾವದಿಂದ ದಲಿತರಲ್ಲದೆ ರೈತರು ವಿದ್ಯಾರ್ಥಿ, ಯುವಜನ, ಮಹಿಳೆಯರು ಕಾರ್ಮಿಕರು, ಉದ್ಯೋಗಸ್ತರು ಹೀಗೆ ಪ್ರತಿಯೊಂದು ಕ್ಷೇತ್ರಗಳಲ್ಲಿ ಸಂಘಟನೆಗಳು ಆರಂಭಗೊಂಡವು ಅಂದರೆ ಈ ಮೊದಲು ಸಾಂಘಿಕ ಚಟುವಟಿಕೆಗಳೇ ಇರಲಿಲ್ಲವೆಂದಲ್ಲ. ಆದರೆ ಅನ್ಯಾಯದ ವಿರುದ್ಧ ಜಾತೀಯತೆ, ಅಸ್ಪೃಶ್ಯತೆಯಂತಹ ಸಾಮಾಜಿಕ ಅನಿಷ್ಟ, ಆರ್ಥಿಕ ಅನಿಷ್ಟಗಳ ವಿರುದ್ಧ ಹೋರಾಟ ಮಾಡುವ ಸ್ಫೂರ್ತಿಯುತ ಪರಂಪರೆ ಪ್ರಾರಂಭವಾಗಿದ್ದು ಮಾತ್ರ ಇಲ್ಲಿಂದವೆಂದು ಸ್ಪಷ್ಟವಾಗಿ ನಮಗೆ ತಿಳಿದು ಬರುತ್ತದೆ.

ದಲಿತರು ಬರುವರು ದಾರಿ ಬಿಡಿ
ದಲಿತರ ಕೈಗೆ ರಾಜ್ಯಕೊಡಿ

ಎನ್ನುವ ಹಾಡು ದಲಿತರಿಗೆ ಹೊಸ ಭರವಸೆಯನ್ನು ನೀಡಿ ಹುರಿದುಂಬಿಸಿದರೆ

ತಾಳಿ ಕಟ್ಟುವ ಮುನ್ನ, ತವರು ತೊರೆಯುವ ಮುನ್ನ
ಬಾಳು ಮುಗಿಯಿತೆ ತಂಗೀ, ನನ್ನ ಕೂಲಿಯ ತಂಗಿ

ಎನ್ನುವ ಹಾಡು ಕೂಲಿಯ ಹೆಣ್ಣು ಮಕ್ಕಳಿಗೆ ಸಾಂತ್ವನ ನೀಡುವ ಮೂಲಕ ಮಹಿಳೆಯರಲ್ಲಿ ಹೊಸ ಭರವಸೆ ನೀಡುವಲ್ಲಿ ಸಫಲವಾಯಿತು.

ಹಳ್ಳಿಗಾಡ ಹಸುಗೂಸೆ
ಹಸುಕಾಯೋ ಧೀರ ಬಾಲನೆ
ಹಾಲು ಮರೆತು ದಿನವೆಷ್ಟಾಯಿತೋ......
ಓ ಹಾಲು ಗೆನ್ನೆಯ ಜೀತಗಾರ, ಹಾಲು
ಮರೆತೂ ದಿನವೆಷ್ಟಾಯಿತೋ.......

ಈ ಹಾಡು ಅಂದಿನ ಸಂದರ್ಭದಲ್ಲಿ ಹಳ್ಳಿಯ ಮಕ್ಕಳು, ಕೂಲಿಗಾಗಿ, ಜೀತಕ್ಕಿರುವ ಮಕ್ಕಳ ಬಿಡುಗಡೆಗೆ, ವಿದ್ಯಾರ್ಥಿಗಳ ಸಂಘಟನೆಗೆ ಸ್ಫೂರ್ತಿ ನೀಡಿತು.

ನಿನ್ನೆ ದಿನಾ ನನ್ನ ಜನಾ, ಬೆಟ್ಟದಂತೆ ನಿಂತರು
ಕಪ್ಪು ಮುಖ ಬೆಳ್ಳಿಗಡ್ಡ, ಉರಿಯುತಿರುವ ಕಣ್ಣುಗಳು
ಹಗಲು ರಾತ್ರಿಗಳನ್ನು ಸೀಳಿ ನಿದ್ದೆಯನ್ನು ಒದ್ದರೂ
ಕಂಬಳಿಗಳು ಕೊರಗಿದವು ಎದ್ದೇಳುವ ರೊಚ್ಚಿಗೆ
ಭೂಕಂಪನವಾಯಿತು, ಅವರು ಕುಣಿದ ಹುಚ್ಚಿಗೆ
ಭೂ ಕಂಪನವಾಯಿತು, ಅವರು ಕುಣಿದ ಹುಚ್ಚಿಗೆ

ಎಂಬ ಸಾಲುಗಳ ದಲಿತ ಕವಿ ಡಾ॥ ಸಿದ್ದಲಿಂಗಯ್ಯರವರ ಹೋರಾಟದ ಹಾಡುಗಳು ಹೊಸಪೇಟೆ ತಾಲೂಕಿನಲ್ಲಿ ದಲಿತ, ವಿದ್ಯಾರ್ಥಿ ರೈತರು, ಕಾರ್ಮಿಕರು, ಯುವ ಜನ ಸಂಘಟನೆಗಳು ಆಸ್ತಿತ್ವಕ್ಕೆ ಬಹುತೇಕ ಕಾರಣವೆಂದು ಹೇಳಬಹುದು ದಲಿತರ ಸಂಘಟನೆಯ ಸೈದ್ಧಾತಿಕ ಬದಲಾವಣೆಯಿಂದಾಗಿ ಮುಂದಿನ ದಿನಗಳಲ್ಲಿ ಇದು ತಾಲೂಕಿನ ಬಹುತೇಕ ಜಾತಿ ಅಥವಾ ಸಮುದಾಯಗಳ ಸಂಘಟನೆಗಳು ಹುಟ್ಟಿಕೊಳ್ಳಲು ಕಾರಣವಾಯಿತು. ದಲಿತರು ಎಂಬುವ ಕಲ್ಪನೆ ಎಲ್ಲಾ ಜಾತಿಯ ಬಡವರೆಂಬ ಕಲ್ಪನೆ ಎಂಬುದು ಆರಂಭದಲ್ಲಿತ್ತು. ಆದರೆ ಇದು ಕ್ರಮೇಣ ಸಾವಿರಾರು ವರ್ಷಗಳಿಂದ ತುಳಿತಕ್ಕೆ ಒಳಗಾದ ಜಾತಿಯಿಂದ ಯಾರು ದಲಿತರೋ ಅವರೇ ನಿಜವಾದ ದಲಿತರೆಂಬ ಕಲ್ಪನೆಯಿಂದಾಗಿ ಈ ಸಂಘಟನೆ ಕೆಲವರಿಗೆ ಮಾತ್ರ ಸೀಮಿತವಾದದ್ದು ತಾಲೂಕಿನ ಇತರೆ ಜಾತಿ ಸಂಘಟನೆಗಳು ಹುಟ್ಟಿಕೊಳ್ಳಲು ಕಾರಣವಾಯಿತು.

೧೯೮೦ರ ದಶಕದ ಆರಂಭದಲ್ಲಿದ್ದಂತಹ ಹೊಸಪೇಟೆ ತಾಲೂಕಿನ ಪ್ರಮುಖ ಪ್ರಗತಿಪರ ಸಂಘಟನೆಗಳೆಂದರೆ ದಲಿತ ಸಂಘರ್ಷ ಸಮಿತಿ, ಭಾರತೀಯ ವಿದ್ಯಾರ್ಥಿ ಫೆಡರೇಶನ್, ಭಾರತ ಪ್ರಜಾಸತ್ತಾತ್ಮಕ ಯುವಜನ ಫೆಡರೇಶನ್, ಕರ್ನಾಟಕ ಪ್ರಾಂತ ರೈತಸಂಘ, ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ ಮತ್ತು ಇದರ ಅಡಿಯಲ್ಲಿ ಬೇರೆ ಬೇರ್ ರಂಗಗಳ ಕಾರ್ಮಿಕ ಸಂಘಟನೆಗಳು (ಆಟೋ ಚಾಲಕರ ಸಂಘ, ಹಮಾಲರ ಸಂಘ, ಕಾರ್ಖಾನೆಗಳ ಕಾರ್ಮಿಕರ ಸಂಘ, ಸೈಕಲ್ ರಿಕ್ಷಾ ಚಾಲಕರ ಸಂಘ, ಲಾರಿಚಾಲಕರ ಸಂಘ ಇತ್ಯಾದಿ) ಇವು ಬಹುತೇಕ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಆರಂಭಗೊಂಡಂತಹ ಸಂಘಟನೆಗಳಾಗಿದ್ದು ಹೊಸ ವಿಚಾರಗಳನ್ನು ಹೊತ್ತ ಈ ಸಾಂಘಿಕ ಪ್ರಯತ್ನಗಳಿಗೆ ಹೊಸಪೇಟೆ ನಗರ ಪ್ರದೇಶ ಸೇರಿದಂತೆ ಗ್ರಾಮೀಣ ಪ್ರದೇಶದಲ್ಲಿಯೂ ರೈತ ಸಂಘದ, ಮಹಿಳಾ ಸಂಘಟನೆಯ, ಕಾರ್ಮಿಕರ ವಿದ್ಯಾರ್ಥಿಗಳ ಮತ್ತು ವಿಶೇಷವಾಗಿ ದಲಿತರ ಅನೇಕ ಹೋರಾಟಗಳು ನಡೆದವು ಈ ಎಲ್ಲಾ ಹೋರಾಟಕ್ಕೆ ಸಮುದಾಯ ಸಾಂಸ್ಕೃತಿಕ ಸಂಘಟನೆ ನಾಟಕ, ಹಾಡು, ಬೀದಿನಾಟಕಗಳ ಮೂಲಕ ಜಾಗೃತಿ, ಸಂಚಲನವನ್ನು ಮೂಡಿಸುವ ಕಾರ್ಯವನ್ನು ಮಾಡುತ್ತಿದ್ದುದರಿಂದ ಹೊಸಪೇಟೆ ತಾಲೂಕು ಒಂದು ರೀತಿಯಲ್ಲಿ ಅಂದಿನ ದಿನಗಳಲ್ಲಿ ಜನಪರ ಹೋರಾಟಗಳ ಕೇಂದ್ರವಾಗಿತ್ತೆಂದು ಹೇಳಬಹುದು. ಈ ಸಂಘಟನೆಗಳಿಂದ ನಡೆದ ಹೋರಾಟದ ಫಲಿತಗಳನ್ನು ಈ ರೀತಿ ಪಟ್ಟಿ ಮಾಡಬಹುದು.

## ೧. ಗ್ರಾಮೀಣ ಪ್ರದೇಶದ ರೈತರನ್ನು ಸಾಂಘಿಕ ನೆಲೆಗೆ ಕರೆತಂದದ್ದು:

ಹಳ್ಳಿಗಾಡಿನ ಪ್ರದೇಶದ ರೈತರನ್ನು ಸಾಂಘಿಕ ನೆಲೆಗೆ ಮೊದಲನೆ ಬಾರಿಗೆ ಇಷ್ಟು ಪ್ರಮಾಣದಲ್ಲಿ ತರಲು ಸಾಧ್ಯವಾಯಿತು. ನರಗುಂದಾ, ನವಲಗುಂದಾ ರೈತರ ಬಂಡಾಯವು ಕರ್ನಾಟಕ ರಾಜ್ಯದಾದ್ಯಂತ ಬೀರಿದ ಪರಿಣಾಮವನ್ನೇ ಹೊಸಪೇಟೆ ತಾಲೂಕಿನಲ್ಲಿಯೂ ಕಾಣಬಹುದಾಗಿತ್ತು. ಕರ್ನಾಟಕ ಪ್ರಾಂತ ರೈತ ಸಂಘದ ಅನೇಕ ಶಾಖೆಗಳು ಹೊಸಪೇಟೆ ತಾಲೂಕಿನ ಅನಂತಶಯಗುಡಿ, ಜಿ.ನಾಗೇನಹಳ್ಳಿ, ಮಲಪನಗುಡಿ, ಬೈಲುವದ್ದಿಗೇರಿ, ಪಾಪಿನಾಯಕನಹಳ್ಳಿ, ಕಮಲಾಪುರ ಮೊದಲಾದ ಕಡೆ ರೈತರ ಸಂಘದ ಶಾಖೆಗಳು ಆರಂಭವಾದವು. ರೈತರು ಬೆಳೆದ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿ , ನೀರಾವರಿ ಪಂಪ್ ಸೆಟ್ಟುಗಳಿಗೆ ಉಚಿತ ವಿದ್ಯುಚ್ಛಕ್ತಿ ಸರಬರಾಜು ಮೊದಲಾದ ನೀರಾವರಿ ರೈತರ ಬೇಡಿಕೆಗಳಾದರೆ, ಮಳೆಯಾಶ್ರಿತ ಪ್ರದೇಶದ ರೈತರ ಬೇಡಿಕೆಗಳಾದ ಬೈಪಾಸ್ ಕಾಲುವೆ ನಿರ್ಮಾಣ, ರೈತರ ಸಾಲ ಮನ್ನಾದಂತಹ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಹೋರಾಟಕ್ಕೆ ಅಣಿಗೊಳಿಸುತ್ತಿದ್ದುದು ಕಂಡುಬರುತ್ತದೆ. ಇದೊಂದು ಪ್ರಮುಖ ಪರಿಣಾಮವೆಂದು ಹೇಳಬಹುದು.

## ೨. ದಲಿತರನ್ನು ಸಂಘಟನೆಯ ವ್ಯಾಪ್ತಿಗೆ ಒಳಪಡಿಸಿದ್ದು :

ದಲಿತ ಸಂಘರ್ಷ ಸಮಿತಿಯ ಅನೇಕ ಶಾಖೆಗಳು ಹೊಸಪೇಟೆ ತಾಲೂಕಿನಲ್ಲಿ ಪ್ರಾರಂಭಗೊಂಡವು. ಈ ತಾಲೂಕಿನ ಅನೇಕ ದಲಿತ ಮುಖಂಡರು ಒಂದಾಗಿ ಗ್ರಾಮೀಣ ಪ್ರದೇಶದಲ್ಲಿ ದಲಿತರ ಭೂಮಿಯ ಪ್ರಶ್ನೆ, ಜಾತೀಯತೆಯ ಪ್ರಶ್ನೆ, ಅಸ್ಪೃಶ್ಯತೆಯ ಪ್ರಶ್ನೆಗಳನ್ನಿಟ್ಟುಕೊಂಡು ಸಂಘಟನೆಗಳನ್ನು ವಿಸ್ತರಿಸಿದ್ದು ಇದೇ ಸಂದರ್ಭದಲ್ಲಿ ಹೊಸಪೇಟೆ ತಾಲೂಕಿನ ರಾಮಸಾಗರ, ಚಾಕ್ ಮತ್ತು ಚಿಕ್ಕಜಾಯಿಗನೂರು ಗ್ರಾಮಗಳಲ್ಲಿ ದಲಿತರ ದೇವಸ್ಥಾನದ ಬಹಿಷ್ಕಾರಗಳ ವಿರುದ್ಧ ಹೋರಾಟಗಳನ್ನು ರೂಪಸಿದ್ದು ಕಂಡು ಬರುತ್ತದೆ. ದಲಿತರ ಸಂಘಟನೆಯಲ್ಲಿ ಕೇವಲ ಕಮ್ಯುನಿಸ್ಟ್ ಮುಖಂಡರಲ್ಲದೆ, ಇತರೆ ರಾಜಕೀಯ ಪಕ್ಷಗಳ, ದಲಿತ ಮುಖಂಡರು, ಪ್ರಗತಿಪರ ಸಾಹಿತಿಗಳೂ ಮುಂಚೂಣಿಯಲ್ಲಿದ್ದುದನ್ನು ಗಮನಿಸಬಹುದು. ದಲಿತ ಸಂಘರ್ಷ ಸಮಿತಿಯು ತಾಲೂಕಿನ ಸಮಸ್ತ ದಲಿತರನ್ನು ಒಂದೇ ಸಂಘದ ಅಡಿಯಲ್ಲಿ ಸಂಘಟನೆಗೊಳಿಸುವ ಅಂದಿನ ಪ್ರಯತ್ನವು ದಲಿತರಲ್ಲಿ ಐಕ್ಯತೆಯನ್ನು ಸಾದಿಸಲು ಕಾರಣವಾಯಿತು.

## ೩. ವಿದ್ಯಾರ್ಥಿಗಳ ಸಂಘಟನೆ ಕ್ರಿಯಾ ಶೀಲಗೊಳಿಸಲು ಸಾಧ್ಯವಾಯಿತು:

ಹೊಸಪೇಟೆ ತಾಲೂಕಿನ ವಿದ್ಯಾರ್ಥಿ ಸಂಘಟನೆಗಳಲ್ಲಿಯೂ ಅನೇಕ ಬದಲಾವಣೆಗಳು ಸಂಘಟನೆಯ ಕ್ರಿಯಾ ಶೀಲತೆ ಕಾರಣವಾಯಿತು. ದಲಿತರ, ಮಹಿಳೆಯರ, ಕಾರ್ಮಿಕರ ಚಳುವಳಿಗಳ ಪ್ರಭಾರ ವಿದ್ಯಾರ್ಥಿಗಳ ಮೇಲೆಯೂ ಪರಿಣಾಮ ಬೀರಿತು. ಈ ಎಲ್ಲಾ ದುಡಿಯುವ ಜನ ವಿಭಾಗಗಳ ಸಂಘಟನೆಗಳಿಗೆ 'ಕೇಡರ್' ಗಳನ್ನು ಸೃಷ್ಟಿಸುವ ಮೊದಲ ಹಂತವಾಗಿ ಈ ವಿದ್ಯಾರ್ಥಿ ಸಂಘಟನೆಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಗುತ್ತಿತ್ತು. ಬಹುತೇಕ ರಾಜಕೀಯ ಪಕ್ಷಗಳು, ದೇಶದಲ್ಲಿ, ರಾಜ್ಯದಲ್ಲಿ ಒಂದೊಂದು

ವಿದ್ಯಾವಂತ ಸಂಘಟನೆಗಳನ್ನು ಹೊಂದಿರುವಂತಹ ಶಾಖೆಗಳನ್ನು ಅಂದಿನ ದಿನಗಳಲ್ಲಿ ಹೊಸಪೇಟೆ ತಾಲೂಕಿನಲ್ಲಿಯೂ ಸಕ್ರಿಯಗೊಳಿಸಲಾಗಿತ್ತು. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದಿಂದ 'ಭಾರತೀಯ ವಿದ್ಯಾರ್ಥಿ ಸಂಘಟನೆ ( ಎಸ್. ಎಫ್. ಐ) ಅಂದಿನ 'ಜನ ಸಂಘದ ಪರವಾಗಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ( ಎ.ಬಿ.ವಿ.ಪಿ) ತಾಲೂಕಿನ ಮುಂಚೂಣಿ ವಿದ್ಯಾರ್ಥಿ ಸಂಘಟನೆಗಳೆಂದು ಹೇಳಬಹುದು. ಭಾರತದ ವಿದ್ಯಾರ್ಥಿ ಫೆಡರೇಷನ್ (ಎಸ್. ಎಫ್. ಐ.) ಅಂದಿನ ದಿನಗಳಲ್ಲಿ ಅನೇಕ ಪ್ರಗತಿಪರ ಸಂಘಟನೆಗಳಿಗೆ 'ಕೇಡರ್' ಗಳನ್ನು ಒದಗಿಸುವ ಪ್ರಮುಖ ಸಂಘಟನೆಯಾಗಿ ರೂಪುಗೊಂಡಿದ್ದು ವಿಶೇಷವಾಗಿತ್ತು.

## ೪) ಕಾರ್ಮಿಕರ ಸಂಘಟನೆ ವಿಸ್ತಾರಗೊಂಡಿದ್ದು :

೮೦ರ ದಶಕದಲ್ಲಿ ಹೊಸಪೇಟೆ ತಾಲೂಕಿನಲ್ಲಾದ ಅನೇಕ ಸಾಂಘಿಕ ಬದಲಾವಣೆಗಳಲ್ಲಿ ಕಾರ್ಮಿಕರ ಸಂಘಟನೆ ಹೆಚ್ಚು ವಿಸ್ತಾರಗೊಂಡಿದ್ದು ಸಹಾ ಪ್ರಮುಖ ಬದಲಾವಣೆಯೆಂದು ಹೇಳಬಹುದು. ಸಂಡೂರು ಸ್ಮಯೋರ್ ಕಾರ್ಖಾನೆಯ ಕಾರ್ಮಿಕರ ಹೋರಾಟ ನಡೆದಿದ್ದು ಪ್ರಮುಖ ಕಾರ್ಮಿಕರ ಹೋರಾಟವೆಂದು ಹೇಳಬಹುದು. ಈ ಹೋರಾಟದಲ್ಲಿ ಕಾರ್ಮಿಕರಲ್ಲಿ ಬಹಳಷ್ಟು ಜನ ಕೆಲಸ ಕಳೆದುಕೊಂಡು ಮನೆಗೆ ಕಳಿಸಲ್ಪಟ್ಟರೂ ಮುಂದಿನ ಕಾರ್ಮಿಕರ ಹೋರಾಟಕ್ಕೆ ಸೂಕ್ತವಾದ ವೇದಿಕೆಯನ್ನು ನಿರ್ಮಿಸಿಕೊಟ್ಟಿದ್ದು ಮಾತ್ರ ಈ ಹೋರಾಟ ವೆಂಬುದನ್ನು ನಿಸಂಶಯವಾಗಿ ಹೇಳಬಹುದು. ಸಿ. ಐ.ಟಿ.ಯು ಕಾರ್ಮಿಕ ಸಂಘಟನೆಯ ನೇತೃತ್ವದಲ್ಲಿ ಆಟೋ ಚಾಲಕರ ಸಂಘ, ಹಮಾಲಿಗಳ ಸಂಘ, ರಿಕ್ಷಾವಾಲಾಗಳ ಸಂಘ ಇತ್ಯಾದಿ ಕಾರ್ಮಿಕರ ಸಂಘಟನೆಗಳು ಆರಂಭಗೊಂಡವು. ಅವರ ನ್ಯಾಯಯುತವಾದ ಅನೇಕ ಹೋರಾಟಗಳನ್ನು ನೋಡಬಹುದಾಗಿದೆ.

**೫) ಮಹಿಳಾ ಸಂಘಟನೆ :-** ಸಮುದಾಯ ಸಾಂಸ್ಕೃತಿಕ ಸಂಘಟನೆಯ ನಾಟಕ, ಹಾಡು, ಬೀದಿ ನಾಟಕಗಳು ಅನೇಕ ಸತ್ಯ ಘಟನೆಗಳನ್ನು ಆಧರಿಸಿ ಮಹಿಳೆಯರ ಮೇಲೆ ನಡೆದ ಅತ್ಯಾಚಾರ, ಅನ್ಯಾಯ, ದಬ್ಬಾಳಿಕೆಯನ್ನು ಕುರಿತು ಜಾಗೃತಿ ಮೂಡಿಸುತ್ತಿದ್ದುದರಿಂದ ಇದು ಸಹಜವಾಗಿ ಅಂದಿನ ದಿನಗಳಲ್ಲಿ ದುಡಿಯುವ ಪ್ರಮುಖ ಸಾಂಗಿಕ ನೆಲೆಯಾಗಿದ್ದ ಮಹಿಳಾ ಸಂಘಟನೆಯ ಮೇಲೂ ವ್ಯಾಪಕ ಪ್ರಭಾವ ಬೀರಲು ಸಾಧ್ಯವಾಯಿತು. ಹೊಸಪೇಟೆ ತಾಲೂಕಿನಲ್ಲಿ ನಡೆದ ಅನೇಕ ಮಹಿಳಾ ಅತ್ಯಾಚಾರ ಪ್ರಕರಣಗಳ ವಿರುದ್ಧ ನಡೆದ ಹೋರಾಟಕ್ಕೆ ದುಮುಕಲು ಸಾಧ್ಯವಾಯಿತು. ಕೋಲಾರ ಜಿಲ್ಲೆಯ ಮಾಲೂರು ತಾಲೂಕಿನ ಟೇಕಲು ಹೋಬಳಿಯ ಹುಣಸೆಕಟ್ಟೆ ಗ್ರಾಮದ ಹೆಣ್ಣು ಮಗಳ ಅತ್ಯಾಚಾರದ ಘಟನೆಗೆ ಸಂಬಂಧಪಟ್ಟ ಈ ಹಾಡು ಮಹಿಳಾ ಸಂಘಟನೆಯ ಮೇಲೆ ತುಂಬಾ ಪ್ರಭಾವ ಬೀರಿದ ಹಾಡಾಗಿದೆ.

ಕೋಟಿ ಕೋಟಿ ಬಾಧೆಗಳಲ್ಲಿ
ಲಕ್ಷಾಂತರ ನೋವುಗಳಲ್ಲಿ ನೀಹುಟ್ಟಿ
ಬೆಳೆದೆಯಮ್ಮ ನನತಂಗೀ ಅನುಸೂಯ॥
ಮಾಲೂರು ತಾಲೂಕು, ಟೇಕಲ್ಲು ಹೋಬಳಿ
ಹುಣಸಿಕಟ್ಟೆ ಗ್ರಾಮದ ಬಡಕುಂಬಾರನ ಮನೆಯಲ್ಲಿ
ನೀ ಹುಟ್ಟಿ ಬೆಳೆದೆಯಮ್ಮ ನನತಂಗೀ ಅನುಸೂಯ ॥ ಕೋಟಿ॥
ನಿಮ್ಮೂರ ಕೃಷ್ಣೆಗೌಡ, ವೆಂಕಟೇಶ, ನಂಜುಂಡ
ದುಷ್ಟಕೂಟ ಕಟ್ಟಿಕೊಂಡು ನಿನದಾರಿ ಕಾದುಕೊಂಡು
ಕೈಮುಗಿದು ಕೇಳಿದರೂ, ಕಣ್ಣೀರು ಸುರಿಸಿದರೂ
ನಿನ ಶೀಲವ ಕೆಡಿಸಿ ಹೋದರಮ್ಮ ನನತಂಗೀ ಅನುಸೂಯ ॥ ಕೋಟಿ॥

ನಿನಗಾದ ಅನ್ಯಾಯ ನಮ್ಮೆದೆಗೆ ಚೂರಿ ಇರಿತ
ಗಾಯವ ಮರೆತು ಬದುಕಲಾರೆವು ನನತಂಗೀ ಅನುಸೂಯ ॥ ಕೋಟಿ॥

## ೬) ಸಾಂಸ್ಕೃತಿಕ ಸಂಘಟನೆಯ ಕ್ರಿಯಾಶೀಲಗೊಂಡಿದ್ದು:

ಮೇಲಿನ ಎಲ್ಲ ಜನಪರ ಸಂಘಟನೆಗಳಿಗೆ ಒಂದುರ ರೀತಿಯಲ್ಲಿ ಮಾನಸಿಕ ಸಿದ್ಧತೆಯನ್ನು ಒದಗಿಸಿದ್ದೇ ಸಮುದಾಯ ಸಾಂಸ್ಕೃತಿಕ ಸಂಘಟನೆ, ದಲಿತ ಕವಿ ಡಾ॥ ಸಿದ್ದಲಿಂಗಯ್ಯರವರ ಹೋರಾಟದ ಹಾಡುಗಳೆಂದು ಹೇಳಬಹುದು. ಸಮುದಾಯದ ಪ್ರಮುಖ ನಾಟಕಗಳಾದ ಕುರಿ, ಕತ್ತೆ ಮತ್ತು ಧರ್ಮ, ಮಾರೀಚನ ಬಂಧುಗಳು, ಬೆಲೆ ಏರಿಕೆ, ಪಂಚಮ, ಬೆಲ್ಚಿ, ದಂಗೆಯ ಮುಂಚಿನ ದಿನಗಳು, ಕತ್ತಲೆ ದಾರಿ ದೂರ ಜನತೆ ಮೊದಲಾದ ಬೀದಿ ನಾಟಕಗಳು, ನಾಟಕಗಳು ತಾಲೂಕಿನಲ್ಲಿ ಸಂಛಲನವನ್ನುಂಟು ಮಾಡಿದ್ದವು. ರಂಗತರಬೇತಿ ಶಿಬಿರ, ನಾಟಕೋತ್ಸವಗಳ ಮೂಲಕ ಅನೇಕ ಪ್ರತಿಭಾವಂತ ಕಲಾವಿದರನ್ನು ಜನಪರ ಹೋರಾಟಗಳಿಗೆ ಕರೆತಂದಿದ್ದು ಆ ಮೂಲಕ ಆ ಹೋರಾಟಗಳನ್ನು, ಸಂಘಟನೆಗಳನ್ನು ಗಟ್ಟಿಗೊಳಿಸಿದ್ದು ಇದರಿಂದ ಸಾಧ್ಯವಾಯಿತೆಂದು ಹೇಳಬಹುದು.

೧೯೯೦ರ ದಶಕದ ನಂತರ ಹೊಸಪೇಟೆ ತಾಲೂಕಿನಲ್ಲಿ ದಲಿತ ಸಂಘಟನೆ ಸೇರಿದಂತೆ ಜನ ವಿಭಾಗಗಳಲ್ಲಿ ಅನೇಕ ಬದಲಾವಣೆಗಳಣ್ನು ಗುರುತಿಸಬಹುದು.

**೧. ದಲಿತ ಸಂಘಟನೆ :-** ದಲಿತ ಸಂಘರ್ಷ ಸಮಿತಿ ರಾಜ್ಯಮಟ್ಟದಲ್ಲಿ ಅನೇಕ ಗುಂಪುಗಳಾಗಿ ಒಡೆದುದರ ಪರಿಣಾಮವಾಗಿ ಹೊಸಪೇಟೆ ತಾಲೂಕಿನಲ್ಲಿಯೂ ಅನೇಕ ಬದಲಾವಣೆಗಳನ್ನು ಗುರುತಿಸಬಹುದು. ದಲಿತ ಸಂಘರ್ಷ ಸಮಿತಿಯನ್ನು ಹೊರತು ಪಡಿಸಿ ದಲಿತರ ಸಂಘಟನೆಯಲ್ಲಿ ಇತರೆ

ಪ್ರಯತ್ನಗಳು ಪ್ರಾರಂಭಗೊಂಡವು. ದಲಿತ ಸಂಘಟನೆ ಕೇವಲ ಅಸ್ಪೃಶ್ಯರಿಗೆ, ಪರಿಶಿಷ್ಟ ಜಾತಿಗೆ ಮಾತ್ರ ಸೀಮಿತ ಗೊಳಿಸಿದ ಕಾರಣಕ್ಕಾಗಿ ಕಮ್ಯುನಿಸ್ಟರು ಬಹುತೇಕ ದಲಿತ ಸಂಘರ್ಷ ಸಮಿತಿಯಿಂದ ದೂರವೇ ಉಳಿದರು. ಡಾ॥ ಅಂಬೇಡ್ಕರ್ ಸಂಘ ಹೆಚ್ಚು ಪ್ರವರ್ಧಮಾನಕ್ಕೆ ಬರತೊಡಗಿತು. ಈ ಹಿಂದೆ ದಲಿತ ಸಂಘರ್ಷ ಸಮಿತಿ ಶಾಖೆಗಳ ಆರಂಭಕ್ಕೆ ವ್ಯಕ್ತವಾಗುತ್ತಿದ್ದ ಉತ್ಸಾಹವು ಡಾ। ಬಿ. ಆರ್. ಅಂಬೇಡ್ಕರ್ ಸಂಘದ ಶಾಖೆಗಳ ಆರಂಭಕ್ಕೆ ತಿರುಗಿತು. ಅನೇಕ ಗ್ರಾಮಗಳಲ್ಲಿ ಡಾ। ಬಿ. ಆರ್. ಅಂಬೇಡ್ಕರ್ ಸಂಘದ ಶಾಖೆಗಳು ಆರಂಭಗೊಂಡಿದ್ದು ಕಂಡು ಬರುತ್ತದೆ.

## ೨. ಹಿಂದುಳಿದ ಜಾತಿಗಳ ಸಂಘಟನೆಗಳು ಆರಂಭಗೊಂಡಿದ್ದು:

ದೇಶದಲ್ಲಿ ಹಿಂದುಳಿದ ಮಂಡಲ್ ಆಯೋಗದ ಜಾರಿಯ ಪರವಾಗಿ ನಡೆದ ಹಿಂದುಳಿದ ವರ್ಗಗಳ ಹೋರಾಟಗಳು ಮತ್ತು ಮಂಡಲ್ ಆಯೋಗದ ವರದಿಯ ವಿರುದ್ಧ ನಡೆದ ಮೇಲ್ಜಾತಿಯ ಹೋರಾಟಗಳ ಪ್ರಭಾವದಿಂದಾಗಿ ಬೇಕಿಲ್ಲ ಪ್ರದೇಶದಲ್ಲಿ ಆದ ಬದಲಾವಣೆಯಂತೆ ಹೊಸಪೇಟೆ ತಾಲೂಕಿನಲ್ಲಿಯೂ ವಿಶೇಷವಾಗಿ ಹಿಂದುಳಿದ ಜಾತಿಗಳ ಸಂಘಟನೆಗಳ ಶಾಖೆಗಳು ಆರಂಭವಾದವು. ಹೊಸಪೇಟೆ ತಾಲೂಕಿನ ಪ್ರಮುಖ ಹಿಂದುಳಿದ ಜಾತಿಗಳಾದ ನಾಯಕ ವಾಲ್ಮೀಕಿ ಸಮುದಾಯ, ಕುರುಬ ಸಮುದಾಯ, ಗಂಗಾಮತ ಸಮುದಾಯ, ಗೊಲ್ಲರ ಸಮುದಾಯ ಮೊದಲಾದ ಹಿಂದುಳಿದ ಜಾತಿಗಳ ಸಂಘಟನೆಗಳು ಕ್ರಿಯಾಶೀಲಗೊಂಡವು.

## ರೈತ ಸಾಂಘಿಕ ನೆಲೆಯ ಪರಿಣಾಮಗಳು :

**೧. ರೈತ ಭವನ ನಿರ್ಮಾಣ :** ೧೯೭೪ ರಲ್ಲಿ ಹೊಸಪೇಟೆ ರೈತ ಸಂಘದ ಚರಿತ್ರೆಯಲ್ಲಿ ಪ್ರಮುಖವಾದ ಬೆಳವಣಿಗೆಗಳಾದವು. ೧೯೭೪ ರಲ್ಲಿ ರೈತ ಸಂಘವು ತನ್ನದೇ ಆದ ಬೈಲಾದ ಪ್ರಕಾರ ನೋಂದಣಿ ಪಡೆದ ವರ್ಷವಾಗಿದೆ. ಅಂದಿನ ರೈತ ಸಂಘದ ಅಧ್ಯಕ್ಷರಾಗಿದ್ದ, ಸತ್ಯನಾರಾಯಣಸಿಂಗ್ ರವರು ಶಾಸಕರಾಗಿದ್ದರು ಎಂಬುದು ಮತ್ತೊಂದು ಹೆಗ್ಗಳಿಕೆ. ಇವರ ನೇತೃತ್ವದಲ್ಲಿ ಕಾರ್ಖಾನೆಗೆ ಪೂರೈಕೆ ಆಗುತ್ತಿದ್ದ ಪ್ರತಿಟನ್ ಕಬ್ಬಿನ ಹಣದಲ್ಲಿ ಒಂದು ರೂಪಾಯಿಯಂತೆ ಹಣ ಸಂಗ್ರಹಿಸಲಾಯಿತು. ಆ ರೀತಿ ಸಂಗ್ರಹಿಸಿದ ಹಣದಲ್ಲಿ ಡಾ॥ ಆರ್. ನಾಗನಗೌಡರ ಸ್ಮಾರಕಾರ್ಥ ರೈತಭವನವನ್ನು ನಿರ್ಮಿಸಲಾಯಿತು. ಈ ಕಾರ್ಯಕ್ಕೆ ತುಂಗಾಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದವರು ೫೦ ಸಾವಿರ ರೂ.ಗಳನ್ನು ನೆರವು ರೂಪದಲ್ಲಿ ನೀಡಿದ್ದರು. ಒಟ್ಟು ೧೨ ಲಕ್ಷ ರೂಪಾಯಿ ವೆಚ್ಚದಲ್ಲಿ ನಿರ್ಮಿಸಲಾಗಿರುವ ಈ ಭವನವನ್ನು ಅತಿ ಕಡಿಮೆ ಶುಲ್ಕಕ್ಕೆ ಕಬ್ಬು ಬೆಳೆಗಾರರಾದ ರೈತರಿಗೆ ಮದುವೆ ಮತ್ತಿತರ ಕಾರ್ಯಕ್ರಮಗಳಿಗೆ ನೀಡಲಾಗುತ್ತದೆ. ಸಂಘದ ಸದಸ್ಯರಿಗೆ ರಿಯಾಯ್ತಿ ಧರದಲ್ಲಿ ರೈತಭವನವನ್ನು ನೀಡುವ ಪದ್ಧತಿಯನ್ನು ಅಳವಡಿಸಿಕೊಳ್ಳಲಾಗಿದೆ. ಈ ಭವನದ ಆಡಳಿತವನ್ನು ರೈತ ಸಂಘವೇ ನೋಡಿಕೊಳ್ಳುತ್ತಿದೆ. ರೈತಸಂಘದ ನೇತೃತ್ವದಲ್ಲಿ ರೈತರ ನೆರವಿನಿಂದ ಈ ಭವನ ನಿರ್ಮಾಣ ಸ್ಥಳೀಯ ರೈತ ಸಂಘದ ಸಾಧನೆಯೆಂದು ಹೇಳಬಹುದು.

**೨. ನ್ಯಾಯಾಲಯದಲ್ಲಿ ರೈತ ಸಂಘ :** ೧೯೬೮ ರಲ್ಲಿ ಕೇಂದ್ರ ಸರಕಾರ ಸಕ್ಕರೆ ಕಾರ್ಖಾನೆಗಳು ಕೊಡಬೇಕಾದ ಹೆಚ್ಚುವರಿ ಕಬ್ಬಿನ ಬೆಲೆ ಬಗ್ಗೆ ಅಧ್ಯಯನ ನಡೆಸಲು ಒಂದು ಏಕ ಸದಸ್ಯ ಆಯೋಗವನ್ನು ರಚಿಸಿತು. ಈ ಸಮಿತಿಯು ೧೯೬೦-೬೧ ಮತ್ತು ೧೯೬೧-೬೨ನೇ ಸಾಲಿನಲ್ಲಿ ಅರೆದ ಪ್ರತಿಟನ್ ಕಬ್ಬಿಗೆ ೧೦-೨೫ ರಂತೆ ಹೆಚ್ಚುವರಿ ಬೆಲೆ ನೀಡಬೇಕೆಂದು ಸಲಹೆ ಮಾಡಿತು. ಸಮಿತಿಯ ಸಲಹೆಯಂತೆ ಕಾರ್ಖಾನೆ ಹಣ ಪಾವತಿ ಮಾಡುವಂತೆ ಕೇಂದ್ರ ಸರಕಾರ ಆಜ್ಞೆಯನ್ನು ಹೊರಡಿಸಿತು. ಆದರೆ ಕಾರ್ಖಾನೆಯ ಆಡಳಿತ ಮಂಡಳಿ ಈ ಆಜ್ಞೆಯನ್ನು ಮರುಪರಿಶೀಲನೆಗಾಗಿ ಮನವಿಸಲ್ಲಿಸಿದ್ದನ್ನು ರೈತ ಸಂಘ ವಿರೋಧಿಸಿ ಸರಕಾರಕ್ಕೆ ರೈತರ ಹಿತಾಸಕ್ತಿ ಕಾಪಾಡಬೇಕೆಂದು ಮನವಿ ಸಲ್ಲಿಸಲಾಯಿತು. ಆದರೂ ಸರಕಾರ ಕೇವಲ ಒಂದು ವರ್ಷಕ್ಕೆ ಮಾತ್ರ ೭೦ ಪೈಸೆ ೧೯೯೦-೯೧ ನೇ ಸಾಲಿಗೆ ಬೆಲೆ ನಿಗದಿಪಡಿಸಿ ಆಜ್ಞೆ ಹೊರಡಿಸಿ ರೈತರ ಹೋರಾಟಕ್ಕೆ ತಣ್ಣೀರೆರಚಿತು. ಇದರ ಪರಿಣಾಮವಾಗಿ ಹಠ ಬಿಡದ ಹೊಸಪೇಟೆಯ ರೈತ ಸಂಘವು ೧೯೭೯ ರಲ್ಲಿ ಸುಪ್ರೀಂ ಕೋರ್ಟಿನಲ್ಲಿ ದಾವೆ ಹೂಡಿತು (ದಾವೆ ನಂ.೨೨೨-೧೯೭೯). ಏಕ ಸದಸ್ಯ ಸಮಿತಿಯ ಸಲಹೆಯಂತೆ ಕಾರ್ಖಾನೆಯು ೧೯೯೦-೯೧ ಮತ್ತು ೧೯೯೧-೯೨ ರ ಸಾಲಿಗೆ ಕಬ್ಬಿನ ಹೆಚ್ಚುವರಿ ಬೆಲೆ ಪಾವತಿಗಾಗಿ ರೈತರಿಗೆ ಸುಮಾರು ೧೫ ರಿಂದ ೨೦ ಲಕ್ಷ ಕೊಡಬೇಕಿತ್ತು. (ಟಿ. ಆರ್. ಚಂದ್ರಶೇಖರ್, ೧೯೮೭). ಆದರೆ, ಸುಪ್ರಿಂ ಕೋರ್ಟಿನಲ್ಲಿ ೧೮ ವರ್ಷ ದಾವೆ ನಡೆದು ಕೊನೆಗೆ ಅಂದರೆ ಟನ್ ಒಂದಕ್ಕೆ ಕೇವಲ ಮೂವತ್ತೇಳು ಪೈಸೆ ಕೊಡಲು ಆದೇಶ ಬಂದಿದೆ ಎಂದು ತಿಳಿದು ಬಂತು. ಪ್ರಜಾ ಪ್ರಭುತ್ವೀಯ ವ್ಯವಸ್ಥೆಗೆ ಕಳಂಕವಾಗುವಂತೆ ಸರಕಾರದ ರೈತ ವಿರೋಧಿ ವರದಿಗಳು, ಕಾನೂನುಗಳು ಮತ್ತು ಬಂಡವಾಳ ಶಾಹಿಗಳ ಅಟ್ಟಹಾಸದ ಪರಮಾವಧಿಯಾಗಿರುವ ಕಾರ್ಖಾನೆಗಳ ಆಡಳಿತ ವರ್ಗಗಳು ಈ ದೇಶದ ಬೆನ್ನೆಲುಬು ಆಗಿರುವ ಶೇ. ೮೦ ರಷ್ಟು ಜನರ ಆಕಾಂಕ್ಷೆಗೆ ಮುಚ್ಚಿರುವುದಕ್ಕೆ ಈ ಘಟನೆ ಒಳ್ಳೆಯ ಉದಾಹರಣೆಯಾಗಿದೆ.

**೩. ಕಾರ್ಖಾನೆಯ ಸಂಕಷ್ಟದಲ್ಲಿ ರೈತ ಸಂಘದ ನೆರವು :** ಕಾರ್ಖಾನೆಯ ವಿರುದ್ಧ ರೈತರ ಹಿತಾಸಕ್ತಿಗಾಗಿ ಇಷ್ಟೆಲ್ಲಾ ಹೋರಾಟ ಮಾಡಿಕೊಂಡು ಬಂದಿದ್ದರೂ, ಕಾರ್ಖಾನೆಯೇ ಸ್ವತಃ ಸಂಕಷ್ಟದಲ್ಲಿದ್ದಾಗ ರೈತ ಸಂಘದ ನೇತೃತ್ವದಲ್ಲಿ ಕಾರ್ಖಾನೆಗೆ ನೆರವಿನ ಹಸ್ತ ಚಾಚಿರುವ ಹಿರಿಮೆ ಹೊಸಪೇಟೆ ರೈತ ಸಂಘಟನೆಗಿದೆ. ೧೯೯೫ ರಲ್ಲಿ ಕಾರ್ಖಾನೆಗೆ ಹಣಕಾಸಿನ ಅವಶ್ಯಕತೆ ಇದ್ದು, ಸಾಲ ಪಡೆಯಲು ವಿಫಲವಾದಾಗ ಕಬ್ಬು ಬೆಳೆಗಾರರೇ ತಮ್ಮ ಸ್ವಂತ ಜಮೀನುಗಳನ್ನು ಒತ್ತೆ ಹಾಕಿ ಬಿ.ಡಿ.ಸಿ.ಸಿ. ಬ್ಯಾಂಕಿನಲ್ಲಿ ಕಾರ್ಖಾನೆಗೆ ಸುಮಾರು ೩-೫ ಕೋಟಿ ರೂ.ಹಣವನ್ನು ಸಾಲದ ರೂಪದಲ್ಲಿ ಕೊಡಿಸಿದ್ದು, ಇದೊಂದು ಸದಾ ಸ್ಮರಿಸಬಹುದಾದ ಘಟನೆಯಾಗಿದೆ ಎಂದು ರೈತ ಸಂಘದ ಪದಾಧಿಕಾರಿಗಳು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಅದೇ ರೀತಿ ಒಮ್ಮೆ ಕಾರ್ಖಾನೆಯವರು ಹಳೆ ಯಂತ್ರವನ್ನು ಬದಲಾಯಿಸಲು ರೂಪಾಯಿ ೨೫ ಲಕ್ಷ ರೂ.ಗಳ ನೆರವನ್ನು ಅಪೇಕ್ಷಿಸಿದಾಗ ರೈತ ಸಂಘದ ನೇತೃತ್ವದಲ್ಲಿ ಕಬ್ಬು ಬೆಳೆಗಾರರೆಲ್ಲಾ ತಮ್ಮ ಸ್ವಂತ ಮೂಲಗಳಿಂದ ಈ ಹಣವನ್ನು ಸಂಗ್ರಹಿಸಿ ಕಾರ್ಖಾನೆಗೆ ನೀಡುವ ಮೂಲಕ ಹೊಸಯಂತ್ರ ಜೋಡಣೆಗೆ ಕಾರಣವಾಗಿದ್ದು, ಇದೂ ಸಹಾ ಮಾದರಿಯಾದ ಸಾಂಘಿಕ ಪ್ರಯತ್ನವಾಗಿದೆ.

**೪. ಮಾದರಿಯಾದ ಸೊಸೈಟಿಗಳ ಪ್ರಾರಂಭ :** ರೈತ ಸಂಘದ ನಿರಂತರ ಪ್ರಯತ್ನದಿಂದ ಕಬ್ಬು ಬೆಳೆಗಾರರ, ಇನ್ನಿತರ ರೈತರ ಅನುಕೂಲಕ್ಕಾಗಿ ರೈತರ ಪ್ರತಿನಿಧಿಗಳನ್ನು ಹೊಂದಿರುವ ಸೊಸೈಟಿಗಳನ್ನು ಏಕೀಕರಣ ಚಳುವಳಿಯ ಸಂದರ್ಭದಲ್ಲಿ ಶೇರುಗಳನ್ನು ಸಂಗ್ರಹಿಸಿ ಆರಂಭಿಸಿರುವುದು ಕಂಡು ಬರುತ್ತದೆ. ಹೊಸಪೇಟೆಯಲ್ಲಿ ಈಗ ಇಂಥಹ ನಾಲ್ಕು ಸೊಸೈಟಿಗಳು ರೈತ ಪ್ರತಿನಿಧಿಗಳ ಮುಂದಾಳತ್ವದಲ್ಲಿ ನಡೆಯುತ್ತಿವೆ. ಈ ಸೊಸೈಟಿಗಳಿಂದ ಕಬ್ಬು ಬೆಳೆಯೂ ಸೇರಿದಂತೆ ಇನ್ನಿತರ ಬೆಳೆಗಳಾದ ಭತ್ತ, ಸೂರ್ಯಕಾಂತಿ, ಬಾಳೆ, ಶೇಂಗಾ, ಬೆಳೆಯಲು ಅವರಿಗೆ ಬೇಕಾದ ಬೀಜ, ಗೊಬ್ಬರ, ಔಷಧ ಪರಿಕರಗಳಿಗೆ ಹಣಕಾಸಿನ ನೆರವನ್ನು ಅಲ್ಪಾವಧಿ, ಮಧ್ಯಮಾವಧಿ ದೀರ್ಘಾವಧಿ ರೂಪದಲ್ಲಿ ಸಾಲ ನೀಡುತ್ತಿದ್ದು, ಬಹುತೇಕ ಈ ಭಾಗದ ರೈತರು ಇದರ ಪ್ರಯೋಜನ ಪಡೆಯುತ್ತಿದ್ದಾರೆ. ರೈತರು ತಮಗೆ ಬೇಕಾದಾಗ ತಮ್ಮ ಜಮೀನು ಆಧಾರದ ಮೇಲೆ ನಿಗದಿತ ಸಾಲವನ್ನು ಪಡೆದು ತಮ್ಮ ಬೆಳೆಗೆ ವಿನಿಯೋಗಿಸುವರು. ಬೆಳೆ ಕಟಾವು ಆದ ಮೇಲೆ ನಿಗದಿತ ಸಮಯದಲ್ಲಿ ಸಾಲ ಮರುಪಾವತಿ ಮಾಡುವುದರಿಂದ ಸೊಸೈಟಿಗಳು ಕ್ರಿಯಾಶೀಲವಾಗಿ ನಡೆಯಲು ತಮ್ಮ ಸಾಲದ ಜಾಲವನ್ನು ವಿಸ್ತರಿಸಿಕೊಳ್ಳಲು ಸಾಧ್ಯವಾಗಿದ್ದು, ಈ ಸೊಸೈಟಿಗಳು ಕ್ರಿಯಾಶೀಲವಾಗಿ ನಡೆಯಲು ತಮ್ಮ ಸಾಲದ ಜಾಲವನ್ನು ವಿಸ್ತರಿಸಿಕೊಳ್ಳಲು ಸಾಧ್ಯವಾಗಿದ್ದು, ಈ ಸೊಸೈಟಿಗಳೆಲ್ಲಾ ಲಾಭದಲ್ಲಿರುವುದು ಇದರಿಂದ ಸಾಧ್ಯವಾಗಿದೆ.

**೫. ರಾಜಕೀಯೇತರ ಸಂಘಟನೆಯಾಗಿ ಮುಂದುವರೆದಿರುವ ರೈತ ಸಂಘ :**

ರೈತ ಸಂಘ ಕಳೆದ ೬೦ ವರ್ಷಗಳಿಂದಲೂ ರೈತ ಸಂಘದ ಕಾರ್ಯಚಟುವಟಿಕೆಗಳು ನಡೆದಿದ್ದರೂ ಈ ರೈತ ಸಂಘ ರಾಜಕೀಯೇತರ ಸಂಘವಾಗಿಯೇ ಮುಂದುವರೆದಿರುವುದು. ಕರ್ನಾಟಕದ ಚರಿತ್ರೆಯಲ್ಲಿ ಈ ರೀತಿಯ ಉದಾಹರಣೆಗಳು ವಿರಳವೆಂದೇ ಹೇಳಬಹುದು. ಕರ್ನಾಟಕದಲ್ಲಿ ಹುಟ್ಟಿದ ಹಲವು ರೈತ ಸಂಘಗಳು ರಾಜಕೀಯ ಪಕ್ಷದ ಭಾಗವಾಗಿಯೇ ಬೆಳೆದಿರುವ ಉದಾಹರಣೆಗಳನ್ನು ನೋಡಬಹುದು. ಕರ್ನಾಟಕ ಪ್ರಾಂತ ರೈತ ಸಂಘ, ಕರ್ನಾಟಕ ರಾಜ್ಯ ರೈತರ ಸಂಘಗಳೂ ಒಂದಿಲ್ಲೊಂದು ರೀತಿಯಲ್ಲಿ ರಾಜಕೀಯ ಸಂಘಟನೆಗಳಾಗಿಯೇ ಬೆಳೆದಿವೆ. ಆದರೆ ಹೊಸಪೇಟೆಯ ರೈತ ಸಂಘ ಮಾತ್ರ ಇದಕ್ಕೆ ಅಪವಾದವಾಗಿದೆ. ಯಾವುದೇ ಜಾತಿ, ಧರ್ಮ, ಭಾಷೆ ಮತ್ತು ಯಾವುದೇ ರಾಜಕೀಯ ಪಕ್ಷದವರಾಗಿದ್ದರೂ ಅವರೆಲ್ಲಾ ರೈತರಾಗಿದ್ದರೆ ಸಾಕು, ರೈತ ಸಂಘದ ಸದಸ್ಯರಾಗಲು ಅವಕಾಶವಿದೆ. ರೈತ ಸಂಘದ ಪದಾಧಿಕಾರಿಗಳಲ್ಲಿ ಬೇರೆ ಬೇರೆ ಪಕ್ಷದವರಿದ್ದಾರೆ. ಇದು ರೈತ ಸಂಘದ ಐಕ್ಯತೆಗೆ, ರೈತ ಸಂಘದ ಹೋರಾಟಕ್ಕೆ ಯಾವತ್ತು ಸಮಸ್ಯೆಯಾಗಿಲ್ಲ. ಆದರೆ ರೈತ ಸಂಘದ ಅಧ್ಯಕ್ಷರಾಗಿದ್ದ ಬಿ. ಸತ್ಯನಾರಾಯಣಸಿಂಗ್ ರವರು ಒಂದು ಬಾರಿ, ಗೌಡ್ರ ಶಂಕರಗೌಡ ರವರು ಮೂರು ಬಾರಿ ಶಾಸಕರಾಗಿದ್ದಾರೆ. ಆದರೆ ಅವರು ತಮ್ಮದೇ ಆದ ರಾಜಕೀಯ ಪಕ್ಷಗಳ ಹೆಸರಿನಲ್ಲಿ ನಿಂತು ಶಾಸಕರಾಗಿದ್ದಾರೆಯೇ ಹೊರತು ರೈತ ಸಂಘದಲ್ಲಿದ್ದಾಗ ಅವರು ರೈತರ ಪರವಾಗಿ ಹೋರಾಟ ಮಾಡಿದ

ಹಿನ್ನೆಲೆಯೂ ಒಂದು ಕಾರಣವೂ ಆಗಿದೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಕಬ್ಬು ಬೆಳೆಗಾರರ ಸಮಸ್ಯೆಗಳಿಗೆ ಹಮ್ಮಿಕೊಂಡ ಹೋರಾಟ ಮತ್ತು ರೈತ ಸಂಘಟನೆಯಲ್ಲಿ ತಾವು ಮಾಡಿದ ಕ್ರಿಯಾಶೀಲ ಚಟುವಟಿಕೆಗಳಿಂದಲೂ, ತಾವು ರೈತರ ಬೆಂಬಲ ಪಡೆಯಲು ಸಾಧ್ಯವಾಯಿತು. ಆ ಮೂಲಕ ಶಾಸಕರಾಗಿ ಚುನಾಯಿತರಾಗಲು ಸಾಧ್ಯವಾಯಿತೆಂಬುದನ್ನು ದಿವಂಗತ ಸತ್ಯನಾರಾಯಣ ಸಿಂಗ್ ಹಾಗೂ ಜಿ. ಶಂಕರಗೌಡರು ಸ್ಮರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಈ ಹಿನ್ನಲೆಯಲ್ಲಿಯೇ ಅವರು ಗೆದ್ದಾಗಲೆಲ್ಲಾ ಕಬ್ಬು ಬೆಳೆಗಾರರ ಸಮಸ್ಯೆಗಳಿಗೆ, ರೈತ ಸಂಘದ ಬೆಳವಣಿಗೆಗೆ ವಿಶೇಷವಾಗಿ ಶ್ರಮಿಸುವುದು ಅನಿವಾರ್ಯವಾಗಿತ್ತೆಂದು ಈಗಿನ ರೈತ ಸಂಘದ ಅಧ್ಯಕ್ಷರಾದ ಕಿಚಿಡಿ ಲಕ್ಷ್ಮಣ್‌ರವರು ಹೇಳುತ್ತಾರೆ.

## ರೈತ ಸಂಘದೊಂದಿಗೆ ರಾಜ್ಯಮಟ್ಟದ ರೈತ ಸಂಘಗಳ ಸಂಬಂಧ :

ಕರ್ನಾಟಕ ರಾಜ್ಯ ಅಸ್ಥಿತ್ವಕ್ಕೆ ಬಂದಾಗಿನಿಂದಲೂ ಹೊಸಪೇಟೆಯಲ್ಲಿ ಸ್ಥಳೀಯ ರೈತ ಸಂಘ ತನ್ನ ಸ್ವಂತ ಅಸ್ಥಿತ್ವವನ್ನು ಉಳಿಸಿಕೊಂಡು ಬಂದಿದೆ. ರಾಜ್ಯ ಮಟ್ಟದ ರೈತ ಸಂಘಟನೆಗಳಾದ ಕರ್ನಾಟಕ ಪ್ರಾಂತ ರೈತ ಸಂಘ, ಕರ್ನಾಟಕ ರಾಜ್ಯ ರೈತ ಸಂಘಟನೆಗಳೊಂದಿಗೆ ಉತ್ತಮ ಸಂಬಂಧ ಇಟ್ಟುಕೊಂಡು ಬಂದಿದೆ. ಸಮಸ್ತ ರೈತರ ಹಿತಾಸಕ್ತಿಯನ್ನು ಇಟ್ಟುಕೊಂಡು ಈ ರೈತ ಸಂಘಗಳು ಕಾರ್ಯಕ್ರಮ ಹಮ್ಮಿಕೊಂಡಾಗಲೆಲ್ಲಾ ಹೊಸಪೇಟೆ ರೈತ ಸಂಘ ಬೆಂಬಲ ನೀಡಿದೆ. ಧರಣಿ, ಸತ್ಯಾಗ್ರಹ, ಮುಷ್ಕರ, ಹೊಸಪೇಟೆ ಬಂದ್ ನಂತಹ ಚಳುವಳಿಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಆ ಸಂಘಟನೆಗಳ ಯಶಸ್ವಿನಲ್ಲಿ ತಾನು ಭಾಗವಹಿಸಿದೆ. ಅನೇಕ ಸಂದರ್ಭದಲ್ಲಿ ಈ ರೈತ ಸಂಘಟನೆಗಳಿಗೆ ಹಣಕಾಸಿನ ನಿಧಿಯನ್ನು ರೈತರಿಂದ ಸಂಗ್ರಹಿಸಿ ನೀಡಲಾಗಿದೆ. ಅನೇಕ ಬಾರಿ ರೈತರ ಸಮಾವೇಶಗಳನ್ನು ಯಶಸ್ವಿಯಾಗಿ ನಡೆಸಿಕೊಟ್ಟ ರೈತರ ಸಮಸ್ಯೆಗಳ ಚರ್ಚೆಗೆ ಮತ್ತು ಸಮಸ್ಯೆಗಳ ನಿವಾರಣೆಗೆ ಮಹತ್ವದ ತೀರ್ಮಾನಗಳನ್ನು ತೆಗೆದುಕೊಳ್ಳಲು ಸೂಕ್ತ ವೇದಿಕೆ ಒದಗಿಸಿಕೊಟ್ಟ ಹೆಗ್ಗಳಿಕೆ ರೈತ ಸಂಘಕ್ಕಿದೆ.

## ಕರ್ನಾಟಕ ಪ್ರಾಂತ ರೈತ ಸಂಘದ ಸಾಂಘಿಕ ಪ್ರಯತ್ನ :

ಅಖಿಲ ಭಾರತ ಕಿಸಾನ್ ಸಭಾದ ಕರ್ನಾಟಕ ಶಾಖೆಯಾಗಿರುವ ಕರ್ನಾಟಕ ಪ್ರಾಂತ ರೈತ ಸಂಘವು ನಡೆಸಿದ ಧೀರೋದ್ದಾತ ನರಗುಂದ ರೈತರ ಬಂಡಾಯ ಕರ್ನಾಟಕ ಚರಿತ್ರೆಯಲ್ಲಿ ದೀಮಂತ ಹೋರಾಟವಾಗಿದೆ. ಮಲಪ್ರಭಾ ನೀರಾವರಿ ರೈತರ ಸಮನ್ವಯ ಸಮಿತಿ ಹೆಸರಿನಲ್ಲಿ ನಡೆದ ಈ ಚಳುವಳಿ ಇಡೀ ಕರ್ನಾಟಕದ ತುಂಬಾ ರೈತರನ್ನು ಬಡಿದೆಬ್ಬಿಸಿತು. ೧೯೮೦ ರಲ್ಲಿ ತಾಲೂಕು ಕಛೇರಿಯ ಮುಂದೆ ೨೦ ದಿನಗಳ ನಿರಂತರ ಸತ್ಯಾಗ್ರಹ ನಡೆಸಿದರೂ, ಅರಬೆತ್ತಲೆ ಮೆರವಣಿಗೆ ನಡೆಸಿದರೂ ಸರಕಾರ ಜಗ್ಗಲಿಲ್ಲ. ಮೃಗಶಿರ ಮಳೆಯಲ್ಲಿ ಬನಿಯನ್ ಹಾಕಿಕೊಂಡು ಬಾರುಕೋಲು ಹಿಡಿದು ಚಳುವಳಿ ಮಾಡಿದರು. ಆದರೂ ರೈತರಿಗೆ ಸೂಕ್ತ ಪರಿಹಾರ ನೀಡುವಲ್ಲಿ ಅಂದಿನ ಸರಕಾರ ವಿಫಲವಾಯಿತು.

ಅಂದು ಚಳುವಳಿಯ ನೇತೃತ್ವವನ್ನು ಪಡೆದಿದ್ದ ಮುಖಂಡರು ಹೊಸದಾಗಿ ಅಸ್ಥಿತ್ವಕ್ಕೆ ಬಂದ ಗುಂಡೂರಾವ್ ಸರಕಾರಕ್ಕೆ ಪ್ರಮುಖ ಬೇಡಿಕೆಗಳಾದ ಮಲಪ್ರಭ ಯೋಜನೆಗೆ ರೈತರಿಂದ ಪಡೆದಿದ್ದ ಭೂಮಿಗೆ ಸೂಕ್ತ ಪರಿಹಾರ, ಒಳಚರಂಡಿ ದುರಸ್ಥಿ, ನೀರಾವರಿ, ಕಾನೂನು ವ್ಯವಸ್ಥೆ, ಕ್ವಿಂಟಲ್ ಹತ್ತಿಗೆ ೫೦೦ ರಿಂದ ೮೦೦ ರೂಪಾಯಿ ಬೆಲೆ, ಮೊದಲಾದ ಬೇಡಿಕೆಗಳನ್ನು ಮುಖ್ಯಮಂತ್ರಿ ಗುಂಡೂರಾವ್, ಕಂದಾಯ ಮಂತ್ರಿ ಎಸ್. ಬಂಗಾರಪ್ಪ ರವರನ್ನು ಭೇಟಿ ಮಾಡಿ ಸಲ್ಲಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಇದರಿಂದ ಚಳುವಳಿಯಲ್ಲಿ ಭಾಗವಹಿಸಿದ್ದ ರೈತರು ನಿರ್ಣಾಯಕ ಹೋರಾಟ ಮಾಡುವುದು ಅನಿವಾರ್ಯವಾಯಿತು. ಇದರ ಅಂಶವಾಗಿ, ನರಗುಂದ, ನವಲಗುಂದ, ಸವದತ್ತಿಯಲ್ಲಿ ಬಂದ್ ಆಚರಿಸಲಾಯಿತು. ೧೦,೦೦೦ ಕ್ಕೂ ಹೆಚ್ಚಿನ ರೈತರು ಚಳುವಳಿಯಲ್ಲಿ ಭಾಗವಹಿಸಿದ್ದರು.

ಸಾವಿರಾರು ರೈತರು ತಹಶೀಲ್ದಾರರು ಕಛೇರಿಯನ್ನು ಜುಲೈ ೨೧ ರಂದು ಮುಚ್ಚಲು ಒತ್ತಾಯಿಸುತ್ತಿದ್ದರೂ ತಹಶೀಲ್ದಾರರು ಕಿವಿಕೊಡದೆ ಕಛೇರಿಯ ಮುಂದೆ ಮಲಗಿದ್ದ ರೈತರನ್ನು ಬೂಟುಗಾಲಿನಿಂದ ತುಳಿದುಕೊಂಡೆ ಕಛೇರಿಗೆ ಹೋಗಲು ಯತ್ನಿಸಿದರು. ಆಗ ಸಹನೆ ಕಳೆದುಕೊಂಡ ಸಾವಿರಾರು ಸಂಖ್ಯೆಯಲ್ಲಿ ನೆರೆದಿದ್ದ ರೈತರನ್ನು ಹೆದರಿಸಿ, ಚದುರಿಸಲು ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಒಬ್ಬ ಯದ್ವಾ ತದ್ವಾ ತನ್ನ ರಿವಾಲ್ವಾರಿನಿಂದ ಗುಂಡು ಹಾರಿಸಿದನು. ಈರಪ್ಪ ಬಸಪ್ಪ ಕಡ್ಲಿಕೊಪ್ಪ ಎಂಬ ೨೪ ವರ್ಷದ ರೈತ ಸ್ಥಳದಲ್ಲಿಯೇ ಪೋಲೀಸನ ಗುಂಡಿಗೆ ಬಲಿಯಾದನು. ಅದೇ ಸ್ಥಳದಲ್ಲಿ ರೊಚ್ಚಿಗೆದ್ದ ರೈತರು ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ತಲೆಯನ್ನು ಕಲ್ಲಿನಿಂದ ಜಜ್ಜಿ ಸಾಯಿಸಿ ಬಿಟ್ಟರು. ಪೋಲಿಸ್ ಪೇದೆಯೊಬ್ಬನನ್ನು ಇದೇ ರೀತಿ ಕೊಂದರು. ಕೆಲವು ದುಷ್ಕರ್ಮಿಗಳು ಪರಿಸ್ಥಿತಿಯ ದುರ್ಲಾಭ ಪಡೆದು ತಹಶೀಲ್ದಾರ್ ಕಛೇರಿಯಿಂದ ವಶಪಡಿಸಿಕೊಳ್ಳಲಾದ ಸಾರಾಯಿಯನ್ನು ಕುಡಿದ ಅಮಲಿನಲ್ಲಿ ೫೦ ಬ್ಯಾರೆಲ್‌ಗಳಿಗೆ ಬೆಂಕಿಹಚ್ಚಿದರು. ಬೆಟರ್‌ಮೆಂಟ್‌ಲೆವಿ ಆಫೀಸನ್ನು ಸುಡುವುದೇ ಗುರಿಯಾಗಿತ್ತು. ದೂರವಾಗಿ ಇತ್ಯಾದಿ ಸಂಪರ್ಕವನ್ನು ಕಡಿದು ಹಾಕಲಾಯಿತು. ಈ ಘಟನೆ ಕರ್ನಾಟಕದ ರೈತರ ಸಂಘಟನೆಯಲ್ಲಿ ಮರೆಯಲಾರದ ಘಟನೆಯಾಗಿದೆ. ನರಗುಂದ, ನವಲಗುಂದಾ ರೈತ ಬಂಡಾಯವೆಂದೇ ಪ್ರಸಿದ್ಧಿ ಪಡೆದಿದೆ. ರೈತರ ತೀವ್ರ ಪ್ರತಿಭಟನೆಗೆ ಕೊನೆಗೂ ಗುಂಡೂರಾವ್ ಸರಕಾರ ಮಣಿಯಲೇ ಬೇಕಾಯಿತು. ಅವರ ಬೇಡಿಕೆಗಳನ್ನು ಈಡೇರಿಸಲೇ ಬೇಕಾಯಿತು.

ಈ ಹೋರಾಟದ ಪ್ರಭಾವದಿಂದ ಕರ್ನಾಟಕ ಪ್ರಾಂತ ರೈತ ಚಟುವಟಿಕೆಗಳು ರಾಜ್ಯದಾದ್ಯಂತ ವಿಸ್ತಾರಗೊಳ್ಳತೊಡಗಿದವು. ಹೊಸಪೇಟೆ ತಾಲೂಕಿನಲ್ಲಿ ಸಂಘಟನೆಯ ಪ್ರಯತ್ನಗಳು ನಡೆದವು. ನರಗುಂದಾ ರೈತ ಬಂಡಾಯದ ಸ್ಪೂರ್ತಿಯುತ ನಾಯಕರಾದ ವಿ. ಎನ್. ಹಳಕಟ್ಟಿ, ಎನ್. ಕೆ. ಉಪಾಧ್ಯಾಯ ಮತ್ತು ಪಿ. ರಾಮಚಂದ್ರರಾವ್ ರವರ ನೇತೃತ್ವದಲ್ಲಿ ಹೊಸಪೇಟೆ ತಾಲೂಕಿನ ಒಣಬೇಸಾಯದ ರೈತರ ಸಂಘಟನೆ ನಡೆಯಿತು. ೧೯೮೧ ಮತ್ತು ೧೯೮೨ ರಲ್ಲಿ ಹೊಸಪೇಟೆಯಲ್ಲಿ ಸುಮಾರು ೮೦೦ ಕ್ಕೂ ಹೆಚ್ಚು ರೈತರನ್ನು ಸೇರಿಸಿ ಬೃಹತ್ ಸಮಾವೇಶವನ್ನು ನಡೆಸಿದೆ. ಮಳೆಯಾಶ್ರಿತ ಪ್ರದೇಶದ ರೈತರನ್ನು ಸಂಘಟಿಸಿ ನೀರಾವರಿ ಬೇಡಿಕೆಯನ್ನಿಟ್ಟು 'ಭದ್ರಾ ಬೈಪಾಸ್' ಗಾಗಿ ಚಳುವಳಿ

ಮಾಡಿದೆ. ಇದಕ್ಕಾಗಿ ದಾವಣಗೆರೆಯಲ್ಲಿ ಬೃಹತ್ ಟ್ರ್ಯಾಕ್ಟರ್ ಜಾಥಾ ನಡೆಸಿತು. ಸುಮಾರು ೨ ಸಾವಿರ ರೈತರು ದಾವಣಗೆರೆಯಲ್ಲಿ ಸೇರಿ ನೀರಾವರಿಗಾಗಿ ಹೋರಾಟ ಮಾಡಿದ್ದು, ಹೊಸಪೇಟೆ ತಾಲೂಕಿನಿಂದಲೂ ನೂರಾರು ರೈತರು ಜಾಥದಲ್ಲಿ ಭಾಗವಹಿಸಿದ್ದರು. ಮುಖ್ಯವಾಗಿ ಖುಷ್ಕಿ ಭೂಮಿಯನ್ನು ಸಾಗುವಳಿ ರೈತರ ಬೇಡಿಕೆಗಳಿಗೆ ಹೆಚ್ಚಿನ ಒತ್ತನ್ನು ಕೊಟ್ಟು, ಪ್ರಾಂತ ರೈತ ಸಂಘದಿಂದ ಹಲವಾರು ಬಾರಿ ಧರಣಿ, ಮತಪ್ರದರ್ಶನ, ರಸ್ತೆ ತಡೆ ಚಳುವಳಿ, ಬೆಂಗಳೂರು ಚಲೋ ಕಾರ್ಯಕ್ರಮ ಹಮ್ಮಿಕೊಂಡು ರೈತರನ್ನು ಸಂಘಟಿಸಲು ಪ್ರಯತ್ನಿಸಲಾಗಿದೆ. ಜಾಥಾಗಳಿಗೆ ರೈತರನ್ನು ೧೯೮೩ ರಲ್ಲಿ ಅಧಿಕಾರಿಗಳ ಭ್ರಷ್ಠತೆಯ ವಿರುದ್ಧ ಸುಮಾರು ೨೫ ಕಿ.ಮೀ. ಗಳ ಬೃಹತ್ ಪಾದಯಾತ್ರೆ ಕೈಗೊಳ್ಳಲಾಗಿತ್ತು. ಈ ಪಾದಯಾತ್ರೆಯಲ್ಲಿ ರೈತರನ್ನು ಕರೆದುಕೊಂಡು ಹೋಗುವಾಗ ರೈತರೇ ಸ್ವತಃ ಹಾಡು ರಚಿಸಿ, ಹೋರಾಟದ ಹಾಡು ಹೇಳುತ್ತಿದ್ದರು. ಕೆಲವು ಸಾಲುಗಳು ಇಂತಿವೆ.

ಬರ್ರೆಣ್ಣ ಬರ್ರ್ಯೋ ಬೇಗ ಬರ್ರೆಣ್ಣಾ
ರೈತಾ ಬಾಂಧವರೆಲ್ಲಾ ಒಗ್ಗಟ್ಟಾಗೋಣ ॥
ಲಂಚತಿನ್ನೋ ಸರಕಾರನ್ನ ಕಿತ್ತು ಒಗೆಯೋಣ
ದುಡಿಮೆ ಮಾಡುವ ಸರ್ಕಾರವನ್ನ ರಚನೆ ಮಾಡೋಣ
॥ ಬರ್ರೆಣ್ಣ ಬರ್ರ್ಯೋಬೇಗ ಬರ್ರೆಣ್ಣಾ ॥
ಗುಂಡು ಹೊಡೆಯೋ ಸರಕಾರಕ್ಕೆ ಧಿಕ್ಕಾರ ಹೇಳೋಣ
ರೈತರಿಗಾಗಿ ದುಡಿಯೋರನ್ನ ಅಧಿಕಾರಕ್ಕೆ ತರೋಣ
॥ ಬರ್ರೆಣ್ಣ ಬರ್ರ್ಯೋಬೇಗ ಬರ್ರೆಣ್ಣಾ॥

ನರಗುಂದ ನವಲಗುಂದದ ರೈತ ಬಂಡಾಯವನ್ನು ನೆನೆಯುವ ಮತ್ತೊಂದು ಹಾಡನ್ನು ರೈತರ ಹಾಡಿನ ತಂಡ ಜಾಥಾದಲ್ಲಿ ಹಾಡುತ್ತಿದ್ದರು. ಅವುಗಳ ಕೆಲ ಸಾಲುಗಳು ಹೀಗಿವೆ.

ಉರುಳೀತು ರುಂಡಾ, ಹರಿಯೀತು ರಕ್ತ
ಭೂತಾಯಿಯ ಮಡಿಲೆಲ್ಲಾ ಕೆಂಪಾಯಿತೋ ॥
ಅರಮನೆ ಒಳಗೆಲ್ಲಾ ಬಡವರೆ ನೆರಳಾಡಿ,
ಗೋಡೆಗೆ ಕೆಂಪಾನೆ ಚಿತ್ತಾರ ಮೂಡಿ,
ಬಾಳುವ ಬಯಕೇಲಿ ಬಾಳೆಲ್ಲಾ ಗೋಳಾಗಿ
ರೈತರ ಎದೆಗೂಡು ಬಿದ್ದೋಯಿತೋ ॥ ರೈತರ ಎದೆ
ಗೂಡು ಬಿದ್ದೋಯಿತೊ........॥ ಉರುಳೀತು ರುಂಡಾ ಹರಿಯೀತು ರಕ್ತ ॥

೧೯೮೨ ರ ಚುನಾವಣೆಯಲ್ಲಿ ಪ್ರಾಂತ ರೈತ ಸಂಘದ ನೇತೃತ್ವದಲ್ಲಿ ಹೊಸಪೇಟೆ ತಾಲೂಕಿನ ಒಣಬೇಸಾಯದ ಹಳ್ಳಿಗಳಲ್ಲಿ ಸಮುದಾಯ ಸಾಂಸ್ಕೃತಿಕ ತಂಡದ ಸಹಯೋಗದೊಂದಿಗೆ ರೈತ ವಿರೋಧಿ ಸರಕಾರದ ವಿರುದ್ಧ ಮತ ಚಲಾಯಿಸಲು ಈ ಕೆಳಗಿನಂತೆ ಹಾಡುಕಟ್ಟಿ ಪ್ರಚಾರ ಮಾಡಿದ್ದನ್ನು ನೋಡಬಹುದು.

ನಿತ್ಯ ನಡೆಯೋ ಸಂಗ್ತಿಯನ್ನು ಸತ್ಯವಾಗಿ ಹೇಳುತೇವಿ ಚಿತ್ತವಿಟ್ಟು ಕೇಳಿರಿ ಜನರೆಲ್ಲಾ। ಎತ್ತೆತ್ತ
ನೋಡಿದರೂ, ಎತ್ತೆತ್ತಿ ಕಾಣುವರು
ಮಿಡತೆಯಂತೆ ಬಾಳುವ ಜನರೆಲ್ಲಾ? ಹೊಯ್ ಮಿಡತೆ
ಯಂತೆ ಬಾಳುವ ಜನರೆಲ್ಲಾ ॥
ರೈತರ ಸೇವೆ, ಹೊಯ್ ರೈತರ ಸೇವೆ ಮಾಡ್ತಿವಂತ
ಘಂಟೆಗಟ್ಲೆ ಭಾಷಣ ಮಾಡಿ। ಗೆದ್ದ ಮ್ಯಾಲೆ ಕೊಟ್ಟಮಾತ
ಮರ್‍ತು ಬಿಡ್ತಾರೆ। ಹೊಯ್ ಗೆದ್ದ ಮೇಲೆ ಕೊಟ್ಟಮಾತ
ಮರ್‍ತು ಬಿಡ್ತಾರೆ ॥ ನಿತ್ಯ ನಡೆಯೋ ಸಂಗ್ತಿಯನ್ನು ಸತ್ಯವಾಗಿ ಹೇಳುತೇನಿ ॥

ಈ ಹಾಡಿನ ಜೊತೆಗೆ ನರಗುಂದ ರೈತ ಬಂಡಾಯದ ಮೇಲೆ ಕಾಣಿಸಿದ '' ಉರುಳೀತು ರುಂಡಾ, ಹರಿಯಾತುರಕ್ತಾ'' ಹಾಡಿನೊಂದಿಗೆ ಮತ್ತೊಂದು ಹಾಡನ್ನು ಹೇಳಿ ಸರಕಾರದ ವಿರುದ್ಧ ರೈತರನ್ನು ಜಾಗೃತ ಗೊಳಿಸುತ್ತಿದ್ದುದು ಕಂಡು ಬರುತ್ತದೆ. ಬೈಪಾಸ್ ಕಾಲುವೆ ನಿರ್ಮಾಣಕ್ಕಾಗಿ ನೀರಾವರಿ ಇಲ್ಲದ ಗಾದಿಗನೂರು, ಬೈಲುವದ್ದಿಗೇರಿ, ಧರ್ಮಸಾಗರ, ಮರಿಯಮ್ಮನಹಳ್ಳಿ ಚಿಲಕನಹಟ್ಟಿ ಮೊದಲಾದ ಹಳ್ಳಿಗಳಲ್ಲಿ ರೈತರ ಸಂಘಟನೆಗಾಗಿ ಸಂಜೆ ಹಳ್ಳಿಗಳಿಗೆ ಹೋದಾಗ ದೇವಸ್ಥಾನಗಳಲ್ಲಿ ಹಾಡು ಭಾಷಣ ಮುಗಿಯುವ ಹೊತ್ತಿಗೆ ರಾತ್ರಿ ೧೧ ಗಂಟೆ ಕಳೆಯುತ್ತಿತ್ತು. ಆಗ ರೈತರು ಪ್ರಾಂತ ಸಂಘದ ಸದಸ್ಯರಿಗೆ ತಮ್ಮ ಮನೆಯಲ್ಲಿ ರಾತ್ರಿ ಊಟ ಮಾಡಿ ಮಿಕ್ಕಿದ ಒಂದು ಮನೆ ಸಾರು ಮತ್ತೊಂದು ಮನೆಯ ಮುದ್ದೆ ಸೇರಿಸಿ ಊಟಕ್ಕೆ ಬಡಿಸುತ್ತಿದ್ದರಂತೆ ಇದನ್ನೆಂದಿಗೂ ಮರೆಯಲು ಸಾಧ್ಯವಾಗುತ್ತಿಲ್ಲವೆಂದು ಅಂದಿನ ಸಂಘಟಕರೊಬ್ಬರಲ್ಲಾದ ಸಿದ್ಧಲಿಂಗಪ್ಪ ತಿಳಿಸುತ್ತಾರೆ.

ಗುಡಿಸಲು ಬೀಳುವಾಗ ಬಂಗಲೆ ನಗುತ್ತಿದ್ದು,
ಗುಡಿಸಲು ಬೀಳುವಾಗ ಬಂಗಲೆ ನಗುತ್ತಿದ್ದೋ ನಮ್ಮೂರ ಮೋರಿ ಹೆಣ ತುಂಬಿ,
ನಮ್ಮೂರಮೋರಿ ಹೆಣ ತುಂಬಿ, ಹರಿಯಿತು
ರಕ್ತದ ಕೋಡಿ ಊರೆಲ್ಲಾ ॥ ರಕ್ತಾದ ಕೋಡಿ ಊರೆಲ್ಲಾ ॥

(ಕವನ : ದಲಿತಕವಿ ಸಿದ್ದಲಿಂಗಯ್ಯ ರಚಿತ)

೧೯೮೯ ರಲ್ಲಿ ಕರ್ನಾಟಕ ಪ್ರಾಂತ ರೈತ ಸಂಘದ ರಾಜ್ಯ ಸಮಿತಿಯ ಕರೆಯ ಮೇರೆಗೆ ರಾಜ್ಯ ಸರಕಾರದ ರೈತ ವಿರೋಧಿ ನೀತಿಯನ್ನು ಪ್ರತಿಭಟಿಸಿ ಭೂಮಿ ಪ್ರಶ್ನೆ, ನೀರಾವರಿ ಪ್ರಶ್ನೆ, ಸಾಲ ನೀತಿ, ಕೃಷಿ ಕೂಲಿಕಾರರ ಕನಿಷ್ಠ ಕೂಲಿಯ ಪ್ರಶ್ನೆ, ರೈತರ ಬೆಳೆಗಳಿಗೆ ಬೆಂಬಲದ ಬೆಲೆ, ವಸತಿ ಪ್ರಶ್ನೆಗಾಗಿ ನಡೆದ ಲಕ್ಷಾಂತರ ರೈತರ ಬೃಹತ್ ಪ್ರತಿಭಟನಾ ಪ್ರದರ್ಶನದಲ್ಲಿ ತಾಲೂಕಿನ ಅಸಂಘಟಿತ ಕೂಲಿಕಾರರೂ ಸಾವಿರಾರು ಜನ ಭಾಗವಹಿಸಿದ್ದಾರೆ. ಆಕ್ರಮ ಭೂಮಿಯ ಸಕ್ರಮಕ್ಕಾಗಿ ಒಂದುವಾರ ಕಾಲ ನಡೆದ ರಾಜಭವನ ಚಲೋ ಕಾರ್ಯಕ್ರಮದಲ್ಲಿ ನೂರಾರು ರೈತರು ಭಾಗವಹಿಸಿ ಬಂಧನಕ್ಕೊಳಗಾಗಿರುವರು. ಕಳಪೆ ಬೀಜ, ಕಳಪೆ ಕೀಟನಾಶಕಗಳ ವಿರುದ್ಧವೂ ಹಲವು ಬಾರಿ ಪ್ರತಿಭಟನೆ ಮಾಡಿ ಪರಿಹಾರ ಪಡೆದ ಉದಾಹರಣೆಗಳಿವೆ. ಬರಗಾಲದ ಕಾರಣದಿಂದ ರೈತರ ಸಾಲ ಮನ್ನಾಕ್ಕೆ ಒತ್ತಾಯಿಸಿ ಅದೇ ಸಂದರ್ಭದಲ್ಲಿ ರೈತರ ಆಸ್ತಿ ಮತ್ತಿತರ ರೈತರ ಸಲಕರಣೆಗಳನ್ನು ಹರಾಜು ಹಾಕಿರುವುದನ್ನು ಪುನಃ ತಮ್ಮ ವಶಕ್ಕೆ ಪಡೆದ ಹೋರಾಟಗಳು ಜಿಲ್ಲಾ ಯಾದ್ಯಂತ ನಡೆದಿವೆ. ೧೯೯೩ ರಲ್ಲಿ ಹೊಸಪೇಟೆಯ ಬುಕ್ಕ ಸಾಗರದಲ್ಲಿ ಸರಕಾರವು ರೈತರಿಂದ ವಶಪಡಿಸಿಕೊಂಡ ಆಸ್ತಿಯನ್ನು ಮತ್ತೊಮ್ಮೆ ರೈತರೇ ಮುಟ್ಟುಗೋಲು ಹಾಕಿಕೊಂಡ ಘಟನೆ ಮಹತ್ವವಾದ ಘಟನೆಯಾಗಿದೆ.

ಅಷ್ಟೇ ಅಲ್ಲದೆ ತೀರಾ ಇತ್ತೀಚೆಗೆ ಹೊಸಪೇಟೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘದ ಕರೆಯ ಮೇರೆಗೆ ಸ್ಥಳೀಯ ರೈತ ಸಂಘದ ಮುಂದಾಳತ್ವದಲ್ಲಿ ರಾಜ್ಯಮಟ್ಟದ ಸುಮಾರು ಒಂದು ಲಕ್ಷ ರೈತರ ಬೃಹತ್ ಸಮಾವೇಶ ಜಿಲ್ಲೆಯ ಅಸಂಘಟಿತ ರೈತರು, ಕೂಲಿಕಾರರನ್ನು ಒಳಗೊಂಡ ಈ ಸಮಾವೇಶ ರೈತರ ಕತ್ತನ್ನೇ ಹಿಸುಕುವ ಡಂಕೆಲ್ ಪ್ರಸ್ತಾವನೆಯನ್ನು ವಿರೋಧಿಸುವ ಚಾರಿತ್ರಿಕ ನಿರ್ಧಾರದಿಂದಾಗಿ ಸಾಮ್ರಾಜ್ಯಶಾಹಿ ಕುತಂತ್ರಗಳನ್ನು ತಾವು ವಿರೋಧಿಸುತ್ತೇವೆಂಬುದನ್ನು ಸೂಚಿಸಿತಲ್ಲದೇ, ರೈತರು ಕೇವಲ ತಮಗಾಗಷ್ಟೇ ಅಲ್ಲದೆ ಇಡೀ ದೇಶದ ಅಭಿವೃದ್ಧಿಗಾಗಿ ಪರ್ಯಾಯ ಧೋರಣೆಗಾಗಿ ದುಡಿಯುವರೆಂಬುದನ್ನು ಇಡೀ ದೇಶಕ್ಕೆ ಈ ಸಮಾವೇಶ ತೋರಿಸಿಕೊಟ್ಟಿತು.

## ಭಾಷಾ ಸಾಂಘಿಕ ನೆಲೆಯ ಪರಿಣಾಮಗಳು

### ೧. ಕನ್ನಡ ಭಾಷೆಯ ಬಗ್ಗೆ ಜಾಗೃತಿ :

ಇಲ್ಲಿಯವರೆಗೂ ಕನ್ನಡ ಭಾಷೆಯ ಬಗ್ಗೆ ಆಷ್ಟೊಂದು ಜಾಗೃತಿ ಸ್ಥಳೀಯರ ಮೇಲಾಗಿರಲಿಲ್ಲ ಈ ಚಳುವಳಿಯಿಂದ ಕನ್ನಡ ಪ್ರಜ್ಞೆ ಜಾಗೃತವಾಯಿತು. ದ್ವಿಭಾಷಿಕ ಪ್ರದೇಶ (ಕನ್ನಡ, ತೆಲುಗು) ವಾದ ತಾಲೂಕಿನಲ್ಲಿ ಕನ್ನಡ ಭಾಷಾಭಿಮಾನ ಮೂಡತೊಡಗಿತು. ಕನ್ನಡ ನಾಡಿನಲ್ಲಿ ಕನ್ನಡವೇ ಪ್ರಥಮ ಭಾಷೆಯಾಗಬೇಕೆಂಬುದು ಜನರ ಅಭಿಲಾಷೆಯಾಯಿತು. ಆಡಳಿತ ಭಾಷೆ ಕನ್ನಡವಾಗಬೇಕು ಕನ್ನಡ ಭಾಷೆಗೆ ಎಲ್ಲಾ ಜನತೆ ಆದೀರರಾಗಬೇಕೆಂಬ ತಿಳುವಳಿಕೆ ಜನರಲ್ಲಿ ಮೂಡ ತೊಡಗಿತು ಕನ್ನಡದ ಬಗ್ಗೆ ವಿಶೇಷವಾಗಿ ಆಸಕ್ತಿ, ಅಭಿಮಾನ ಈ ಚಳುವಳಿಯಿಂದ ಮೂಡಿತೆಂಬುದು ಚಳುವಳಿಯಲ್ಲಿ ಭಾಗವಹಿಸಿದ್ದ ಕನ್ನಡಪರ ಹೋರಾಟಗಾರರ ಅಚಲವಾದ ನಂಬಿಕೆಯಾಗಿದೆ.

## ೨. ಕನ್ನಡ ಚಲನ ಚಿತ್ರಗಳಿಗೆ ಬೇಡಿಕೆ :

ಗೋಕಾಕ್ ಚಳುವಳಿಯ ಸಂದರ್ಭದ ಹೋರಾಟಗಳ ಬೇಡಿಕೆಗಳಲ್ಲಿ ಕನ್ನಡ ಚಲನ ಚಿತ್ರಗಳನ್ನು ಕಡ್ಡಾಯವಾಗಿ ಪ್ರದರ್ಶಿಸಬೇಕೆಂಬ ಬೇಡಿಕೆಯನ್ನು ಮಂಡಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಇಲ್ಲಿಯ ಚಿತ್ರ ಮಂದಿರಗಳಲ್ಲಿ ಕನ್ನಡ ಚಲನ ಚಿತ್ರಗಳನ್ನು ಪ್ರದರ್ಶಿಸುವಂತೆ ಒತ್ತಾಯ ಮಾಡಲಾಯಿತು. ಇದರಿಂದ ಚಳುವಳಿಯ ತೀವ್ರತೆ ಅರಿತದ್ದ ಮಾಲೀಕರು ಕನ್ನಡ ಚಲನ ಚಿತ್ರಗಳನ್ನು ಪ್ರದರ್ಶಿಸಬೇಕಾಯಿತು. ಇದು ಕೂಡಾ ಈ ತಾಲೂಕಿನ ಮೇಲೆ ಆದ ಬದಲಾವಣೆಯೆಂದು ಹೇಳಬಹುದು.

## ೩. ಕನ್ನಡ ನಾಮ ಫಲಕಗಳು ಬಂದಿದ್ದು:

ಸರಕಾರಿ ಕಛೇರಿ, ವಾಣಿಜ್ಯ ಮಳಿಗೆಗಳು, ಕಿರಾಣಿ ಅಂಗಡಿಗಳ ನಾಮಫಲಗಳನ್ನು ಕನ್ನಡ ಭಾಷೆಯಲ್ಲಿ ಬರೆಸುವ ಪರಿಪಾಠ ಬೆಳೆದಿದ್ದು ಗೋಕಾಕ್ ಚಳುವಳಿಯ ಪ್ರಭಾವದಿಂದ ಎಂದು ನಿಸ್ಸಂದೇಹವಾಗಿ ಹೇಳಬಹುದು. ಕನ್ನಡ ಭಾಷೆ ಅಧಿಕೃತ ಆಡಳಿತ ಭಾಷೆಯಾಗಿರುವುದರಿಂದ ಕನ್ನಡ ಫಲಕಗಳನ್ನು ಕಡ್ಡಾಯವಾಗಿ ಬರೆಸಲು ಅಧಿಕಾರಿಗಳು ವಿಶೇಷ ಆಸ್ಥೆವಹಿಸುವಂತೆ ಈ ಚಳುವಳಿ ಪ್ರಭಾವ ಬೀರಿತು.

## ೪. ರಾಜಕೀಯ ಬದಲಾವಣೆಗೆ ರಂಗ ಸಜ್ಜು :

ಕನ್ನಡ ಭಾಷಾ ಚಳುವಳಿಯನ್ನು ನಿಭಾಯಿಸಿದ ಸರಕಾರದ ವರ್ತನೆಗೆ ೧೯೮೩ ರಲ್ಲಿ ನಡೆದ ವಿಧಾನ ಸಭಾ ಚುನಾವಣೆಯಲ್ಲಿ ೩೬ ವರ್ಷಗಳಿಂದ ರಾಜ್ಯ ಸರಕಾರದ ಚುಕ್ಕಾಣಿ ಹಿಡಿದಿದ್ದ ಕಾಂಗ್ರೆಸ್ ಸರಕಾರವನ್ನು ಸೋಲಿಸುವ ಜನಾಭಿಪ್ರಾಯದ ಅಲೆ ತಾಲೂಕಿನಲ್ಲಿಯೂ ಆಯಿತು. ಹೊಸಪೇಟೆ ವಿಧಾನಸಭಾ ಕ್ಷೇತ್ರವು ಕಾಂಗ್ರೆಸ್ ವಿರೋಧಿ ಅಭ್ಯರ್ಥಿಯನ್ನು ಚುನಾವಣೆಯಲ್ಲಿ ಗೆಲ್ಲಿಸಿತು.

# ದಲಿತ ಸಾಂಘಿಕ ನೆಲೆಯ ಪರಿಣಾಮಗಳು

## ೧. ದೇವಸ್ಥಾನದ ಪ್ರವೇಶ ನಿಷೇಧರದ್ದು :

ಈ ಘಟನೆಯಿಂದ ಜೌಕ್ ಮಾತ್ರವಲ್ಲದೆ ಹೊಸಪೇಟೆ ತಾಲೂಕಿನಲ್ಲಿ ಇತರೆ ಗ್ರಾಮಗಳಲ್ಲಿಯೂ ದಲಿತರು ಒಂದಾಗಿ ದೇವಸ್ಥಾನ ಪ್ರವೇಶಕ್ಕೆ ಮುಂದಾಗುವ ಪ್ರಯತ್ನಗಳು ಹೆಚ್ಚಾದವು. ಕೆಲವು ಗ್ರಾಮಗಳಲ್ಲಿ ದೇವಸ್ಥಾನದ ಪ್ರವೇಶಕ್ಕೆ ಅಡ್ಡಿಗಳು ಬಂದರೂ ಅವುಗಳನ್ನು ಬೇರೆ ಕಡೆಯಿಂದ ಕರೆಸುತ್ತಿದ್ದ ದಲಿತ ಮುಖಂಡರ ಧೈರ್ಯದಿಂದ ಅದರಲ್ಲಿ ಯಶಸ್ವಿಯಾಗುತ್ತಿದ್ದರು. ಈ ಪ್ರಭಾವ ಎಷ್ಟರ ಮಟ್ಟಿಗೆ ಬೆಳೆಯಿತೆಂದರೆ ಕೆಲವು ಮೇಲ್ಜಾತಿಯ ಹಿರಿಯರೇ ಸ್ವತಃ ನಿಂತು ದಲಿತರ ದೇವಸ್ಥಾನ ಪ್ರವೇಶವನ್ನು ಅನುಸರಿಸುವ ಮೂಲಕ ಇದರಲ್ಲೂ ತಾವು ಉದಾರಿಗಳೆಂಬಂತೆ ತೋರಿಸುತ್ತಿದ್ದರು. ಕೇವಲ ಹೊಸಪೇಟೆ ಮಾತ್ರವಲ್ಲದೆ ಪಕ್ಕದ ತಾಲೂಕುಗಳಾದ ಕುರುಗೋಡು, ಎಮ್ಮಿಗನೂರು ಗೇಣಿಗಿಹಾಳ್ ಗ್ರಾಮಗಳಲ್ಲಿ ದೇವಸ್ಥಾನ ಪ್ರವೇಶಿಸುವ ಹೋರಾಟಗಳು ನಡೆದವು.

**೨. ಸಾಂಘಿಕ ಪ್ರವತ್ತಿ ಕಡೆಗೆ ಒಲವು :-** ಜೌಕ್ ಗ್ರಾಮದಲ್ಲಿ ಮೇಲ್ಜಾತಿಯವರ ದೌರ್ಜನ್ಯ ವಿರೋಧಿಸಿ, ದೇವಸ್ಥಾನ ಪ್ರವೇಶಿಸಿದ ಈ ಹೋರಾಟವು ಸುತ್ತಲ ಪ್ರದೇಶದ ದಲಿತರನ್ನು ತಮ್ಮ ತಮ್ಮ ಗ್ರಾಮಗಳಲ್ಲಿ ಸಂಘಟನೆಗೊಳ್ಳಲು ಅನುವು ಮಾಡಿಕೊಟ್ಟಿತು. ದೇವಾಲಯಕ್ಕೆ ತಾವು ಏಕೆ ಪ್ರವೇಶ ಪಡೆಯಬಾರದೆಂಬ ಛಲ ಮೂಡ ತೊಡಗಿತು. ಎಲ್ಲಾ ಗ್ರಾಮಗಳಲ್ಲೂ ಜೌಕ್ ಗ್ರಾಮ ಮೂಡ ತೊಡಗಿತು. ಎಲ್ಲಾ ಗ್ರಾಮಗಳಲ್ಲೂ ಜೌಕ್ ಗ್ರಾಮ ದಂತೆಯೇ ದಲಿತರ ವಿಷಯದಲ್ಲಿ ಮೇಲ್ಜಾತಿಯವರ ಅದರಲ್ಲೂ ಭೂಮಾಲೀಕರ ದಬ್ಬಾಳಿಕೆ, ಕಿರುಕುಳ ಒಂದೇ ತೆರವಾಗಿತ್ತು. ಎಲ್ಲಾ ಗ್ರಾಮಗಳಲ್ಲಿ ಸವರ್ಣೀಯರ ಪ್ರಮುಖ ದೇವಸ್ಥಾನಗಳಲ್ಲಿ ದಲಿತರಿಗೆ ಪ್ರವೇಶ ನಿರಾಕರಿಸಲಾಗುತ್ತಿತ್ತು. ಈ ಘಟನೆಯಿಂದ ಮೊದಲೇ ಭೂಮಾಲೀಕರ ದೌರ್ಜನ್ಯಕ್ಕೆ ಒಳಗಾಗಿದ್ದ ದಲಿತ ಸಮುದಾಯದಲ್ಲಿ ರೋಮಾಂಚನ, ಹೊಸ ಉತ್ಸಾಹವನ್ನು ಮೂಡಿತ್ತು. ಇದ್ದು ಪ್ರತಿ ಹಳ್ಳಿಗಳಲ್ಲಿ ಡಾ॥ ಅಂಬೇಡ್ಕರ್ ಹೆಸರಿನ ಸಂಘಗಳ ಅಸ್ಥಿತ್ವಕ್ಕೆ ಅವಕಾಶವಾಯಿತು.

**೩) ದಲಿತರಲ್ಲಿ ಜಾಗೃತಿ ಮೂಡಿದ್ದು :** ದಲಿತರಲ್ಲಿ ಈ ಘಟನೆ ನಾವು ಕೂಡ ಇತರರಂತೆ ಮನುಷ್ಯರು, ಅವರಿಗೂ (ಸವರ್ಣೀಯರಿಗೂ) ನಮಗೂ ಯಾವುದೇ ವ್ಯತ್ಯಾಸಗಳಿಲ್ಲ. ನೂರಾರು ವರ್ಷಗಳಿಂದ ನಾವು ಅವರ ಸೇವೆ ಮಾಡುತ್ತಿದ್ದು, ನಮ್ಮನ್ನು ಶೋಷಣೆ ಮಾಡಿ ಅವರು ಮುಂದೆ ಬಂದಿದ್ದಾರೆ. ನಮ್ಮಂಥಹ ದಲಿತರಿಗೆ ಅನ್ಯಾಯವಾಗಿದೆ. ಮೇಲು, ಕೀಳು, ಬಡವ, ಬಲ್ಲಿದ, ಸವರ್ಣೀಯ, ದಲಿತ ಇವೆಲ್ಲಾ ಇವರು ತಮ್ಮ ಧನಬಲದಿಂದ ಮಾಡಿರುವ ಅನ್ಯಾಯಗಳೆಂಬ ಜಾಗೃತಿ, ಅರಿವನ್ನು ಜೌಕ್ ಗ್ರಾಮದ ದಲಿತರ ಹೋರಾಟದಿಂದ ಸುತ್ತ ಮುತ್ತಲ ಗ್ರಾಮಗಳಲ್ಲಿ ಜಾಗೃತಿ ಮೂಡಲು ಕಾರಣವಾಯಿತು. ಇದರಿಂದ ಸಂಘಟಿತರಾಗಿ ತಾವೂ ಕೂಡ ಅನ್ಯಾಯದ ವಿರುದ್ಧ, ಅಶ್ಪೃಸ್ಯತೆಯ ಆಚರಣೆಯ ವಿರುದ್ಧ ಪ್ರತಿಭಟಿಸಬೇಕು. ಸಾವಿರಾರು ವರ್ಷಗಳಿಂದ ಶೋಷಿಸಿಕೊಂಡು ಬಂದಿರುವ ಈ ವ್ಯವಸ್ಥೆಯಿಂದ ಹೊರಬರಬೇಕೆಂಬ ಜಾಗೃತಿ ದಲಿತರಲ್ಲಿ ಮೂಡತೊಡಗಿತು. ಇದು ಸಹಾ ಈ ಘಟನೆಯ ಪ್ರಮುಖ ಪರಿಣಾಮವೆಂದು ಹೇಳಬಹುದು.

**೪) ಹೋಟೆಲ್‌ಗಳಲ್ಲಿ ಪ್ರತ್ಯೇಕ ಆಸನ, ಪರಿಕರಗಳನ್ನು ವಿರೋಧಿಸಿದ್ದು :**

ಸಾರ್ವಜನಿಕ ಹೋಟೆಲ್‌ಗಳಲ್ಲಿ ದಲಿತರಿಗೆ, ಅಸ್ಪೃಶ್ಯರಿಗೆ ಪ್ರತ್ಯೇಕ ಆಸನ ಮತ್ತು ತಟ್ಟೆ, ಕಪ್ಪು ಮೊದಲಾದ ಪರಿಕರಗಳನ್ನು ಇಡಲಾಗುತ್ತಿತ್ತು. ಈ ಘಟನೆಯ ನಂತರ ಇಂತಹ ಹೋಟೆಲ್‌ಗಳಲ್ಲಿ ದಲಿತರು ಸಂಘಟಿತರಾಗಿ ವಿರೋಧಿಸಲು ಆರಂಭಿಸಿದರು. ಇದರಿಂದ ಕೆಲವು ಹೋಟೆಲ್‌ಗಳನ್ನು ನಡೆಸುತ್ತಿದ್ದ ಮೇಲ್ಜಾತಿಯವರು ಹೋಟೆಲ್‌ಗಳನ್ನು ಮುಚ್ಚಿ ಇತರೆ ವೃತ್ತಿಗಳಲ್ಲಿ ತೊಡಗಿದರು. ಕೆಲವು ಮೇಲ್ಜಾತಿಯವರು ನಡೆಸುತ್ತಿದ್ದ ಹೋಟೆಲ್‌ಗಳಿಗೆ ದಲಿತರೇ ಸ್ವತಃ ಹೋಗುವುದನ್ನು ನಿಲ್ಲಿಸಿದರು. ಪ್ರವೇಶ ನೀಡಿದ ಹೋಟೆಲ್‌ಗಳಿಗೆ ಸವರ್ಣೀಯರು ಹೋಗುವುದನ್ನು ನಿಲ್ಲಿಸಿದರು. ಒಂದು ರೀತಿಯ ಹೊಸ ವಾತಾವರಣವನ್ನು ಈ ಘಟನೆ ಉಂಟು ಮಾಡಿತೆಂದರೆ ತಪ್ಪಾದದು.

## ೫) ಭೂವಿವಾದಕ್ಕೆ ಸಂಬಂಧಿಸಿದ ಪರಿಣಾಮಗಳು :

ಹೊಸಪೇಟೆಯ ಗ್ರಾಮೀಣ ಭಾಗದಲ್ಲಿ ಪ್ರಪ್ರಥಮ ಡಾ.ಅಂಬೇಡ್ಕರ್ ಸಂಘ ರಾಮಸಾಗರ ಗ್ರಾಮದಲ್ಲಿ ೧೯೩೩ ರಲ್ಲಿ ಅಸ್ಥಿತ್ವಕ್ಕೆ ಬಂದಿತ್ತು. ಘಟಕ ರಚನೆಗೆ ಈ ಹಿಂದೆ ಹಲವು ಬಾರಿ ಪ್ರಯತ್ನಗಳಾಗಿದ್ದರೂ ಸಂಘಟನೆಯ ಒಂದು ನಿರ್ಧಿಷ್ಟ ಚೌಕಟ್ಟು ಅಸ್ಥಿತ್ವಕ್ಕೆ ಬಂದದ್ದು ಈಗ ಎಂದು ತಿಳಿದು ಬರುತ್ತದೆ. ಈ ಘಟಕದ ಅಧ್ಯಕ್ಷರಾದ ಪೊಂಪಣ್ಣರವರು ಇಂದು ಹೊಸಪೇಟೆಯ ನಗರದ ನಿವಾಸಿಗಳಾಗಿದ್ದಾರೆ. ಈ ಘಟಕ ಅಸ್ಥಿತ್ವಕ್ಕೆ ಬಂದ ಸಂದರ್ಭದಲ್ಲಿಯೇ ರಾಮಸಾಗರದಲ್ಲೊಂದು ಭೂವಿವಾದಕ್ಕೆ ಸಂಬಂಧಪಟ್ಟ ಹೋರಾಟವನ್ನು ಕೈಗೊಳ್ಳಬೇಕಾಯಿತು. ಪ್ರತಿಷ್ಠಿತ ಜಮೀನ್ದಾರರೊಬ್ಬರ ೨ ಎಕರೆ ಜಮೀನನ್ನು ದಲಿತನೊಬ್ಬನು ಸುಮಾರು ೨೦ ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದನು. ಕರ್ನಾಟಕ ರಾಜ್ಯ ಸರಕಾರದ ಭೂ ಸುಧಾರಣಾ ಕಾಯ್ದೆಯನ್ವಯ ಉಳುವವನೇ ಭೂಒಡೆಯನಾಗಿದ್ದ ಇದಲಿತನು ಭೂಮಿಯ ಹಕ್ಕುದಾರನಾಗಿದ್ದನು. ಇದನ್ನು ಮನಗಂಡ ಭೂಮಾಲೀಕರು ದಲಿತನನ್ನು ಒತ್ತಾಯ ಪೂರ್ವಕವಾಗಿ ಒಕ್ಕಲೆಬ್ಬಿಸಿದ್ದನು. ಇದನ್ನು ತಿಳಿದ ಡಾ॥ ಅಂಬೇಡ್ಕರ್ ಸಂಘವು ಫಾರಂ ನಂ.೭ ನ್ನು ದಲಿತನಿಂದ ಅರ್ಜಿ ಹಾಕಿಸಿತು. ಇದು ಗೊತ್ತಾದ ಮೇಲೆ ಜಮೀನ್ದಾರನ ಪ್ರತಿ ರೋಧವನ್ನು ಎದರಿಸಬೇಕಾಯಿತು. ಇಡೀ ಗ್ರಾಮದ ದಲಿತರು ಒಂದಾಗಿ ಹೊಸಪೇಟೆಯ ಕೆಲವು ದಲಿತರ ಮುಖಂಡರೊಂದಿಗೆ ಈ ದೌರ್ಜನ್ಯದ ವಿರುದ್ಧ ಹೊಸಪೇಟೆಯಲ್ಲಿ ಮೆರವಣಿಗೆ ತೆಗೆದು ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಕ್ತ ಕ್ರಮಕ್ಕಾಗಿ ಒತ್ತಾಯಿಸಿದರು. ಇದರಿಂದ ದಲಿತ ಭೂಮಿಯ ಒಡೆತನವನ್ನು ಪಡೆಯಲು ಯಶಸ್ವಿಯಾದರು. ಆದರೆ ಭೂಮಿ ಕಳೆದುಕೊಂಡು ಭೂ ಮಾಲೀಕನು ಹೈಕೋರ್ಟ್ ನವರೆಗೂ ಈ ವಿವಾದವನ್ನು ತೆಗೆದುಕೊಂಡು ಹೋದನು. ಆದರೆ ಈ ಪ್ರಕರಣದಲ್ಲಿ ನ್ಯಾಯಾಲಯವೂ ಸಹಾ ದಲಿತನ ಪರವಾಗಿಯೇ ತೀರ್ಪು ನೀಡಿದವು. ಕೊನೆಗೆ ಮಾಲೀಕನು ದಲಿತನೊಂದಿಗೆ, ಮುಖಂಡರ ಸಮಕ್ಷಮದಲ್ಲಿ ರಾಜಿಮಾಡಿಕೊಂಡು ಅವರ ಪೂರ್ವಜರ ನೆನಪಿಗಾಗಿ ೨ ಎಕರೆ ಜಮೀನು ಉಳಿಸಿಕೊಂಡು ಅದಕ್ಕೆ ಪರ್ಯಾಯವಾಗಿ ತನ್ನ ಒಡೆತನಕ್ಕೆ ಸೇರಿದ ಬೇರೆ ೨ ಎಕರೆ ಜಮೀನನ್ನು ಬಿಟ್ಟುಕೊಟ್ಟು ಸಂಧಾನ ಮಾಡಿಕೊಂಡನು. ಈ ಘಟನೆಯಿಂದಾದ ಪರಿಣಾಮಗಳು.

## ೬) ಭೂಮಾಲೀಕ ದಲಿತರ ನಡುವೆ ಸೌಹಾರ್ದತೆ :

ಈ ಘಟನೆಯ ನಂತರ ಈ ಪ್ರಕರಣದ ಪ್ರಮುಖ ಮೇಲ್ಜಾತಿಯ ಭೂಮಾಲೀಕ ಮತ್ತು ದಲಿತನ ನಡುವೆ ಒಂದು ರೀತಿಯ ಕದನ ವಿರಾಮ ಏರ್ಪಟ್ಟಿತು. ನ್ಯಾಯಾಲವೂ ತನ್ನ ವಿರುದ್ಧ ನಿಂತಂತಹ ಸಂದರ್ಭದಲ್ಲಿ ನಾನು ದಲಿತನಿಗೆ ಮಾಡಿದ್ದು ಅನ್ಯಾಯವೆಂಬ ಅರಿವು ಮಾಲೀಕನ ಪರಿವರ್ತನೆಗೆ ಈ ಘಟನೆ ಕಾರಣವಾಯಿತು. ಇದರ ಪ್ರಭಾವ ಗ್ರಾಮದ ಇತರೆ ದಲಿತರ ಈ ವಿಷಯಗಳಲ್ಲಿಯೂ ಪರಸ್ಪರ ಒಡಂಬಡಿಕೆ ಏರ್ಪಡಲು ಸಹಾಯಕವಾಯಿತು. ರಾಮಸಾಗರ ವಲ್ಲದೆ ಸುತ್ತಮುತ್ತಲ ಹಳ್ಳಿಗಳಲ್ಲಿಯೂ ಭೂಮಿಯ ವಿಷಯಕ್ಕೆ ಸಂಬಂಧಪಟ್ಟಂತೆ 'ರಾಮಸಾಗರದ ಘಟನೆ' ಒಳ್ಳೆಯ ಸಕಾರಾತ್ಮಕ ಪರಿಣಾಮ ಬೀರಿತು. ದಲಿತರಿಗೂ, ಜಮೀನ್ದಾರರಿಗೂ 'ಉಳುವವನಿಗೆ ಭೂಮಿ' ಹಕ್ಕಿನ ಫಾರಂ ನಂ.೦೭ ಪ್ರಕರಣಗಳು ಸೌಹರ್ದತೆಯಿಂದ ಅನೇಕ ಪ್ರಕರಣಗಳು ಬಗೆಹರಿದಿದ್ದು ಈ ಘಟನೆಯಿಂದ ಎಂದು ತಿಳಿದು ಬರುತ್ತದೆ.

## ೭) ಇತರೆ ಹಿಂದುಳಿದ ಬಡರೈತರಲ್ಲಿ ಜಾಗೃತಿ :

ದಲಿತನಿಗೆ ಭೂಮಿಯು ದೊರಕಿದ್ದು ಗ್ರಾಮದ ಮತ್ತು ತಾಲೂಕಿನ ಇತರೆ ಗ್ರಾಮಗಳ ಹಿಂದುಳಿದ ಜಾತಿಗಳಾದ ನಾಯಕರು, ಗಂಗಾಮತಸ್ಥರು, ಕುರುಬರೂ ಸೇರಿದಂತೆ ಇತರೆ ಜಾತಿಗಳ ಬಡ ರೈತರು ತಾವು ಸಹಾ ಫಾರಂ ನಂ.೭ ಹಾಕಿ ಸುಮಾರು ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದ ಭೂಮಿಯ ಒಡೆತನವನ್ನು ಪಡೆಯ ಬೇಕೆನ್ನುವ ಆಸೆಗೆ ಪ್ರೇರಣೆ ನೀಡಿತು. ಈ ಘಟನೆ ಹಲವು ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದ ಭೂಮಿಯ ಬಗೆಗೆ ಖಚಿತವಾಗಿ ನಿರ್ಧರಿಸುವ ಪ್ರಕ್ರಿಯೆಗಳು ನಡೆದು ಜಮೀನ್ದಾರರ ಸಹಮತಿಯಿರುವ, ಅಥವಾ ಸಮ್ಮತಿಯಿಲ್ಲದಿರುವ ಪ್ರಕರಣಗಳಲ್ಲಿಯೂ ಭೂಮಿ ಸ್ವಾಧೀನಕ್ಕಾಗಿ ಫಾರಂ ನಂ.೭ ಸಲ್ಲಿಸುವ ಪ್ರಕ್ರಿಯೆಗಳು ಈ ಘಟನೆಯ ನಂತರ ಅಧಿಕಗೊಂಡವೆಂದು ತಿಳಿದುಬರುತ್ತದೆ.

## ೮) ಉಳುವವನಿಗೆ ಭೂ ಒಡೆತನ ಕಾಯ್ದೆಯ ಪ್ರಚಾರ :

ರಾಮಸಾಗರದ ಜಮೀನ್ದಾರ ಮತ್ತು ದಲಿತನಭೂಮಿಯ ಈ ಪ್ರಕರಣದ ಪರಿಣಾಮ ಸುತ್ತಮುತ್ತಲ ತಾಲೂಕುಗಳಲ್ಲಿ, ಗ್ರಾಮಗಳಲ್ಲಿ ಜಾಗೃತಿ ಮೂಡಿತು. ಆವರೆಗೂ ಈ ಪ್ರದೇಶದಲ್ಲಿ ಭೂ ಸುಧಾರಣೆ ಕಾಯ್ದೆಯ ಬಗ್ಗೆ ಅಷ್ಟಾಗಿ ಪ್ರಚಾರ ನಡೆದಿರಲಿಲ್ಲ. ರಾಮ ಸಾಗರದ ದಲಿತನ ಈ ಪ್ರಕರಣದಿಂದ ಬಹಳಷ್ಟು ಜಮೀನ್ದಾರರು ಭೂಮಿಯನ್ನು ಉಳಿಸಿಕೊಳ್ಳಲು ಪರ್ಯಾಯ ತಂತ್ರಗಳನ್ನು ಅನುಸರಿಸಿದರು. ತಮ್ಮ ಕುಟುಂಬದವರ ಹೆಸರಿನಲ್ಲಿ ವಿಭಜಿಸಿ ಖಾತೆಗಳನ್ನು ಮಾಡಿಸಲು ಯತ್ನಿಸಿದರು. ಇದೂ ಕೂಡ ಈ ಘಟನೆಯ ಪ್ರಭಾವವೆಂದು ಹೇಳಬಹುದು. ಕೆಲವರು ದಲಿತರಿಗೆ ಅಷ್ಟೊಂದು ಫಲವತ್ತಿಲ್ಲದ ಬಂಜರು ಭೂಮಿಯನ್ನು ಕೊಟ್ಟು ಫಲವತ್ತಾದ ಜಮೀನಿನಿಂದ ದಲಿತರನ್ನು ಸುಮ್ಮನಿರಿಸುತ್ತಿದ್ದರು. ಮುಖಂಡರು ಮಧ್ಯ ಪ್ರವೇಶಿಸಲು ಅವಕಾಶವಿಲ್ಲದಂತೆ ದಲಿತರಿಗೆ ಆಸೆ ಆಮಿಷಗಳನ್ನು ಬಡ್ಡಿ ತಮ್ಮೊಳಗೆ ಕೆಲವು ಸಂದಾನಗಳನ್ನು ಮಾಡಿಕೊಂಡರು. ಇದರಿಂದ ಕೆಲವು ದಲಿತರು ದಲಿತ ಸಂಘಟನೆ ಮುಖಂಡರ ಮಾತುಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುತ್ತಿರಲಿಲ್ಲ. ಎಷ್ಟೇ ಇತಿಳುವಳಿಕೆ, ಜಾಗೃತಿ ಮೂಡಿಸಿದರೂ ಹಲವು ವರ್ಷಗಳಿಂದ ಜಮೀನುಗಳಲ್ಲಿ ಕೆಲಸ ಮಾಡುತ್ತಿದ್ದ ಜಮೀನ್ದಾರರಿಗೆ ಅನ್ಯಾಯ ಮಾಡಬಾರದೆಂಬುದು ಅವರವಾದವಾಗಿರುತ್ತಿತ್ತು. ಒಟ್ಟಿನಲ್ಲಿ ಈ ಕಾಯ್ದೆಯ ತಿಳುವಳಿಕೆ ಹೆಚ್ಚು ಪ್ರಚಾರಕ್ಕೆ ಬಂದದ್ದು ಮಾತ್ರ ರಾಮಸಾಗರದ ಈ ಘಟನೆಯಿಂದ.

## ೯) ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳೆಡೆಗೆ :

ರಾಮಸಾಗರ ಭೂಮಿ ವಿವಾದದಿಂದಾಗಿ ಈ ಪ್ರದೇಶದಲ್ಲಿ ಹಲವು ಅವಿಭಕ್ತ ಕುಟುಂಬಗಳನ್ನು ಪಾಲಪಟ್ಟಿಯ ಮೇಲೆ ಭಾಗ ಮಾಡಿಕೊಳ್ಳುವುದರ ಮುಖಾಂತರ ಅನೇಕ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾದವು. ಭೂಸುಧಾರಣಾ ಕಾಯ್ದೆಯಿಂದ ರಕ್ಷಣೆ ಪಡೆಯಲು ಪರ್ಯಾಯ ತಂತ್ರವಾಗಿ ಭೂಮಾಲೀಕರು ಇದನ್ನು ಬಳಸಿಕೊಂಡು ತಮ್ಮ ಅಣ್ಣ ತಮ್ಮಂದಿರ ಹೆಸರಿನಲ್ಲಿ, ಅಕ್ಕ ತಂಗಿಯರ ಹೆಸರಿನಲ್ಲಿ ಭೂಮಿಯನ್ನು ಹಂಚಿಕೊಂಡು ನೋಂದಣಿ, ಖಾತಾ ವರ್ಗಾವಣೆ ಮೂಲಕ ಔಪಚಾರಿಕವಾಗಿ ಕುಟುಂಬಗಳು ಅಸ್ತಿತ್ವಕ್ಕೆ ಬಂದವು. ಇದು ಕೂಡ ರಾಮಸಾಗರದ ಘಟನೆಯ ಫಲಿತಾಂಶವೆಂದರೆ ತಪ್ಪಾಗಲಾರದು.

ಅಂದಿನ ದಿನಗಳಲ್ಲಿ ಜೌಕ್ ಗ್ರಾಮದ ದಲಿತರ ದೇವಸ್ಥಾನ ಪ್ರವೇಶದ ಘಟನೆ, ರಾಮಸಾಗರದ ಭೂವಿವಾದಕ್ಕೆ ಸಂಬಂಧಪಟ್ಟ ಈ ಘಟನೆಗಳು ಸಾಮಾಜಿಕವಾಗಿ ಬಹಳಷ್ಟು ಪರಿವರ್ತತನೆಗಳಿಗೆ ಈ ಪ್ರದೇಶದಲ್ಲಿ ಕಾರಣವಾಗಿದ್ದಂತೂ ನಿಜವೆಂಬುದು ಆ ಪ್ರದೇಶದ ಈ ಎರಡೂ ಕಾರಣವಾಗಿದ್ದಂತೂ ನಿಜವೆಂಬುದು ಆ ಪ್ರದೇಶದ ಈ ಎರಡೂ ವರ್ಗಗಳ ಪ್ರತಿನಿಧಿಗಳನ್ನು ಬೇಟಿ ಮಾಡಿದಾಗ ತಿಳಿದು ಬಂದಿತು. ನೂರಾರು ವರ್ಷಗಳಿಂದ ಮೇಲ್ವರ್ಗದ ಜನರ ತುಳಿತಕ್ಕೆ ಒಳಗಾದ ದಲಿತರಲ್ಲಿ ಈ ಘಟನೆಗಳು ಸಂಚಲನೆ ಮಾಡಿಸಿದ್ದಂತೂ ನಿಜ. ದಲಿತರಲ್ಲಿಯೂ ತಾವೇಕೆ ಜಾಗೃತವಾಗಬಾರದು. ತಾವು ಕೂಡ ಸಂಘಟಿತರಾಗಿ ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧ ಸಂಘಟಿತ ಪ್ರತಿಭಟನೆ ಮಾಡುವ ಅರಿವು ಮೂಡ ತೊಡಗಿತು. ಈ ಘಟನೆಗಳ ನಂತರದಲ್ಲಿ ಹೊಸಪೇಟೆ ನಗರ ಸೇರಿದಂತೆ ಗ್ರಾಮಾಂತರ ಪ್ರದೇಶದಲ್ಲಿ ಹಲವಾರು ಡಾ|| ಅಂಬೇಡ್ಕರ್ ಸಂಘಗಳು, ಅಸ್ಥಿತ್ವಕ್ಕೆ ಬಂದವು. ಡಾ|| ಅಂಬೇಡ್ಕರ್ ಸಂಘಗಳು ಕೆಳಗಿನ ಉದ್ದೇಶಗಳನ್ನು ಹೊಂದಿದ್ದವು.

**೫.೧) ದೇವದಾಸಿ ಪದ್ಧತಿಗೆ ವಿದಾಯ :** ಆವರೆಗೂ ಅಸ್ಥಿತ್ವದಲ್ಲಿದ್ದ ದೇವದಾಸಿ ಪದ್ಧತಿಯನ್ನು ಯಾವುದೇ ಕಾರಣಕ್ಕೂ ಸಂಘವು ಪ್ರೋತ್ಸಾಹಿಸಬಾರದೆಂಬ ಮಹತ್ತರ ಉದ್ದೇಶ ಹೊಂದಲಾಗಿತ್ತು. ದೇವರ ಹೆಸರಿನಲ್ಲಿ ಮುಗ್ಧ ಮಹಿಳೆಯನ್ನು ವೇಶ್ಯಾವೃತ್ತಿಗೆ ತಳ್ಳುವ ಈ ಅಮಾನುಷ ಪದ್ಧತಿಯ ಬಗ್ಗೆ ದಲಿತರಲ್ಲಿ ಜಾಗೃತಿ ಮೂಡಿಸುವ ಗುರಿಯೊಂದಿಗೆ ಡಾ|| ಅಂಬೇಡ್ಕರ್ ಸಂಘಗಳು ಅಸ್ಥಿತ್ವಕ್ಕೆ ಬಂದವು ಆಯಾ ಘಟಕಗಳ ವ್ಯಾಪ್ತಿಯಲ್ಲಿ ದಲಿತರಲ್ಲಿ ದಲಿತರ ಕುಟುಂಬಗಳು ದೇವದಾಸಿ ಪದ್ಧತಿ ಅನುಸರಿಸುವ ಸುದ್ದಿ ತಿಳಿದ ತಕ್ಷಣ ಸಂಘದ ಸದಸ್ಯರು ಆ ಕುಟುಂಬದ ಸದಸ್ಯರನ್ನು ಮನಪರಿವರ್ತಿಸುವ ಕೆಲಸ ನಿರ್ವಹಿಸಲು ಆರಂಭಿಸಿದವು. ಹಾಗೊಂದು ವೇಳೆ ಸಂಘದ ಪ್ರಯತ್ನಕ್ಕೆ ಸಕಾರಾತ್ಮಕವಾಗಿ ಸ್ಪಂದಿಸದಿರುವ ಕುಟುಂಬವನ್ನು ಇಡೀ ದಲಿತ ಸಮಾಜದಿಂದ ದೂರವಿಡುವ ಶಿಕ್ಷೆಯನ್ನು ಜಾರಿಗೊಳಿಸುವಂತೆಯೂ ಸಂಘದ ಸದಸ್ಯರು ವ್ಯವಸ್ಥೆ ಮಾಡಿದ್ದರಿಂದ 'ದೇವದಾಸಿ' ಬಿಡುವ ಪ್ರಯತ್ನಗಳು ವಿಫಲವಾಗಲು ಕಾರಣವಾಯಿತು.

**೫.೨) ಜೀತ ಪದ್ಧತಿಯನ್ನು ಕೊನೆಗಾಣಿಸುವುದು :**

ಈ ಪ್ರದೇಶದಲ್ಲಿ ಭೂಮಾಲೀಕರ ಮನೆಗಳಲ್ಲಿ ವರ್ಷಕ್ಕೆ ಇಂತಿಷ್ಟು ಪುಡಿಗಾಸಿಗೆ 'ಜೀತ' ಕ್ಕಿದ್ದ ಹಲವು ದಲಿತರನ್ನು ಬಿಡುಗಡೆ ಮಾಡಿಸಲಾಯಿತು. ಜೀತ ಮಾಡುತ್ತಿದ್ದವರಿಗೆ ಪರ್ಯಾಯ ಕೂಲಿ ದೊರಕಿಸಲು ಸಂಘಗಳು ಪ್ರಯತ್ನಿಸುವ ಉದ್ದೇಶವನ್ನು ಹೊಂದಿದವು. ಜೀತ ಪದ್ಧತಿ ಯಿಂದ ಬಿಟ್ಟಸೇವೆ ಗೈಯುತ್ತಿದ್ದ ಹಲವು ದಲಿತ ಕುಟುಂಬಗಳನ್ನು ಬಿಡುಗಡೆಗೊಳಿಸಿ ಅವರಿಗೆ ಪರ್ಯಾಯ ಉದ್ಯೋಗ ಕೈಗೊಳ್ಳಲು ನೆರವು ನೀಡಲಾಯಿತು. ಜಮೀನುಗಾರರಿಂದ ಯಾರೂ ಸಾಲ ಪಡೆಯಬಾರದೆಂಬ ಜಾಗೃತಿ ಮೂಡಿಸಲಾಯಿತು. ಪುಡಿಗಾಸು ಸಾಲಕ್ಕಾಗಿ ಜೀವನಪೂರ್ತಿ ಅವರ ಮನೆಯಲ್ಲಿ ಜೀತ ಮಾಡ ಬೇಕಾಗುತ್ತದೆಂದು ಇದರಿಂದಾಗಿ ನಾವೇ ಅವರಿಗೆ ಶೋಷಣೆ ಮಾಡಲು ಅವಕಾಶ ಮಾಡಿಕೊಟ್ಟಂತಾಗುತ್ತದೆಂದು ತಿಳುವಳಿಕೆ ನೀಡುವ ಉದ್ದೇಶದಿಂದ ಸಂಘಗಳನ್ನು ರಚಿಸಲಾಯಿತು.

### ೫.೩) ಅಲ್ಪ ಸ್ವಲ್ಪ ಸ್ವಂತ ಭೂಮಿ ಒತ್ತೆಯಿಡುವುದರ ವಿರುದ್ಧ ಜಾಗೃತಿ :

ಹಲವು ದಲಿತ ರೈತರು ತಮ್ಮಲ್ಲಿರುವ ಅಲ್ಪ, ಸ್ವಲ್ಪ ಭೂಮಿಯನ್ನು ಒತ್ತೆಯಿಟ್ಟು ಭೂಮಾಲೀಕರಿಂದ, ಮಧ್ಯವರ್ತಿ ದಲ್ಲಾಳಿಗಳಿಂದ ಸಾಲ ಪಡೆಯುತ್ತಿದ್ದರು, ಈ ಸಾಲಕ್ಕೆ ಅವರು ವಿಧಿಸುತ್ತಿದ್ದ ಬಡ್ಡಿ, ಚಕ್ರಬಡ್ಡಿಯಿಂದ, ಸಾಲದಿಂದ ಮುಕ್ತಿ ಪಡೆಯಲು ಏಕೈಕ ಆಧಾರವಾಗಿದ್ದ ಜಮೀನನ್ನು ಮಾರಾಟ ಮಾಡಿ ಕೂಲಿಯ ಮೇಲೆ, ಜೀತಮಾಡುವ, ಗೇಣಿ ಮಾಡುವುದು ಅನಿವಾರ್ಯವಾಗುತ್ತಿತ್ತು. ಇದರ ಬಗ್ಗೆಯೂ ದಲಿತ ರೈತರಲ್ಲಿ ಸೂಕ್ತ ತಿಳುವಳಿಕೆ ನೀಡಿ ಭೂಮಿ ಒತ್ತೆಯಿತ್ತು ಸಾಲ ಪಡೆಯುವುದನ್ನು ನಿಲ್ಲಿಸುವ ಉದ್ದೇಶವನ್ನು ಈ ಸಂಘಗಳು ಹೊಂದಿದ್ದವು.

### ೫.೪) ಅನ್ಯಾಯಕ್ಕೊಳಗಾದ ದಲಿತರಿಗೆ ಸಕಾಲಿಕ ನೆರವು ನೀಡುವುದು :

ದಲಿತರ ಮೇಲಿನ ದೌರ್ಜನ್ಯ, ದಬ್ಬಾಳಿಕೆ, ಶೋಷಣೆ ನೀಡುವ ಮೇಲ್ವರ್ಗದ, ಭೂಮಾಲೀಕರ ಪ್ರಕರಣಗಳು, ಅಂದಿನ ಸಂದರ್ಭದಲ್ಲಿ ಸಾಮಾನ್ಯವೆನ್ನುವಂತೆ ನಡೆಯುತ್ತಿದ್ದವು. ಕೆಲವು ಕಡೆ ದಲಿತರನ್ನು ಉದ್ದೇಶಪೂರ್ವಕವಾಗಿ ಕೂಲಿಯಿಂದ, ಜಮೀನಿನ ಕೆಲಸದಿಂದ ತೆಗೆಯಲಾಗುತ್ತಿತ್ತು. ದೇವದಾಸಿ ಪದ್ಧತಿಗೆ ಮಹಿಳೆಯರನ್ನು ದಲಿತರೇ ಮುಂದಾಗಿ ಬಿಡುವಂತಹ ವಾತಾವರಣವನ್ನು ಸೃಷ್ಠಿಸುತ್ತಿದ್ದರು. ಇದರಿಂದ ಸಹಜವಾಗಿ ದಲಿತರು ಇನ್ನಿಲ್ಲದ ತೊಂದರೆ, ಅನ್ಯಾಯಕ್ಕೆ ಒಳಗಾಗುತ್ತಿದ್ದರು. ಇಂಥಹ ಸಂದರ್ಭದಲ್ಲಿ ಸಂಘದ ನೆರವು ಅವಶ್ಯಕವಾಗುತ್ತಿತ್ತು. ಸಂಘಟನೆಯ ನೆರವಿನಿಂದಾಗಿ ಅಂತಹ ಅನ್ಯಾಯ, ದೌರ್ಜನ್ಯಗಳನ್ನು ತಡೆಯುವುದು ಸಾಧ್ಯವೆಂಬುದನ್ನು ಹಲವು ಪ್ರಕರಣಗಳಲ್ಲಿ ನಿಜವಾಗಿತ್ತು. ಇದರಿಂದಾಗಿ ಸಂಘಟನೆ ಪ್ರಮುಖ ಉದ್ದೇಶಗಳಲ್ಲಿ ಇದೂಕೂಡ ಆದ್ಯತೆಯ ಉದ್ದೇಶವಾಗಿತ್ತು.

### ೫.೫) ಸಾಮೂಹಿಕ ಮದುವೆ ಏರ್ಪಡಿಸುವುದು :

ಡಾ|| ಅಂಬೇಡ್ಕರ್ ಸಂಘದ ಉದ್ದೇಶಗಳಲ್ಲಿ ದಲಿತರಲ್ಲಿ ಸಾಮೂಹಿಕ ಮದುವೆ ಕಾರ್ಯಕ್ರಮಗಳಿಗೆ ಉತ್ತೇಜನ ನೀಡುವುದೂ ಆಗಿತ್ತು. ಬಹಳಷ್ಟು ದಲಿತರು ಮದುವೆಗಾಗಿಯೇ ಸಾಲ ಮಾಡುವುದೂ, ಇದರಿಂದ ಹಲವು ಸಮಸ್ಯೆಗಳನ್ನು ಎದುರಿಸುವುದು ಸಾಮಾನ್ಯವಾಗಿತ್ತು. ಇದನ್ನು ಅರಿತಿದ್ದ ಮುಖಂಡರು ಸಂಘದ ಉದ್ದೇಶವನ್ನು ಇಂತಹ ಕಾರ್ಯಕ್ಕಾಗಿ ಮೀಸಲಿಡಲು ಸಂಕಲ್ಪಿಸಿದರು. ಡಾ|| ಅಂಬೇಡ್ಕರ್‌ರವರ ಜನ್ಮ ಜಯಂತಿಯ ಸಂದರ್ಭದಲ್ಲಿ ವಿಶೇಷವಾಗಿ ಸರಳವಾಗಿ ಸಾಮೂಹಿಕ ಮದುವೆಗಳನ್ನು ಹಮ್ಮಿಕೊಳ್ಳವುದರ ಮೂಲಕ ಮುದವೆಯಿಂದ ಉಂಟಾಗುವ ಅನಾಹುತಗಳನ್ನು ತಪ್ಪಿಸುತ್ತಿತ್ತು. ಹಲವಾರು ದಲಿತ ಕುಟುಂಬಗಳು ಸಂಘದ ಈ ಮಹಾಕಾರ್ಯದ ಸದುಪಯೋಗ ಪಡಿಸಿಕೊಂಡರು - ಇಂದಿಗೂ ಡಾ|| ಅಂಬೇಡ್ಕರ್ ಸಂಘ ಈ ರೀತಿಯ ಸಾಮೂಹಿಕ ವಿವಾಹಗಳನ್ನು ನಡೆಸುತ್ತಿದೆ. ಇನ್ನೂ ಕೆಲವು ಧಾರ್ಮಿಕ ಮಠಗಳು ನಡೆಸುವ ಸಾಮೂಹಿಕ ಮದುವೆ, ಸಮಾಜ ಸೇವಾಕರ್ತರ ಸಹಕಾರ ದಿಂದ ನಡೆಯುವ ಸಾಮೂಹಿಕ ಮದುವೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಅದರ ನೆರವನ್ನು ಪಡೆದುಕೊಳ್ಳುವಂತೆ ಜಾಗೃತಿ ಮೂಡಿಸುವ ಕೆಲಸವನ್ನು ಸಹಾ ಸಂಘ ಮಾಡುತ್ತಿರುವುದು ತಿಳಿದು ಬರುತ್ತದೆ.

ಮೇಲಿನ ಕೆಲವು ಉದ್ದೇಶಗಳನ್ನು ಹೊಂದಿರುವ ಸಂಘಗಳು ಹೊಸಪೇಟೆ ತಾಲೂಕಿನಲ್ಲಿ ರಚನಾತ್ಮಕ ಚಟುವಟಿಕೆಗಳನ್ನು ಮಾಡುತ್ತಿವೆ. ಆದರೆ ಸಂಘಟನೆಯ ಸದಸ್ಯರಲ್ಲಿ ಒಗ್ಗಟ್ಟಿನ ಕೊರತೆ ಎದ್ದು ಕಾಣುತ್ತದೆ. ಸಂಘಟನೆಯ ಮುಖಂಡರ ಭಿನ್ನಾಭಿಪ್ರಾಯಗಳಿಂದಾಗಿ ಸಂಘಟನೆಯ ಒಗ್ಗಟ್ಟು ಛಿದ್ರವಾಗಿದೆ. ಇದರ ಪರಿಣಾಮವಾಗಿ ಇತರೆ ದಲಿತ ಮುಖಂಡರ ಹೆಸರಿನಲ್ಲಿ, ಇತರರ ನೇತೃತ್ವದಲ್ಲಿ ಬೇರೆ ಬೇರೆ ಸಂಘಟನೆಗಳು ಹೊಸಪೇಟೆ ತಾಲೂಕಿನಲ್ಲಿ ಹುಟ್ಟಿಕೊಂಡಿರುವುದು ಕಂಡು ಬರುತ್ತದೆ. ಇದರಿಂದ ನ್ಯಾಯಯುತವಾದ ದಲಿತರ ಸಮಸ್ಯೆಗಳಿಗಾಗಿ ನಡೆಯುವ ಹೋರಾಟದ ಸಂದರ್ಭದಲ್ಲಿ ಕೆಲವು ಸಂಘಟನೆಗಳು ಭಾಗವಹಿಸುವುದು. ಕೆಲವು ಸಂಘಗಳು ವಿರೋಧಿಸುವುದು ಇಲ್ಲವೆ ತಟಸ್ಥವಾಗುಳಿಯುವುದು ನಡೆಯುತ್ತಿರುತ್ತದೆ. ಇದರ ಪರಿಣಾಮ ಕೊನೆಗೆ ಸಂಟನೆಯ ಉದ್ದೇಶಗಳು ಈಡೇರಿಕೆಯ ಮೇಲೆ ಕೆಟ್ಟ ಪರಿಣಾಮ ಬೀರುತ್ತವೆ. ಕೆಲವು ದಲಿತರು ಈ ಭಿನ್ನಾಭಿಪ್ರಾಯ, ಸಾಂಘಿಕ ಒಡಕಿನಿಂದಾಗಿ ಸಂಘದ ಸಹವಾಸವೇ ಬೇಡವೆಂದು ಸಾಂಘಿಕ ಪ್ರವತ್ತಿಯಿಂದ ದೂರವೇ ಉಳಿಯುತ್ತಾರೆ. ಈ ಕಾರಣದಿಂದ ನಿರ್ದಿಷ್ಟ ಉದ್ದೇಶಗಳ ಹಿತದೃಷ್ಠಿಯಿಂದಾದರೂ ದಲಿತ ಮುಖಂಡರು ತಮ್ಮ ಸ್ವಪ್ರತಿಷ್ಠೆ - ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಸಾಂಘಿಕ ಉದ್ದೇಶಗಳಿಗಾಗಿ ಬದ್ಧರಾಗಿ ಪ್ರವೃತ್ತಿಯಲ್ಲಿ ಒಗ್ಗಟ್ಟಿನಿಂದ ದುಡಿಯುವುದು ಅವಶ್ಯಕವಾಗಿದ್ದು ಈ ನಿಟ್ಟಿನಲ್ಲಿ ಯತ್ನಿಸಬೇಕಾಗಿದೆ.

ಬಳ್ಳಾರಿ ತಾಲೂಕಿನ ಗೆಣಿಕಿಹಾಳ್ ಗ್ರಾಮದಲ್ಲಿ ೧೯೭೨ರಲ್ಲಿ ಮಾರ್ಚ್ ೧೨ ರಂದು ನಡೆದ ಅಮಾನುಷ ಘಟನೆ ದಲಿತರ ಸಾಂಘಿಕ ಪ್ರವೃತ್ತಿಯಲ್ಲಿ ಮಹತ್ತರ ತಿರುವನ್ನು ನೀಡಿದ ಘಟನೆಯಾಗಿದೆ. ಉಗಾದಿ ಹಬ್ಬದ ಮೂರನೇ ದಿನ ಕರಿಹರಿಯುವ ಸಂಪ್ರದಾಯದ ಕಾರ್ಯಕ್ರಮದಲ್ಲಿ ದಲಿತ ಯುವ ಮಹಿಳೆಯರ ಮೇಲೆ ನಡೆಯುತ್ತಿದ್ದ ಅಮಾನುಷ ಅವಮಾನವನ್ನು ಹೊಸಪೇಟೆಯ ಸುಮಾರು ೩೦ ಜನರ ಗುಂಪು ಪ್ರತಿಭಟಿಸಿದ ಘಟನೆ ಸ್ಮರಣೀಯವಾದುದು. ಕರಿಹರಿಯುವ ಆ ಕಾರ್ಯಕ್ರಮದಲ್ಲಿ ಲಿಂಗಾಯತ ಯುವಕರು ಹರಿಜನ ಯುವತಿಯರಿಗೆ ಅರಿಷಣದ ನೀರನ್ನು ಕೇಕೆ ಹಾಕುತ್ತಾ ಎರಚುವುದು ಎರಚಿಸಿಕೊಂಡ ಯುವತಿಯರು ಚರಿಗೆಯಿಂದ ಸಣ್ಣ ಏಟು ಹೊಡೆದು ಅದನ್ನೇ ಕೆಂಡದ ಹೊಂಡಕ್ಕೆ ಹಾಕುವ ಈ ಕಾರ್ಯಕ್ರಮ ಊರಿನ ಹಿರಿಯರು, ಗೌಡರ ಸಮಕ್ಷಮದಲ್ಲಿ ನಡೆಯುತ್ತಿತ್ತು. ಯುವತಿಯರಿಗೆ ಬಣ್ಣದ ನೀರನ್ನು ಎರಚುವ ದೃಶ್ಯವನ್ನು ನೆರೆದಿದ್ದ ಜನರೆಲ್ಲಾ ಸಿಳ್ಳೆ ಹಾಕಿ ನಗುತ್ತಿರುವ ದೃಶ್ಯ ಅತ್ಯಂತ ಅಮಾನುಷವಾಗಿತ್ತು. ಇದನ್ನು ಪ್ರತಿಭಟಿಸಲು ಹೋಗಿದ್ದ ದಲಿತರ ಗುಂಪು ಆ ಗ್ರಾಮದ ಗೌಡರು, ಹಿರಿಯರನ್ನು ತಾವು ಮಾಡುವ ಈ ಘನ ಕಾರ್ಯವನ್ನು ನಾವು ಅಂದರೆ ದಲಿತ ಯುವಕರು, ಲಿಂಗಾಯತ ಯುವತಿಯರಿಗೆ ಬಣ್ಣ ಎರಚಿಸುತ್ತೇವೆಂದು ವಾದ ಮಾಡಿದಾಗ ಮಾತಿನ ಚಕಮಕಿ ನಡೆದು ದೊಡ್ಡ ಗಲಾಟೆಯಾಗಿ ಪೊಲೀಸರ ಮಧ್ಯಪ್ರವೇಶದಿಂದ ಅನಾಹುತಗಳು ನಡೆಯಲಿಲ್ಲ. ಆದರೆ ಮೂರನೇ ವರ್ಷದಿಂದ ಇಂತಹ ಅಮಾನುಷ ಪದ್ಧತಿ ನಡೆಯಲಿಲ್ಲ. ಈ ಘಟನೆಯಿಂದಾಗಿ ಬಳ್ಳಾರಿ ಜಿಲ್ಲಾ ಕೇಂದ್ರದಲ್ಲಿ ಅಂಬೇಡ್ಕರ್ ಸಂಘ ಸ್ಥಾಪನೆಯಾಗಲು ಮತ್ತು ಜಿಲ್ಲೆಯಾದ್ಯಂತ ದಲಿತರ ಪರವಾದ ಹೋರಾಟಗಳು ನಡೆಯಲು ಈ ಘಟನೆ ಕಾರಣವಾಯಿತೆಂಬುದು ತಿಳಿದು ಬರುತ್ತದೆ.

ಮೊದಲಿನಿಂದಲೂ ಹೊಸಪೇಟೆ ನಗರಸಭೆಯ ಚಾಕರಿ ಕೆಲಸಗಳಲ್ಲಿ ಸ್ಥಳೀಯ ಚೆಲುವಾದಿಯ ಜನರು ಹೆಚ್ಚಿದ್ದರು. ಒಮ್ಮೆ ಧಾರ್ಮಿಕ ಆಚರಣೆಯ ಮೆರವಣಿಗೆಯ ಸಂದರ್ಭದಲ್ಲಿ ಚೆಲುವಾದಿಯರ ಹೆಂಗಸರು ಹರಿಜನ ಹೆಂಗಸರಿಗೆ ಸಗಣಿಯಿಂದ ಹೊಡೆದಿದ್ದ ಘಟನೆಯಿಂದಾಗಿ ಹೊಸಪೇಟೆಯ ಹರಿಜನರಿಗೂ ಚೆಲುವಾದಿಯರಿಗೂ ದೊಡ್ಡ ಗಲಾಟೆಗಳಾಗಿ ಹೊಡೆದಾಟ, ಬಡಿದಾಟಗಳು ನಡೆದು ಹಲವರಿಗೆ ಗಾಯಗಳಾಗಿದ್ದವು. ಇದರಿಂದ ಎರಡೂ ಜಾತಿಗಳಿಗೆ ಅನೇಕ ವರ್ಷ ಸಂಘರ್ಷಗಳು ನಡೆದಿದ್ದವು. ಮುಂದಾಗಬಹುದಾದ ಅನಾಹುತವನ್ನು ತಪ್ಪಿಸುವ ದೃಷ್ಟಿಯಿಂದ ಎರಡೂ ಜಾತಿಗಳ ಹಿರಿಯರು ಸಭೆ ಮಾಡಿ ಪರಸ್ಪರ ಅಪನಂಬಿಕೆಗಳನ್ನು ದೂರ ಮಾಡಿಕೊಂಡು ಸಂಧಾನ ಏರ್ಪಡಿಸಿಕೊಂಡರು.

ಆದರೆ ಈ ಘಟನೆಯಿಂದಾಗಿ ದಲಿತರ ಮುಖಂಡನಾಗಿದ್ದ ದುರುಗಯ್ಯರವರು ಕರ್ನೂಲ್‌ನಲ್ಲಿ ವೈವಾಹಿಕ ಸಂಬಂಧ ಹೊಂದಿದ್ದರಿಂದ ಅವರು ನಗರಸಭೆಯಲ್ಲಿ ಚೆಲುವಾದಿಯರೊಂದಿಗೆ ಕೆಲಸ ಮಾಡಲು ಅಲ್ಲಿಯ 'ತೋಡರು' ಹರಿಜನ ಜಾತಿಗೆ ಸೇರಿದವರಾಗಿದ್ದು ಅವರನ್ನು ಕರೆದುಕೊಂಡು ಬಂದು ನಗರಸಭೆಗೆ ಸೇರಿಸಿದರು. ಇದರಿಂದಾಗಿ ಆಂಧ್ರ ಪ್ರದೇಶದ 'ತೋಡ' ಜಾತಿಗೆ ಸೇರಿದ ಬಹಳಷ್ಟು ಕುಟುಂಬಗಳು ಹೊಸಪೇಟೆಗೆ ಬಂದು ನಗರಸಭೆಯಲ್ಲಿ 'ಜಾಗರಿ' ಕೆಲಸಕ್ಕೆ ಸೇರಲು ಇದೇ ಕಾರಣವೆಂದು ಹಲವರು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿಸಿದರು. ಸ್ಥಳೀಯ ಹರಿಜನರು ಬಹಳಷ್ಟು ಕಡಿಮೆ ಸಂಖ್ಯೆಯಲ್ಲಿ ಅದೂ ಇತ್ತೀಚೆಗೆ ನಗರಸಭೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದರೂ, ಇವತ್ತಿಗೂ ಅಧಿಕ ಸಂಖ್ಯೆಯಲ್ಲಿ ತೋಡರು ಅಧಿಕ ಸಂಖ್ಯೆಯಲ್ಲಿದ್ದು ಅವರಿಗಾಗಿ ಜಬ್ಬಲ್ ಸರ್ಕಲ್ ಹತ್ತಿರ ಪ್ರತ್ಯೇಕ ಕೇರಿ ಸೃಷ್ಠಿ ಯಾಗಿರುವುದು ಕಂಡು ಬರುತ್ತದೆ.

## ಮಹಿಳಾ ಸಾಂಘಿಕ ನೆಲೆಯ ಪರಿಣಾಮಗಳು

### ೧. ಅಂಗನವಾಡಿ ಕಾರ್ಯಕರ್ತೆಗೆ ನ್ಯಾಯ ಸಿಕ್ಕಿತು :

ಅಂಗನವಾಡಿ ಕಾರ್ಯಕರ್ತೆಯನ್ನು ಕೆಲಸದಿಂದಲೇ ತೆಗೆದು ಹಾಕುವ ರಾಜಕೀಯ ಪ್ರಯತ್ನ ವಿಫಲವಾಯಿತು. ಸಂಘಟನೆ ರೂಪಿಸಿದ ಹೋರಾಟದಿಂದಾಗಿ ಕೊನೆಗೂ ಮಣದ ಅಧ್ಯಕ್ಷನು ರಾಜೀ ಸಂಧಾನಕ್ಕೆ ಪ್ರಯತ್ನ ಪಟ್ಟನು. ಪ್ರಾರಂಭದಲ್ಲಿ ಆ ಕಾರ್ಯಕರ್ತೆಯನ್ನು ಅಶ್ಲೀಲ ಶಬ್ದಗಳಿಂದ ಸಂಬೋಧಿಸಿದ್ದ ವ್ಯಕ್ತಿ 'ನನ್ನ ತಂಗಿ ಇದ್ದ ಹಾಗೆ, ಆಯಮ್ಮ ಇಲ್ಲಿಯೇ ಕೆಲಸ ನಿರ್ವಹಿಸಲಿ, ಇನ್ನು ಮುಂದೆ ಯಾವುದೇ ಕಿರುಕುಳ ನೀಡುವುದಿಲ್ಲವೆಂದು ಭರವಸೆ ನೀಡಿದನು. ನೀಡಿದ ಭರವಸೆಯಂತೆ ಆ ಕಾರ್ಯಕರ್ತೆ ಇವತ್ತಿಗೂ ಯಾವುದೇ ಭಯವಿಲ್ಲದೆ ಅದೇ ಗ್ರಾಮದಲ್ಲಿ ಸೇವೆ ಸಲ್ಲಿಸುತ್ತಿದ್ದು, ಇದು ಈ ಚಳುವಳಿಯ ಪ್ರಮುಖ ಪರಿಣಾಮದಲ್ಲೊಂದಾಗಿರುತ್ತದೆ.

## ೨. ಸುತ್ತಮುತ್ತಲ ಗ್ರಾಮಗಳಲ್ಲಿ ಇದರ ಪ್ರಭಾವ :

ಈ ಘಟನೆಯ ಮುಂಚೆ ಅಂಗನವಾಡಿ ಕಾರ್ಯಕರ್ತೆಯರ ಮೇಲೆ ರಾಜಕೀಯ ವ್ಯಕ್ತಿಗಳಿಂದ, ಅಧಿಕಾರಶಾಹಿಗಳಿಂದ, ಶಿಕ್ಷಕರಿಂದ ಹಲವು ರೀತಿಯ ಕಿರುಕುಳಗಳು ನಡೆಯುತ್ತಿದ್ದವು. ಈ ಘಟನೆಯಾದ ಮೇಲೆ ಇದರ ಪ್ರಭಾವದಿಂದಾಗಿ ಕಿರುಕುಳಗಳು ಕಡಿಮೆಯಾದವು. ಅದರಲ್ಲೂ ಗ್ರಾಮ ಪಂಚಾಯ್ತಿ ಸದಸ್ಯರಿಂದಾಗುತ್ತಿದ್ದ ಕಿರುಕುಳಗಳು ಕಡಿಮೆಯಾದವೆಂದು ಹೇಳಬಹುದು. ಇದೂ ಕೂಡ ಈ ಚಳುವಳಿಯ ಸಾಧನೆಯೆಂದರೆ ತಪ್ಪಾಗದು.

## ೩. ಸಂಘಟನೆಯ ಬಲಿಷ್ಟತೆ :

ಅಂಗನವಾಡಿ ನೌಕರರ ಸಂಘಟನೆಯ ಮೇಲೆ ಈ ಬಹಿಷ್ಕಾರದ ಘಟನೆ ನೇರವಾದ ಪರಿಣಾಮವನ್ನು ಬೀರಿತು. ಅದುವರೆಗೂ ಸಂಘದ ಸದಸ್ಯತ್ವಕ್ಕೆ ಹಿಂದೇಟು ಹಾಕುತ್ತಿದ್ದ ನೌಕರರು ಈ ಘಟನೆಗೆ ಸಂಬಂಧಪಟ್ಟಂತೆ ಸಾಂಘಿಕ ಹೋರಾಟದ ಯಶಸ್ಸಿನಿಂದ ಪ್ರಭಾವಿತರಾದರು. ಅವರೇ ಸ್ವತಃ ಬಂದು ಸಂಘದ ವಂತಿಗೆ ನೀಡಿ ಸಂಘದ ಸದಸ್ಯತ್ವ ಪಡೆದರು. ಸಂಘದ ಸಭೆಗಳಲ್ಲಿ ಬಹಳಷ್ಟು ಗೈರು ಹಾಜರಾಗುತ್ತಿದ್ದ ಸದಸ್ಯರು ಈ ಘಟನೆಯ ನಂತರ ಕಡ್ಡಾಯವಾಗಿ ಹಾಜರಾಗಲು ಮುಂದಾದರು. ಸಂಘದ ವಂತಿಗೆಯನ್ನು ನೀಡಿದರು. ಇದರಿಂದ ಸಂಘಟನೆಯ ಜಾಲವನ್ನು ವಿಸ್ತರಿಸಲು ಅವಕಾಶವಾಯಿತು. ಇದರ ಪ್ರಭಾವ ಬೇರೆ ತಾಲೂಕುಗಳಲ್ಲಿಯೂ ಬೀರಿದ್ದರಿಂದ ಬೇರೆ ತಾಲೂಕುಗಳಿಗೂ ಹೋಗಿ ಸಂಘಟನೆಯ ಶಾಖೆ ಮತ್ತು ಪದಾಧಿಕಾರಿಗಳನ್ನು ಆಯ್ಕೆ ಮಾಡಲು ಇದರಿಂದ ಸಾಧ್ಯವಾಯಿತೆಂದು ಹೇಳಬಹುದು.

## ೪. ಅಧಿಕಾರ ಶಾಹಿಗಳ ಕಿರುಕುಳ ನಿಂತಿದ್ದು :

ಅಂಗನವಾಡಿ ಕಾರ್ಯಕರ್ತೆಯರಿಗೆ ಮಾಸಿಕ ಗೌರವಧನ ಮಂಜೂರಾತಿಯ ವಿಳಂಬ, ಅಧಿಕಾರಿಗಳ ಅನಾವಶ್ಯಕ ಕಿರಿಕಿರಿ, ನೋಟೀಸು ನೀಡುವುದು ಮೊದಲಾದ ಅಧಿಕಾರ ಶಾಹಿಗಳಿಂದಾಗುತ್ತಿದ್ದ ಕಿರುಕುಳ ಈ ಘಟನೆ ನಡೆದ ತರುವಾಯ ತನ್ನಷ್ಟಕ್ಕೆ ತಾನೇ ನಿಂತಿತು. ಅಂಗನವಾಡಿ ನೌಕರರ ಐಕ್ಯತೆಯಿಂದ, ಮತ್ತು ಅವನ ಸಾಂಘಿಕ ಹೋರಾಟದ ಭಯದಿಂದ ಇದೆಲ್ಲಾ ಸಾಧ್ಯವಾಯಿತು. ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಅರಿವು ಸಂಘದ ಸದಸ್ಯರೆಲ್ಲರಿಗೂ ತಿಳಿಯಿತು. ಹೀಗಾಗಿ ಹೊಸಪೇಟೆ ಘಟಕದ ಮುಖಂಡರಿಗೆ ಒಂದು ರೀತಿಯ ಸಾಂಘಿಕ ಬಲ ಬಂದಿದ್ದರಿಂದ ಇವರು ಹೊಸಪೇಟೆ ತಾಲೂಕಿನಿಂದಾಚೆಗೂ ಸಾಂಘಿಕ ಚಟುವಟಿಕೆಗಳನ್ನು ವಿಸ್ತರಿಸಲು ಮನಸ್ಸು ಮಾಡಿದರು. ಇವರ ಈ ಮಹತ್ವಾಕಾಂಕ್ಷೆಗೆ ಈ ಚಳುವಳಿಯ ಪ್ರಭಾವವೇ ಕಾರಣವೆಂದು ನಿಸ್ಸಂಕೋಚವಾಗಿ ಹೇಳಬಹುದು.

## ೫. ಮಹಿಳಾ ಚಳುವಳಿಗೆ ಹೆಚ್ಚಿನ ಬಲ :

ಹೊಸಪೇಟೆ ತಾಲೂಕಿನ ಅಂದಿನ ದಿನಮಾನಗಳಲ್ಲಿ ನಡೆದ ವರದಕ್ಷಿಣೆ ಸಾವು, ಮಹಿಳೆಯರ ಮೇಲಿನ ದಬ್ಬಾಳಿಕೆಗಳ ವಿರುದ್ಧ ನಡೆದ ಅನೇಕ ಮಹಿಳಾ ಚಳುವಳಿಗಳಿಗೆ ಈ ಘಟನೆಯಿಂದ ಸ್ಫೂರ್ತಿ ಬಂದಿತು. ಮಹಿಳೆಯರ ವಿಷಯಗಳಿಗೆ ಸಂಬಂಧ ಪಟ್ಟಂತೆ ನಡೆದ ಚಳುವಳಿಗಳಲ್ಲಿಯೂ ಅಂಗನವಾಡಿ ನೌಕರರ ಸಂಘದ ಸದಸ್ಯರು / ಮುಖಂಡರು ಸಕ್ರಿಯವಾಗಿ ಭಾಗವಹಿಸಿದ್ದರಿಂದ ಆ ಚಳುವಳಿಗಳಿಗೆ ಹೆಚ್ಚಿನ ಬಲ ಬಂದಂತಾಯಿತು. ಇದೇ ಸಂದರ್ಭದಲ್ಲಿ ನಡೆದ ಹೊಸಪೇಟೆ ನಗರದ ದಲಿತ ಮಹಿಳೆಯ ಕಗ್ಗೊಲೆ (೧೯೯೫ ರಲ್ಲಿ) ಯ ವಿರುದ್ಧ ನಡೆದ ಚಳುವಳಿಯಲ್ಲಿ ಅಂಗನವಾಡಿ ನೌಕರರ ಸಂಘದ ಸದಸ್ಯರು ಜಾತಿ, ಭೇದ ಮರೆತು ಭಾಗವಹಿಸಿದ್ದರು. ಇದರಿಂದ ಈ ಚಳುವಳಿ ಪರಿಣಾಮಕಾರಿಯಾಗಲು ಕಾರಣವಾಯಿತು.

ಒಟ್ಟಿನಲ್ಲಿ ಸಾಮಾಜಿಕ ಬಹಿಷ್ಕಾರದ ಪ್ರಕರಣ ಹೊಸಪೇಟೆ ತಾಲೂಕಿನ ಅಂಗನವಾಡಿ ನೌಕರರ ಸಂಘಟನೆಗೆ ಮತ್ತು ತಾಲೂಕಿನ ಮಹಿಳಾ ಚಳುವಳಿಕೆ ಒಂದು ತಾತ್ವಿಕ ನೆಲೆ ನೀಡಿದ ಘಟನೆಯೆಂದರೂ ತಪ್ಪಾಗಲಾರದು. ಅಷ್ಟೊಂದು ಪ್ರಭಾವ ಬೀರಿದ ಈ ಘಟನೆ ಒಂದು ಚಾರಿತ್ರಿಕ ಘಟನೆಯಾಗಿದೆ ಎಂಬುದು ತಿಳಿದು ಬರುತ್ತದೆ.

## ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಅಂಗನವಾಡಿ ನೌಕರರನ್ನು ಕೆಲಸದಿಂದ ವಜಾ ಮಾಡಿದುದನ್ನು ವಿರೋಧಿಸಿದ ಘಟನೆ

ಅಂಗನವಾಡಿ ಕೇಂದ್ರಗಳಿಗೆ ಪೂರೈಕೆಯಾಗುತ್ತಿದ್ದ ಆಹಾರಧಾನ್ಯಗಳನ್ನು ಕಳ್ಳಸಾಗಾಣಿಕೆ ಮಾಡುವ ಜಾಲವನ್ನು ಬಳ್ಳಾರಿ ತಾಲೂಕಿನ ಮೋಕಾ ಗ್ರಾಮದಲ್ಲಿ ಪೋಲೀಸರು ಪತ್ತೆ ಮಾಡಿದ್ದರು. ಇದು ಹೊಸಪೇಟೆ ತಾಲೂಕಿನ ಅಂಗನವಾಡಿ ಕೇಂದ್ರಗಳಿಗೆ ಸೇರಿದ ಆಹಾರ ಧಾನ್ಯವಾಗಿತ್ತು. ಈ ಪ್ರಕರಣ ಬಳ್ಳಾರಿ ಜಿಲ್ಲಾ ಪಂಚಾಯ್ತಿಯಲ್ಲಿ ಸಾಕಷ್ಟು ವಾಗ್ವಾದಕ್ಕೆ ಕಾರಣವಾಗಿ ಇದನ್ನು ತನಿಖೆಗೆ ಒಳಪಡಿಸಿಬೇಕೆಂದೂ ತೀರ್ಮಾನಿಸಿ ಹೊಸಪೇಟೆ ತಾಲೂಕಿನ ಸುಮಾರು ಒಂಬತ್ತು ಜನ ನೌಕರರನ್ನು ಸೇವೆಯಿಂದ ತೆಗೆದು ಹಾಕಲಾಗಿತ್ತು.

ಈ ಪ್ರಕರಣದಲ್ಲಿ ಅನೇಕ ಅಧಿಕಾರಿಗಳು ಭಾಗಿಗಳಾಗಿದ್ದರೂ ಕೇವಲ ಅಮಾಯಕ ಅಂಗನವಾಡಿ ನೌಕರರನ್ನು ಮಾತ್ರ ಹೊಣೆ ಮಾಡಿ ಸೇವೆಯಿಂದ ತೆಗೆದು ಹಾಕಿದ್ದು, ಏಕ ಪಕ್ಷೀಯ ಕ್ರಮವಾಗಿತ್ತು. ಈ ಅನ್ಯಾಯವನ್ನು ಪ್ರತಿಭಟಿಸಿ ನೌಕರರ ಸಂಘಟನೆ ಹೋರಾಟದ ಈ ಮಾರ್ಗವನ್ನು ಅನುಸರಿಸಿದ್ದರಿಂದ ಕೆಲಸ ಕಳೆದುಕೊಂಡಿದ್ದ ಎಲ್ಲಾ ಒಂಭತ್ತು ಜನ ಅಂಗನವಾಡಿ ನೌಕರರು ಪುನಃ ಕೆಲಸ ಪಡೆಯುವಲ್ಲಿ ಯಶಸ್ವಿಯಾದರು.

## ಕೂಲಿಯ ಹೆಚ್ಚಳಕ್ಕಾಗಿ ನಡೆದಿರುವ ಹೋರಾಟ :

ಅಂಗನವಾಡಿ ಕಾರ್ಯಕರ್ತರಿಗೆ ಪ್ರಾರಂಭದಲ್ಲಿ ಎಸ್. ಎಸ್. ಎಲ್.ಸಿ. ಪಾಸಾದವರಿಗೆ ೨೭೫, ಫೇಲಾದವರಿಗೆ ೨೨೫ ಮತ್ತು ಸಹಾಯಕರಿಗೆ ೧೧೦ ರೂ. ಮಾತ್ರ ಇತ್ತು. ಕೂಲಿಯ ಹೆಚ್ಚಳಕ್ಕಾಗಿ ಹೊಸಪೇಟೆಯ ತಾಲೂಕಿನ ಅಂಗನವಾಡಿ ನೌಕರರ ಸಂಘಟನೆ ಯಾವತ್ತೂ ಮುಂಚೂಣಿಯ ಹೋರಾಟ ಮಾಡಿಕೊಂಡು ಬಂದಿದೆ. ಹಲವು ಸಲ ಮಾನ್ಯ ಮಂತ್ರಿ ಮಹೋದಯರು, ಇಲಾಖೆಯ ಸಚಿವರು, ನಿರ್ದೇಶಕರುಗಳಿಗೆ ಮನವಿ ಪತ್ರಗಳನ್ನು ಸಲ್ಲಿಸಿದೆ. ಪ್ರವಾಸಿ ಕೇಂದ್ರವಾದ ಐತಿಹಾಸಿಕ ಹಂಪಿ ಕ್ಷೇತ್ರಕ್ಕೆ ಬಂದಾಗೆಲ್ಲಾ ಹೊಸಪೇಟೆ ಘಟಕದ ಸದಸ್ಯರು ಕೆಲವು ಬಾರಿ ಘೆರಾವ್, ರಸ್ತೆ ತಡೆಯಂತಹ ಕಾರ್ಯಕ್ರಮಗಳನ್ನು ನಡೆಸಿ, ಅವರ ಗಮನಕ್ಕೆ ವೇತನ ಹೆಚ್ಚಳಕ್ಕೆ ಒತ್ತಾಯಿಸಿದೆ. ರಾಜ್ಯಮಟ್ಟದ ಒಕ್ಕೂಟದ ನೇತೃತ್ವದಲ್ಲಿ ರಾಜ್ಯ ಮಟ್ಟದ ಕರೆಗಳಂತೆ ಹೊಸಪೇಟೆ ತಾಲೂಕಿನಾದ್ಯಂತ ಇರುವ ಎಲ್ಲಾ ಸದಸ್ಯರು ಹೊಸಪೇಟೆ ತಾಲೂಕು ಕೇಂದ್ರ ಸ್ಥಳದಲ್ಲಿ ಮೆರವಣಿಗೆ ಮಾಡಿ ಸಾರ್ವಜನಿಕರ ಸಹಾಯನುಭೂತಿ ಪಡೆದಿದೆ. ತಹಶೀಲ್ದಾರವರ ಮುಖಾಂತರ ವೇತನ ಹೆಚ್ಚಳಕ್ಕಾಗಿ ಬೇಡಿಕೆ ಪತ್ರ ಸಲ್ಲಿಸಿದ್ದು, ಬೇಡಿಕೆಗಳಲ್ಲಿ ಯಾವಾಗಲೂ ವೇತನ ಹೆಚ್ಚಳದ ಬೇಡಿಕೆ ಸಹಜವಾಗಿ ಮೊದಲನೇ ಆದ್ಯತೆಯ ಬೇಡಿಕೆಯಾಗಿರುವುದು ತಿಳಿದು ಬರುತ್ತದೆ.

ವೇತನ ಹೆಚ್ಚಳ, ಹೆರಿಗೆ ರಜ ಮಂಜೂರಾತಿ, ಬೇಸಿಗೆ ರಜ, ವಾರ್ಷಿಕ ಹಕ್ಕಿನ ರಜ, ಮೊದಲಾದ ಸೌಲಭ್ಯಗಳನ್ನು ಹೋರಾಟ, ಸಾಂಘಿಕ ಚಳುವಳಿಯಿಂದಲೇ ಪಡೆಯಲು ಸಾಧ್ಯವಾಗಿದೆ. ಹೆರಿಗೆ ರಜೆಯನ್ನು ಪ್ರಾರಂಭದಲ್ಲಿ ಕೆಲಸಕ್ಕೆ ಸೇರಿದ ಒಂದು ವರ್ಷದ ನಂತರ ಕೊಡುತ್ತಿದ್ದರು. ಈಗ ಹೋರಾಟದ ಫಲವಾಗಿ ಕೆಲಸಕ್ಕೆ ಸೇರಿದ ತಕ್ಷಣವೇ ಮಂಜೂರು ಮಾಡುತ್ತಿದ್ದಾರೆ. ಪ್ರತಿಭಟನೆಗಳು ಸಾಮಾನ್ಯವಾಗಿ ಕೆಲಸಕ್ಕೆ ಗೈರು ಹಾಜರಾಗಿಯೇ ಮಾಡುತ್ತಿರುವುದು ಕಂಡು ಬರುತ್ತದೆ. ಪ್ರತಿಭಟನೆ ಮಾಡಿದ ದಿನಗಳಂದು ವೇತನವನ್ನು ಕಳೆದು ಕೊಳ್ಳುವುದು ಸಾಮಾನ್ಯವಾಗಿರುವುದು ತಿಳಿದು ಬರುತ್ತದೆ. ಖಾಯಂ ನೌಕರರಲ್ಲದ ಈ ನೌಕರರಿಗೆ ಗೈರು ಹಾಜರಾದ ದಿನವು ನಿರಂತರ ಸೇವೆಯ ಸಮಸ್ಯೆ ಅನ್ವಯಿಸುವುದಿಲ್ಲ. ಖಾಯಂ ನೌಕರರು ಗೈರು ಹಾಜರಾದ ದಿನಗಳಿಂದ ಸೇವಾ ಸೌಲಭ್ಯಗಳನ್ನು ಪಡೆಯಲು ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಆದ್ದರಿಂದಲೇ ಖಾಯಂಗೊಂಡ ಅದರಲ್ಲೂ ಸರಕಾರಿ ನೌಕರರು ಮುಷ್ಕರದ ದಿನಗಳಲ್ಲಿ ತಮ್ಮ ಹಕ್ಕಿನ ರಜೆಯೆಂದು, ಪರಿಗಣಿಸಲು ಸರಕಾರವನ್ನು ಒತ್ತಾಯಿಸುವ, ಮಂಜೂರು ಮಾಡಿಸಿಕೊಳ್ಳುವ ಪದ್ಧತಿಯನ್ನು ಗಮನಿಸಬಹುದು.

ಪ್ರಾರಂಭದಲ್ಲಿ ಸಂಘಟನೆಯ ಸದಸ್ಯರು ಹೋರಾಟಕ್ಕೆ ಹಿಂದೇಟು ಹಾಕುತ್ತಿದ್ದರು. ಅದಕ್ಕೆ ಕಾರಣಗಳು ಕೆಳಗಿನಂತಿವೆ.

## ೧. ಸಂಪ್ರದಾಯಸ್ಥ ಕುಟುಂಬದ ಕಾರಣ :

ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದ ಬಡ ಸಂಪ್ರದಾಯಸ್ಥ ಕುಟುಂಬದ ಮಹಿಳೆಯರೇ ಅಂಗನವಾಡಿ ಕಾರ್ಯಕರ್ತರಾಗಿ ನೇಮಕಗೊಂಡಿದ್ದರಿಂದ ಈ ಕಾರಣಕ್ಕಾಗಿ ಹೋರಾಟ, ಸಂಘಟನೆ, ಚಳುವಳಿಯೆಂದರೆ ಅಷ್ಟಾಗಿ ಆಸಕ್ತಿ ತೋರಿಸುತ್ತಿರಲಿಲ್ಲ. ಆದರೆ ಸಂಘಟನೆಯ ಮುಖಂಡರು ಅವರ ಸಮಸ್ಯೆಗಳನ್ನು ಗುರುತಿಸಿ ಆ ಸಮಸ್ಯೆಗಳನ್ನು ಬಗೆಹರಿಸಲು ನಡೆಸಿದ ವ್ಯಾಪಕ ಚಳುವಳಿಯ ಸಕಾರಾತ್ಮಕ ಪ್ರಭಾವದಿಂದಾಗಿ ಸಂಘಟನೆಯ ಚೌಕಟ್ಟಿಗೆ ಬರಲು ಮುಂದಾದರು. ಯಾವುದೇ ಸಂಘಟನೆ ಸಮಸ್ಯೆಗಳನ್ನು ಗುರುತಿಸದೇ, ಅವರ ವಿಶ್ವಾಸವನ್ನು ವೃದ್ಧಿಸಿಕೊಳ್ಳದೇ ಸದಸ್ಯತ್ವ ಪಡೆಯುವುದೂ ಕಷ್ಟವೆಂಬುದನ್ನು ಮನಗಂಡ ಮುಖಂಡರು ಅವರ ನ್ಯಾಯಯುತವಾದ ಸೌಲಭ್ಯಗಳನ್ನು ದೊರಕಿಸಿ ಕೊಡುವುದರ ಮುಖಾಂತರವೇ ಸಂಘಟನೆಯ ಗಟ್ಟಿತನಕ್ಕೆ ಯತ್ನಿಸುವುದು ಸೂಕ್ತವೆಂಬುದು ಈ ಸಂಘಟನೆ ತೋರಿಸಿಕೊಟ್ಟದೆ.

## ೨. ಬಡತನ ಕಾರಣ :

ಅಂಗನವಾಡಿ ಕಾರ್ಯಕರ್ತರು, ಸಹಾಯಕರು ಬಡವರಾಗಿದ್ದರಿಂದ ಸಂಘಟನೆ, ಚಳುವಳಿಯಲ್ಲಿ ಭಾಗವಹಿಸಿದರೆ ನಮ್ಮ ಕೆಲಸ ಹೋಗುವುದೆಂಬ ಭಯವೂ ಸಂಘಟನೆ ಸೇರುವಲ್ಲಿಯ ಹಿಂಜರಿಕೆಗೆ ಮತ್ತೊಂದು ಕಾರಣ. ಯಾವುದೇ ಕೆಲಸದ ಭದ್ರತೆ ಇಲ್ಲದೆ ಈ ಕೆಲಸವೂ ತಪ್ಪಿ ಹೋದರೆ, ಜೀವನಕ್ಕೆ ಏನು ಮಾಡಬೇಕೆಂಬ ಅಸಹಾಯಕತೆಯಿಂದ ಸಂಘಟನೆಗೆ ಅಷ್ಟೊಂದು ಬೆಂಬಲ ನಿಡಲಿಲ್ಲ.

## ೩. ಪಟ್ಟ ಭದ್ರರ ಭಯ :

ಅಧಿಕಾರಶಾಹಿಗಳ ಮತ್ತು ಪಟ್ಟ ಭದ್ರ ಹಿತಾಸಕ್ತರ ಭಯದಿಂದಲೂ ಸಂಘಟನೆಯ ಸೇರಿಕೆಗೆ ಹಿಂದೇಟು ಹಾಕಲು ಮತ್ತೊಂದು ಕಾರಣವೆಂದರೆ ತಪ್ಪಾಗಲಾರದು. ಗ್ರಾಮ ಪಂಚಾಯ್ತಿ ಸದಸ್ಯರು / ಅಧ್ಯಕ್ಷರು ಮತ್ತು ರಾಜಕೀಯ ಮುಖಂಡರ ಹೆದರಿಕೆಯಿಂದ ಸಂಘಟನೆಯ ಚಟುವಟಿಕೆಗಳಿಗೆ ಸದಸ್ಯರು ಸ್ಪಂದಿಸುವಲ್ಲಿ ಅನಾಸಕ್ತಿ ಕಾಣುತ್ತಿತ್ತು. ಅವರ ಮೂಲಭೂತ ಬೇಡಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡಿ ಸಮಸ್ಯೆಗಳನ್ನು ಬಗೆಹರಿಸಿದ್ದರಿಂದ ಎಲ್ಲಾ ಸದಸ್ಯರು ಪ್ರತಿಭಟನೆಯಲ್ಲಿ ಭಾಗವಹಿಸುವಂತಾಗಿದೆ.

## ೪. ಸಂಘಟನೆಗಳ ಭಿನ್ನಾಭಿಪ್ರಾಯ :

ಕರ್ನಾಟಕ ರಾಜ್ಯದಲ್ಲಿ ವಿವಿಧ ರಾಜಕೀಯ ಹಿತಾಸಕ್ತಿಯ, ವೈಯಕ್ತಿಕ ವ್ಯಕ್ತಿಗಳ ಪ್ರತಿಷ್ಠೆಯ ಏಳು ಸಂಘಗಳು ಅಸ್ಥಿತ್ವಕ್ಕೆ ಬಂದಿದ್ದು, ಹೊಸಪೇಟೆಯಲ್ಲಿ ಪ್ರಾರಂಭದಲ್ಲಿ ಎರಡು ಸಂಘಗಳಿದ್ದವು. ಸಿ. ಐ. ಟಿ. ಯು ಮತ್ತು ಎ. ಐ.ಟಿ. ಯು.ಸಿ. ನೇತೃತ್ವದಲ್ಲಿ ಅಂಗನವಾಡಿ ನೌಕರರ ಸಂಘಟನೆಗಳು ಅಸ್ಥಿತ್ವಕ್ಕೆ ಬಂದಿದ್ದರಿಂದ ಈ ಎರಡೂ ಸಂಘಟನೆಗಳು ಬೇರೆ ಬೇರೆ ತಾತ್ವಿಕ ನೆಲೆಗಟ್ಟಿನಲ್ಲಿ ರಚನೆಯಾಗಿದ್ದರಿಂದ ಚಳುವಳಿಯಲ್ಲಿ ಎಲ್ಲರೂ ಭಾಗವಹಿಸುವುದು ಅಸಾಧ್ಯವಾಗಿತ್ತು. ಆದರೆ ಈಗ ಹೊಸಪೇಟೆ ತಾಲೂಕಿನಲ್ಲಿ ಕೇವಲ ಸಿ. ಐ. ಟಿ. ಯು ನೇತೃತ್ವದಲ್ಲಿ ಮಾತ್ರ ಸಂಘಟನೆ ನಡೆಯುತ್ತಿರುವುದರಿಂದ ಇಂದಿನ ಚಳುವಳಿಗೆ ಸಂಪೂರ್ಣ ಬೆಂಬಲ ಸಿಗುತ್ತಿದೆ.

## ಸಮುದಾಯ ಸಾಂಘಿಕ ನೆಲೆಯ ಪರಿಣಾಮಗಳು:

### ೧. ವಿದ್ಯೆಯ ಪ್ರಭಾವ:

ಕೇವಲ ಮಾಂಸಮಾರಿ ಜೀವನ ಸಾಗಿಸುತ್ತಿದ್ದ ಖಾಟಿಕ್ ಸಮುದಾಯ ಮೊದಲಿನಿಂದಲೂ ದೈಹಿಕ ಶ್ರಮವನ್ನೇ ನಂಬಿ ಬದುಕುತ್ತಿದ್ದು, ಸಮುದಾಯದಲ್ಲಾದ ಬದಲಾವಣೆಯಿಂದಾಗಿ ವಿದ್ಯೆಗೆ ಹೆಚ್ಚಿನ ಒತ್ತು ನೀಡಲಾಯಿತು. ವಿದ್ಯೆ ಕಲಿತ ಮಕ್ಕಳು ತಲೆತಲಾಂತರ ಬಂದಿರುವ ಸಾಂಪ್ರದಾಯಿಕ ವೃತ್ತಿಯನ್ನು ತೊರೆದು ಇತರೆ ವೃತ್ತಿಗಳಲ್ಲಿ ತೊಡಗಿಕೊಂಡರು. ಹಲವು ಯುವಕರು ಉನ್ನತ ಹುದ್ದೆಗಳನ್ನು ಪಡೆದರು. ಇದರಿಂದ ಈ ಸಮುದಾಯದಲ್ಲಿ ನಾವೂ ಅವರಂತೆಯೆ ವಿದ್ಯೆ ಪಡೆದು ಮುಂದೆ ಬರಬೇಕೆನ್ನುವ ಛಲ ಮೂಡಿತು. ಇದರಿಂದಾಗಿ ಸಮುದಾಯದ ಮಕ್ಕಳು ಅಕ್ಷರಸ್ಥರಾಗಿ ಇತರೆ ಸಮುದಾಯಗಳೊಂದಿಗೆ ತಮ್ಮ ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರುತ್ತಿದ್ದು, ಇದು ಸಾಂಘಿಕ ಪ್ರವೃತ್ತಿಗೆ ದೊರೆತ ಜಯವೆಂದು ಹೇಳಬಹುದು.

### ೨. ಸಾಂಘಿಕ ಚಟುವಟಿಕೆಗಳ ವಿಸ್ತರಣೆ :

ಸಮುದಾಯದ ಹಿರಿಯರ ಸಂಘಟನೆಯ ಪ್ರಭಾವವು ಸಮುದಾಯದ ವಿದ್ಯಾರ್ಥಿಗಳ ಮೇಲೆ, ಯುವಕರ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಇದರಿಂದ ತಾವೂ ಕೂಡ ಸಂಘಟನೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಸಹಾಯಕವಾಯಿತು. ವಿದ್ಯಾರ್ಥಿಗಳು, ಯುವಕರ ಗುಂಪನ್ನು ರಚಿಸಿಕೊಂಡು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಅನೇಕ ಬಹುಮಾನಗಳನ್ನು ಕೊಡುವ, ಪಂದ್ಯಾಟಗಳನ್ನು ನಡೆಸಿ ವಿಜೇತರಿಗೆ ಪುರಸ್ಕಾರಗಳನ್ನು ನೀಡುವ ಹಲವಾರು ರಚನಾತ್ಮಕವಾದ ಚಟುವಟಿಕೆಗಳನ್ನು ಮಾಡುವುದರ ಮೂಲಕ ಸಮುದಾಯವನ್ನು ಬೆಳೆಸುವ ಕ್ರಿಯೆಯಲ್ಲಿ ತೊಡಗಿಕೊಂಡಿದ್ದರಿಂದ ಈ ಸಮುದಾಯದವೂ ಮುಂದೆ ಬರಲು ಸಹಾಯವಾಯಿತು.

### ೩. ಪರಂಪರಾಗತ ವೃತ್ತಿಯ ಬದಲಿಗೆ ಇತರೆ ವೃತ್ತಿಗೆ ಪರಿವರ್ತನೆ :

ಕುರಿ ಕಡಿದು ಮಾಂಸ ಮಾರಾಟ ಮಾಡುವ ಮಾಂಸಹಾರಿ ಹೋಟೆಲ್ ನಡೆಸುವ, ಮತ್ತು ಸರಾಯಿ ಸೇಂದಿ ಅಂಗಡಿಗಳ ಮುಂದೆ ಕುರಿಯ 'ಕಳ್ಳುಪಚ್ಚಿ ಚುಕ್ಕಾ' ಮಾರಾಟ ಮಾಡುವ ಪರಂಪರಾನುಗತ ವೃತ್ತಿಯನ್ನು ತೊರೆದು ಇತರೆ ವೃತ್ತಿಗಳನ್ನು ಅವಲಂಬಿಸಲು ಪ್ರಾರಂಭಿಸಿದರು. ಕುರಿ ಕಡಿಯುವ ಕಾಯಕವೂ ಈಗ ಕೇವಲ ಈ ಜಾತಿಗೆ ಮಾತ್ರ ಸೀಮಿತವಾಗಿಲ್ಲ. ಹಾಗೆ ನೋಡಿದರೆ, ಈ ಸಮುದಾಯ ಆ ವೃತ್ತಿಯನ್ನು ಬಹುತೇಕ ಕಡಿಮೆ ಮಾಡಿದ್ದಾರೆಂದು ಹೇಳಬಹುದು. ಏಕೆಂದರೆ ಇವತ್ತು ಹೊಸಪೇಟೆ ತಾಲೂಕಿನಲ್ಲಿ ಮಟನ್ ಮಾರುವ ವೃತ್ತಿಯಲ್ಲಿ ಇವರಿಗಿಂತ ಹೆಚ್ಚಾಗಿ ''ಮುಸ್ಲಿಂರು'' ತೊಡಗಿರುವುದು ಕಂಡು ಬರುತ್ತದೆ. ಮಾಂಸಾಹಾರದ ಬೇಡಿಕೆ ಹೆಚ್ಚಿರುವ ಮುಸ್ಲಿಂರಿಗೆ ಖಾಟಿಕ್ ಸಮುದಾಯವು ಈ ವೃತ್ತಿಯಿಂದ ದೂರವಾಗುತ್ತಿರುವುದರಿಂದ ಅವರಿಗೆ ಈ ವೃತ್ತಿ ಅನಿವಾರ್ಯವಾದ ವೃತ್ತಿಯಾಗಿದೆ ಎಂಬುದು ಕಂಡು ಬರುತ್ತದೆ.

## ೪. ಅನಿಷ್ಠ ಪದ್ಧತಿಗೆ ವಿದಾಯ :

'ಭೋಟಾಥಾಲಾ' ಪಂಗಡದವರು ಅನುಸರಿಸಿಕೊಂಡು ಬರುತ್ತಿದ್ದ 'ಸೂಳೆಗಾರಿಕೆ' ಎಂಬ ಅನಿಷ್ಠ ಪದ್ದತಿಯನ್ನು ದೂರ ಮಾಡಲು ಈ ಸಂಘಟನೆಯಿಂದ ಸಾಧ್ಯವಾಗಿತ್ತು. ಎರಡು ವರ್ಗಗಳಾಗಿ ಒಡೆದು ಹೋಗಲು ಕಾರಣವಾಗಿದ್ದ ಈ ಪದ್ದತಿಯ ಬಗ್ಗೆ ಸಮುದಾಯದ ಹಿರಿಯರು ಜಾಗೃತಿ ಮೂಡಿಸಿದ್ದರಿಂದ ಆ ವರ್ಗವೂ 'ಭಡಾಥಾಲಾ' ಪಂಗಡದೊಂದಿಗೆ ಸೇರಿ ಇಡೀ ಸಮುದಾಯದ ಒಗ್ಗಟ್ಟಿಗೆ, ಸಮುದಾಯದಲ್ಲಿ ಅಭಿವೃದ್ಧಿ ಹೊಂದಲು ಕಾರಣವಾಯಿತು.

## ೫. ಸಂಘಟನೆಯ ಕಟ್ಟಡ ನಿರ್ಮಿಸಲು ನಿವೇಶನ ಪಡೆದದ್ದು :

ಖಾಟಿಕ್ ಸಮುದಾಯದ ಕುಟುಂಬಗಳು ಹೊಸಪೇಟೆ ತಾಲೂಕಿನಲ್ಲಿ ಕೇವಲ ೨೩೪ ಕುಟುಂಬಗಳು ಮಾತ್ರ. ಒಟ್ಟು ಜನಸಂಖ್ಯೆ ಸುಮಾರು ೧೦೦೦. ಆದರೆ ಈ ಸಮುದಾಯದವರ ಸಾಂಘಿಕ ಪ್ರಯತ್ನದಿಂದಾಗಿ ಹೊಸಪೇಟೆಯ ಪ್ರತಿಷ್ಠಿತ ನಗರದಲ್ಲಿ ೮೦' x ೮೦' ಅಳತೆಯ ನಿವೇಶನವನ್ನು ಪಡೆಯಲು ಸಾಧ್ಯವಾಯಿತು. ಶಾಸಕರ ಅನುದಾನದಿಂದ ಹಣ ಸಹಾಯ ದೊರೆತಿದ್ದು, ಮುಂದಿನ ದಿನಗಳಲ್ಲಿ ಕಟ್ಟಡ ನಿರ್ಮಾಣವಾಗಲಿದೆ.

ಬೇರೆ ಸಮುದಾಯಗಳಿಗೆ ಹೋಲಿಸಿದರೆ ಕಡಿಮೆ ಸಂಖ್ಯೆಯಲ್ಲಿರುವ ಈ ಸಮುದಾಯದವು ಮೇಲಿನ ಸ್ವಲ್ಪಮಟ್ಟಿನ ಅಭಿವೃದ್ಧಿ ಸಾಧ್ಯವಾಗಿದ್ದರೂ ಈ ಸಮುದಾಯದ ಬಹುತೇಕ ಕುಟುಮಬಗಳು ಇನ್ನು ಬಡತನದಲ್ಲಿಯೇ ಇವೆ ಎಂದು ಹೇಳಬಹುದು. ಸ್ವಂತ ಮನೆ, ಸ್ವಂತ ಜಮೀನು ಈ ಸಮುದಾಯಕ್ಕೆ ಮರೀಚಿಕೆಯೇ ಆಗಿದೆ. ಇತರೆ ಸಣ್ಣ ಪುಟ್ಟ ವ್ಯಾಪಾರಗಳಲ್ಲಿ ಜೀವನ ಸಾಗಿಸುತ್ತಿರುವ ಈ ಕುಟುಂಬಗಳು ತಮ್ಮ ತಲೆತಲಾಂತರದ ಕಸಬನ್ನು ತೊರೆದು ವಿದ್ಯಾವಂತರಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಮುಂದೆ ಬರಬೇಕಾಗಿದೆ. ಭೂಮಿಯ ಹಕ್ಕಿನಿಂದಾಗಿ ಈ ನೆಲದೊಂದಿಗೆ ಅವರು ಶಾಶ್ವತ ಸಂಬಂಧ ಪಡೆಯಲು ಪ್ರಯತ್ನಿಸಬೇಕಾಗಿದೆ. ಭೂಮಿಯ ಸಂಬಂಧವಿಲ್ಲದ ಈ ಸಮುದಾಯ ಮುಂದೊಂದುದಿನ ಊರನ್ನು ತೊರೆದು ಜೀವನೋಪಾಯಕ್ಕಾಗಿ ಅನ್ಯ ಪ್ರದೇಶಕ್ಕೆ ವಲಸೆ ಹೋಗುವ ಸಂಭವ ನಿರ್ಮಾಣವಾಗಬಹುದು. ಈ ಹಿನ್ನೆಲೆಯಲ್ಲಿ 'ಖಾಟಿಕ್' ಸಮುದಾಯದಂಥ ಹಿಂದುಳಿದ ಸಾಂಸ್ಕೃತಿಕ ವೈವಿಧ್ಯಯುಳ್ಳ ಸಮುದಾಯದ ಪ್ರಗತಿಗೆ ಎಲ್ಲರೂ ಶ್ರಮಿಸಬೇಕಾಗಿರುವುದು ಮತ್ತು ಆ ನಿಟ್ಟಿನಲ್ಲಿ ಸಾಂಘಿಕ ನೆಲೆ ವಿಸ್ತಾರಗೊಳಿಸುವ ಅವಶ್ಯಕತೆಯನ್ನು ಅರಿಯಬೇಕಾಗಿದೆ.

## ಕಾರ್ಮಿಕ ಸಾಂಘಿಕ ನೆಲೆಯ ಪರಿಣಾಮಗಳು

**೧. ಒಂದೂವರೆ ಪಟ್ಟು ಕೂಲಿಯ ದರದಲ್ಲಿ ಹೆಚ್ಚಳ :** ಹಮಾಲರ ಕೂಲಿಯ ಹೆಚ್ಚಳದಲ್ಲಿ ಭಾರೀ ಬದಲಾವಣೆಯಾಯಿತು. ಈ ಮೊದಲು ಒಂದು ಟನ್‌ಗೆ ೮ ರೂ. ಮಾತ್ರ ಕೊಡಲಾಗುತ್ತಿತ್ತು. ಒಂದು ಲಾರಿ ೧೦ ಟನ್ ಸಾಮರ್ಥ್ಯದ ಸರಕನ್ನು ಇಳಿಸಿದರೆ ಒಟ್ಟು ೪೦ ರೂ. ಮಾತ್ರ (ಒಂದು ಲಾರಿ ಅನ್‌ಲೋಡ್ ಮಾಡಲು ೪ ಜನ ಹಮಾಲರು ಬೇಕು) ಸಿಗುತ್ತಿತ್ತು. ಈ ಚಳುವಳಿಯ ನಂತರ ೧ ಟನ್‌ಗೆ ಹದಿನೈದು ರೂಪಾಯಿಗಳೆಂದು ನಿಗಧಿ ಮಾಡಲಾಯಿತು. ಅಂದರೆ ೧೦ ಟನ್ ಒಂದು ಲಾರಿ ಅನ್‌ಲೋಡಿಂಗ್ ಮಾಡುವ ನಾಲ್ಕು ಜನ ಹಮಾಲರಿಗೆ ೧೫೦ ರೂ. ಕೂಲಿ ನಿಗಧಿಯಾಯಿತು. ಇದು ಇಡೀ ಬಳ್ಳಾರಿ ಜಿಲ್ಲೆಯಲ್ಲಿ ಅತ್ಯಂತ ಹೆಚ್ಚಿನ ಕೂಲಿಯೆಂದು ಈಗಲೂ ಹೆಸರಿದೆ. ಏಕೆಂದರೆ ಬಳ್ಳಾರಿ ಜಿಲ್ಲಾ ಕೇಂದ್ರದಲ್ಲಿ ಇವತ್ತಿಗೂ ಒಂದು ಟನ್ ಅನ್‌ಲೋಡಿಂಗಿಗೆ ಕೇವಲ ೧೦ ರೂಪಾಯಿ ಇದ್ದು, ಹೊಸಪೇಟೆ ಹಮಾಲರ ಕೂಲಿ ಮಾದರಿಯಾಗಿದೆ.

**೨. ಇನ್ನಿತರ ಹಮಾಲರ ಕೂಲಿಯಲ್ಲಿ ಹೆಚ್ಚಳ :** ಗೂಡ್‌ಶೆಡ್ ಹಮಾಲರ ಕೂಲಿ ಹೆಚ್ಚಳದ ಪ್ರಭಾವದಿಂದಾಗಿ ಎ.ಪಿ. ಎಂ.ಸಿ. ತರಕಾರಿ ಮಾರುಕಟ್ಟೆ ದಲಾಲಿ ಅಂಗಡಿಗಳ ಹಮಾಲರ ಕೂಲಿಯಲ್ಲಿಯೂ ಹೆಚ್ಚಳವಾಯಿತು. ೫೦ ಕೆ. ಜಿ. ಯ ಒಂದು ಚೀಲಕ್ಕೆ ೧ ರಿಂದ ೧-೫೦ ರೂಪಾಯಿ ಹೆಚ್ಚಳವಾಯಿತು. ಇದು ಈ ಮೊದಲು ಕೇವಲ ಎಪ್ಪತ್ತೈದು ಪೈಸೆ ಮಾತ್ರ ಇತ್ತು ಒಂದು ಚೀಲಕ್ಕೆ ಇಂತಿಷ್ಟೆಂದು ಹೆಚ್ಚು ಕಡಿಮೆ ಎರಡು ಪಟ್ಟು ಕೂಲಿಯಲ್ಲಿ ಹೆಚ್ಚಳವಾಯಿತು.

**೩. ಸಂಘಟನೆಯ ವ್ಯಾಪ್ತಿಯಲ್ಲಿ ಹೆಚ್ಚಳ :** ಗೂಡ್‌ಶೆಡ್ ಹಮಾಲರ ಯಶಸ್ವಿ ಹೋರಾಟದಿಂದಾಗಿ ಹಮಾಲರ ಸಂಘಟನೆಗೆ ಹೊಸ ಸ್ಫೂರ್ತಿ, ನವಚೈತನ್ಯ ಬಂತು. ಹಮಾಲರ ಸಂಘಟನೆಯ ವ್ಯಾಪ್ತಿಗೆ ಇತರೆ ಹಮಾಲಿಗಳು ಸೇರಿಕೊಂಡರು. ಯಾವುದೇ ವಲಯದ ಹಮಾಲರಾಗಿದ್ದರೂ ಅವರೆಲ್ಲಾ ಹಮಾಲರ ಸಂಘದ ನಿಗಧಿತ ಕೂಲಿಯನ್ನು ಪಡೆಯಲು ಒತ್ತಡಗಳನ್ನು ತಂದರು. ನಿಗದಿತ ಕೂಲಿ ಸಿಗದೇ ಇದ್ದಾಗ ಕೆಲಸವನ್ನು ಬಹಿಷ್ಕರಿಸುತ್ತಿದ್ದರೂ, ಈ ಕಾರಣದಿಂದ ನಿಗದಿತ ಕೂಲಿ ನೀಡುವುದು ಅನಿವಾರ್ಯವಾಯಿತು. ಹಮಾಲರ ಒಗ್ಗಟ್ಟು ಅತ್ಯಂತ ಪ್ರಬಲವಾಗಿರುವುದಕ್ಕೆ ಹಲವಾರು ಘಟನೆಗಳು ಇದನ್ನು ದೃಢಪಡಿಸಿವೆ. ನನಗೂ ಇದೇ ರೀತಿಯ ಒಂದು ಘಟನೆ ಆಗಿದೆ.

ಒಮ್ಮೆ ಹರಿಹರದ ಇಟ್ಟಿಗೆ ಭಟ್ಟಿಯಿಂದ ನಮ್ಮ ಮನೆಯ ನಿರ್ಮಾಣಕ್ಕೆ ಇಟ್ಟಿಗೆ ತರಲು ನಾನು ಹೋಗಿದ್ದೆ. ಅಲ್ಲಿ ಒಂದು ಲಾರಿ ಲೋಡಿಂಗ್ ಮಾಡಲು (ಒಂದು ಲಾರಿ ಅಂದರೆ ೨೦೦೦ ಇಟ್ಟಿಗೆ) ಹಮಾಲರು ಒಟ್ಟು ನಾಲ್ಕು ಜನರಿಗೆ ೧೫೦ ರೂಪಾಯಿ ಕೊಟ್ಟೆನು. ಅವರು ಕೇಳಿದ್ದು ಅಷ್ಟೆ, ಅದನ್ನು ಮರು

ಮಾತನಾಡದೆ ಕೊಟ್ಟೆನು. ಹೊಸಪೇಟೆಗೆ ಬಂದು ನಗರ ಪ್ರವೇಶದಲ್ಲಿರುವ ಅಕ್ಟ್ರಾಯಿಗೇಟಿನಲ್ಲಿ ಲಾರಿಗಳಿಗಾಗಿ ಕಾದುಕುಳಿತಿದ್ದ ಹಮಾಲರು ನಮ್ಮ ಲಾರಿಯನ್ನು ತಡೆದು ಹತ್ತಿಕೊಂಡರು. ಅಲ್ಲಿಂದ ನಮ್ಮ ಮನೆಯ ಮುಂದೆ ಇಟ್ಟಿಗೆ ಇಳಿಸುವ ಮುನ್ನ ಅವರ ಕೂಲಿಯ ಧರ ಕೇಳಿದೆ. ಅವರು ೪೫೦ ರೂ.ಗಳೆಂದು ಹೇಳಿದರು. ಆಗ ನಾನು ಹರಿಹರದಲ್ಲಿ ಲೋಡಿಂಗ್ ಮಾಡಲು ಕೇವಲ ೧೫೦ ರೂಪಾಯಿ ಕೊಟ್ಟಿರುವ ವಿಷಯ ತಿಳಿಸಿದೆ. ಆದರೆ ಅವರು ಹಮಾಲರು ಇಲ್ಲಿ ನಿಗಧಿ ಪಡಿಸಿರುವುದು ಇಷ್ಟೆ, ಕೊಡುವುದಾದರೆ ಇಳಿಸುತ್ತೇವೆಂದು ಹೇಳಿ ನನ್ನ ಸಮ್ಮತಿಗಾಗಿ ನೋಡಿದರು ನಾನು ಇಳಿಸಿರೆಂದು ಹೇಳಿದ ಮೇಲೆಯೇ ಅವರು ಇಟ್ಟಿಗೆಗಳನ್ನು ಇಳಿಸಿದರು ಇವರ ಈ ಒಗ್ಗಟ್ಟು ಕಂಡು ದಿಗ್ಭ್ರಾಂತನಾದೆ. ಈ ಘಟನೆ ಇವತ್ತೂ ನನ್ನ ಮರೆಯಲಾರದ ಘಟನೆಗಳಲ್ಲಿ ಒಂದು ಘಟನೆ.

**೪. ಬೇರೆ ಪ್ರದೇಶಗಳಲ್ಲಿ ಹಮಾಲರ ಸಂಘಟನೆಗಳ ಮೇಲೆ ಇದರ ಪ್ರಭಾವ :** ಹೊಸಪೇಟೆ ಹಮಾಲರ ಈ ಹೋರಾಟ ಅದರ ಪರಿಣಾಮವಾಗಿ ಬಳ್ಳಾರಿ ಜಿಲ್ಲಾ ಕೇಂದ್ರದಲ್ಲಿಯೂ ಕೂಲಿ ಹೆಚ್ಚಳದ ಮೇಲೆ ಪ್ರಭಾವ ಬೀರಿತು. ಇದರಿಂದ ಅವರು ಸಂಘಟಿತರಾಗಿ ಕೂಲಿ ಹೆಚ್ಚಳದ ಬೇಡಿಕೆಯ ಚಳುವಳಿಗೆ ಇಳಿದರು. ಇದೇ ರೀತಿ ಹಗರಿ ಬೊಮ್ಮನಹಳ್ಳಿ ಸಿರುಗುಪ್ಪ ತಾಲೂಕಿನ ಎ.ಪಿ. ಎಂ.ಸಿ. ದಲಾಲಿ ಅಂಗಡಿಗಳ ಹಮಾಲರು ತಮ್ಮ ಕೂಲಿಯ ಹೆಚ್ಚಳಕ್ಕಾಗಿ ಸಂಘಟಿತ ಸಾಂಘಿಕ ಪ್ರಯತ್ನಗಳನ್ನು ಪ್ರಾರಂಭಿಸಿದರು. ಹೊಸಪೇಟೆಯ ಹಮಾಲರ ಈ ಹೋರಾಟದ ಯಶಸ್ಸು ಜಿಲ್ಲೆಗೆ ಒಂದು ಮಾದರಿ ಎಂದು ಹೇಳಬಹುದು.

ಯಾವುದೇ ಧರಣಿ, ಸತ್ಯಾಗ್ರಹ, ಮೆರವಣಿಗೆ ಇಲ್ಲದೆ ಕೇವಲ ಕೆಲಸವನ್ನು ಮಾಡದೇ ಬಹಿಷ್ಕರಿಸಿ ಜಯ ಪಡೆದ ಈ ಚಳುವಳಿ ಅತ್ಯಂತ ಪ್ರಮುಖವಾದ ಚಳುವಳಿ.

## ಸರೋಜ್ ಅಲಾಯ್ಸ್ ಕಾರ್ಮಿಕರ ಸಾಂಘಿಕ ನೆಲೆಯ ಪರಿಣಾಮಗಳು

**೧. ಕಾರ್ಮಿಕರು ಬೀದಿ ಪಾಲು :** ಈ ಕಾರ್ಖಾನೆಯನ್ನು ಮುಚ್ಚಿದ್ದರಿಂದ ಈ ಕಾರ್ಖಾನೆಯನ್ನು ನಂಬಿ ಬದುಕಿದ್ದ ಸುಮಾರು ೧೦೦೦ ಕುಟುಂಬಗಳು ಬೀದಿ ಪಾಲಾದವು. ಇವರು ಜೀವನಕ್ಕೆ ಬೇರೆ ದಾರಿ ಹಿಡಿಯಬೇಕಾದದು ಅನಿವಾರ್ಯವಾಯಿತು. ಕಾರ್ಮಿಕರು, ಹೆಂಡತಿ ಮಕ್ಕಳು ಗಣಿಗಳಲ್ಲಿ ಗಣಿಕಾರ್ಮಿಕರಾಗಿ, ಬಾಲಕಾರ್ಮಿಕರಾಗಿ ದುಡಿಯಬೇಕಾಯಿತು. ಈ ಕಾರ್ಖಾನೆಯ ಕಾರ್ಮಿಕರು ಕಟ್ಟಡ ನಿರ್ಮಾಣದ ಕೂಲಿಗಳಾಗಿ ತರಕಾರಿ ವ್ಯಾಪಾರಗಳಾಗಿ ಆಟೋ ಚಾಲಕರಾಗಿ ಜೀವನ ನಡೆಸಬೇಕಾಯಿತು.

**೨. ತಿರುವಲಸೆ :** ಈ ಕಾರ್ಖಾನೆಗೆ ಕುಶಲ ಕಾರ್ಮಿಕರಾಗಿ ದುಡಿಯಲು ಬಂದಿದ್ದ ಬೇರೆ ರಾಜ್ಯಗಳಾದ ಉತ್ತರ ಪ್ರದೇಶ, ಮಧ್ಯಪ್ರದೇಶ, ಆಂದ್ರಪ್ರದೇಶ, ಒರಿಸ್ಸಾ, ಕೇರಳ ರಾಜ್ಯಗಳ ಕಾರ್ಮಿಕರು ತಮ್ಮ ತಮ್ಮ

ರಾಜ್ಯಗಳಿಗೆ ಮರಳಿ ಹೋದರು. ಕಾರ್ಖಾನೆ ಮುಚ್ಚಿದ ತಕ್ಷಣ ಬೇರೆ ರಾಜ್ಯಗಳ ಕಾರ್ಮಿಕರು ಬೇರೆ ಸ್ಥಳೀಯ ಉದ್ಯೋಗಗಳಿಗೆ ಸೇರಲು ಸಾಧ್ಯವಾಗಲಿಲ್ಲ. ಸಾಮಾನ್ಯವಾಗಿ ಕುಶಲ ಕಾರ್ಮಿಕರಾಗಿದ್ದ ಇವರು ಬೇರೆ ಕಾರ್ಖಾನೆಗಳಿಗೆ ಸೇರಬಹುದಾಗಿತ್ತಾದರೂ ಅಂದಿನ ಪರಿಸ್ಥಿತಿಯಲ್ಲಿ ಅವರಿಗೆ ಸೂಕ್ತವಾದ ಬೇರೆ ಕಾರ್ಖಾನೆಗಳು ಇಲ್ಲವೆಂದೇ ಹೇಳಬಹುದು. ಈ ಕಾರಣದಿಂದ ಸುಮಾರು ೨ ವರ್ಷಗಳವರೆಗೆ ಮುಷ್ಕರ ನಡೆಸಿದಾಗಲೂ ಕಾರ್ಖಾನೆ ತೆರೆಯುವ ಸೂಚನೆ  ಕಾಣದ್ದರಿಂದ ವಿಧಿಯಿಲ್ಲದೆ ಈ ಕಾರ್ಮಿಕರು ತಮ್ಮ ತಾಯ್ನಾಡುಗಳಿಗೆ ತಿರುಗಿ ವಲಸೆ  ಹೋಗುವುದು ಅನಿವಾರ್ಯವಾಯಿತು. ನ್ಯಾಯಾಲಯದ ತೀರ್ಪಿನಂತೆ ಬೇರೆ ರಾಜ್ಯಗಳ ಕಾರ್ಮಿಕರಿಗೆ ಪರಿಹಾರ ಮಂಜೂರಾಗಿದ್ದರೂ ಇನ್ನು ಕೆಲ ಕಾರ್ಮಿಕರು ಈ ಪರಿಹಾರ ಪಡೆಯಲು ಬಾರದೇ ಇರುವುದು ಕಂಡು ಬರುತ್ತದೆ.

**೩. ಸುತ್ತಲ ಜನಜೀವನದ ಮೇಲೆ ಪರಿಣಾಮ :** ಈ ಕಾರ್ಮಿಕರ ವಸತಿಯಿಂದಾಗಿ ಕಾರಿಗನೂರು, ವಡ್ಡರಹಳ್ಳಿ, ಪಾಪಿನಾಯಕನಹಳ್ಳಿ, ಹೊಸಪೇಟೆ ನಗರದ ಕೆಲವು ಪ್ರದೇಶದ ಜನರ ಮೇಲೆ ಈ ಕಾರ್ಖಾನೆಯ ಬೀಗಮುದ್ರೆಯಿಂದ ತೀವ್ರ ರೀತಿಯ ಪರಿಣಾಮವನ್ನು ಬೀರಿತು. ಕಾರ್ಮಿಕರಿಂದ ಈ ಗ್ರಾಮಗಳಲ್ಲಿ ಕಿರಾಣಿ, ಹೋಟೆಲ್, ಬಟ್ಟೆ ಅಂಗಡಿಗಳಲ್ಲಿ  ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಕಾರ್ಮಿಕರು ಕೆಲವು ಮನೆಗಳಲ್ಲಿ ಬಾಡಿಗೆ ಆಧಾರದಲ್ಲಿ ವಸತಿ ಮಾಡಿದ್ದರೆ, ಕಾರ್ಖಾನೆ ಬಂದಾದ್ದರಿಂದ ಕಾರ್ಮಿಕರಿಗೆ ಕೆಲಸವಿಲ್ಲದಾಯಿತು. ಈ ಅಂಗಡಿಗಳಲ್ಲಿ ವ್ಯಾಪಾರ ನಿಂತಿದ್ದರಿಂದ ವ್ಯಾಪಾರಿಗಳಿಗೆ ತಮ್ಮ ಅಂಗಡಿ ಮುಗ್ಗಟ್ಟುಗಳನ್ನು ಮುಚ್ಚುವುದು ಅನಿವಾರ್ಯವಾಯಿತು. ಅವರೂ ಸಹ ಕೆಲವರು ಬೇರೆ ಉದ್ಯೋಗ, ದಂದೆಗಾಗಿ ನಗರ ಪ್ರದೇಶಕ್ಕೆ ವಲಸೆ ಬಂದರು. ಈ ಪ್ರದೇಶದ  ಆರ್ಥಿಕ ಚಟುವಟಿಕೆಯ ಮೇಲೆ ಈ ಕಾರ್ಖಾನೆ ತುಂಬಾ ಕೆಟ್ಟ ಪರಿಣಾಮ ಬೀರಿತೆಂದು ಹೇಳಬಹುದು.

**೪. ಭೂಮಿಯ ಮೌಲ್ಯದಲ್ಲಿ ಕುಸಿತ :** ಈ ಕಾರ್ಖಾನೆ ಸುತ್ತಲೂ ಭೂಮಿಗಳಿಗೆ ಒಳ್ಳೆಯ ಬೆಲೆ ಇತ್ತು. ಕಾರ್ಖಾನೆಯ ಮುಚ್ಚವಿಕೆಯಿಂದಾಗಿ ಭೂಮಿಯ ಬೆಲೆ ಕುಸಿಯಿತು. ಅಲ್ಲಿಯ ಕೃಷಿ ಜಮೀನಿಗೂ ಒಳ್ಳೆಯ ಬೆಲೆ ಮೊದಲು ಇತ್ತು. ಕಾರ್ಖಾನೆ ಲಾಕೌಟ್ ಆದ ಮೇಲೆ ಭೂಮಿಯ ಧಾರಣೆಯಲ್ಲಿ ಗಣನೀಯ ಪ್ರಮಾಣದಲ್ಲಿ ಕುಸಿತ ಕಂಡು ಬಂದಿತು. ಈ ಭೂಮಿಯ ಬೆಲೆ ಏರಲು ಬಹಳ ದಿನಗಳವರೆಗೆ ಕಾಯಬೇಕಾಯಿತು.

**೫. ನ್ಯಾಯಾಲಯದಿಂದ ದೊರೆತ ಪರಿಹಾರ :** ಸುಮಾರು ವರ್ಷಗಳ ನಂತರ ನಾಗಪುರದ ಬಾಂಬೆ ಹೈಕೋರ್ಟಿನಲ್ಲಿ ನಷ್ಟ ಪರಿಹಾರ ಪಡೆದ ಬಗ್ಗೆ ಪತ್ರಿಕಾ ವರದಿಯನ್ನು ನೋಡಿ ಕಾರ್ಮಿಕರು ನಷ್ಟ ಪರಿಹಾರದಲ್ಲಿ ಕಾರ್ಮಿಕರ ಪಾವತಿ ಪಡೆಯಲು ನ್ಯಾಯಾಲಯಕ್ಕೆ ಕೇಸು ಹಾಕಿದರು. ಕಾರ್ಖಾನೆಯನ್ನು ಮುಚ್ಚಿದ ಮೇಲೆ ಸುಮಾರು ೧೨ ವರ್ಷಗಳ ನಂತರ ಕಾರ್ಖಾನೆಯಿಂದ ಪರಿಹಾರ ಪಡೆಯಲು ಕಾರ್ಮಿಕರ

ಹೆಸರಿನಲ್ಲಿ ವೈಯಕ್ತಿಕ ಕೇಸು ದಾಖಲೆ ಮಾಡಲಾಯಿತು. ಈ ಕಾರ್ಖಾನೆಯ ಪ್ರಕರಣ ನಾಗಪುರದ ಹೈಕೋರ್ಟಿನಲ್ಲಿತ್ತು. ಈ ಪ್ರಕರಣದ ಬಗ್ಗೆ ವಿಚಾರಣೆ ನಡೆಸಿದ ನ್ಯಾಯಾಲಯ ಪರಿಹಾರ ಕೋರಿ ಬಂದ ಅರ್ಜಿ ಸೂಕ್ತ ಸಮಯದಲ್ಲಿ ಬಂದಿಲ್ಲವೆಂದೂ, ತಡವಾಗಿ ಹಾಕಲಾಗಿದೆ ಎಂದೂ ವ್ಯಾಖ್ಯಾನಿಸುತ್ತಾ ಮಾನವೀಯ ಅನುಕಂಪದ ಆಧಾರದ ಮೇಲೆ ಆ ಕಾರ್ಖಾನೆಗೆ ಬಂದ ಒಟ್ಟು ನಷ್ಟ ಪರಿಹಾರದಲ್ಲಿ ಒಟ್ಟು ಶೇ. ೪ ರಷ್ಟನ್ನು ಕಾರ್ಮಿಕರ ಸೇವಾ ಅವಧಿಯನ್ನು ಪರಿಗಣಿಸಿ ಪರಿಹಾರ ನೀಡಿ ಆದೇಶ ನೀಡಿತು. ಸಿ.ಐ.ಟಿ.ಯು ಕಾರ್ಮಿಕರ ಸಂಘಟನೆಯ ಪ್ರಯತ್ನದಿಂದ ದೊರೆತ ಈ ಸಾಂಕೇತಿಕ ಪರಿಹಾರವನ್ನು ಕೆಲವು ಕಾರ್ಮಿಕರು ಪಡೆದಿದ್ದಾರೆ. ಇನ್ನೂ ಕೆಲವರು ಈಗಲೂ ಪಡೆಯುತ್ತಿದ್ದಾರೆ. ಬೇರೆ ರಾಜ್ಯಗಳ ಕುಶಲ ಕಾರ್ಮಿಕರು ಇನ್ನೂ ಈ ಪರಿಹಾರವನ್ನು ಪಡೆಯಲು ಬಂದಿಲ್ಲವೆಂದು ತಿಳಿದು ಬಂತು.

ಇಡೀ ಈ ಕಾರ್ಮಿಕರ ಹೋರಾಟ ಸಾಂಘಿಕವಾಗಿ ಒಂದು ಮಾದರಿಯುತ ಚಳುವಳಿಯಾಗಿದ್ದರೂ ಹೋರಾಟದ ಫಲಿತಾಂಶ ಮಾತ್ರ ಸಾಂಕೇತಿಕವಾಗಿ ಪಡೆಯಲು ಸಾಧ್ಯವಾಯಿತು. ಹೊಸಪೇಟೆ ತಾಲೂಕಿನ ಕೈಗಾರಿಕಾ ವಲಯದ ಸಾಂಘಿಕ ನೆಲೆಯಲ್ಲಿ ಸರೋಜ್ ಅಲಾಯ್ಸ್ ಎಂಪ್ಲಾಯಿಸ್ ಯೂನಿಯನ್ನಿನ ಈ ಎರಡು ವರ್ಷದ ನಿರಂತರ ಹೋರಾಟ ಅತ್ಯಂತ ಸ್ಮರಣೀಯ ಅನುಭವವೆಂದು ಹೇಳಬಹುದು.

## ದಾಲ್ಮಿಯಾ ಗಣಿ ಕಾರ್ಮಿಕರ ಸಾಂಘಿಕ ನೆಲೆಯ ಪರಿಣಾಮಗಳು

### ೧) ೩೦೦ ಜನ ಕಾರ್ಮಿಕರನ್ನು ತೆಗೆದು ಹಾಕಿದ್ದು :

ಈ ಹೋರಾಟದ ಪರಿಣಾಮವಾಗಿ ದಾಲ್ಮೀಯಾ ಕಂಪನಿಯವರು ಕಾರ್ಮಿಕರ ಬೇಡಿಕೆಗಳಿಗೆ ಸ್ಪಂದಿಸದೇ ಸಂಘಟನೆಯಲ್ಲಿ ತೊಡಗಿದ್ದ ಮುಖಂಡ, ಕಾರ್ಮಿಕರೂ ಸೇರಿದಂತೆ ಒಟ್ಟು ೩೦೦ ಜನ ಕಾರ್ಮಿಕರನ್ನು ಯಾವುದೇ ನೋಟೀಸು ನೀಡದೆ ತೆಗೆದು ಹಾಕಿದರು. ಇದರಿಂದ ಈ ಎಲ್ಲಾ ಕಾರ್ಮಿಕರು ಕೆಲಸವನ್ನು ಕಳೆದುಕೊಂಡು ಅನ್ಯ ಉದ್ಯೋಗಗಳಿಗಾಗಿ ಪರದಾಡಬೇಕಾಯಿತು. ಇದರಲ್ಲಿ ಎಷ್ಟೋ ಕಾರ್ಮಿಕರು ದಿನಗೂಲಿಗಳಾಗಿ ಸೇರಬೇಕಾಯಿತು. ಬಹಳಷ್ಟು ಕಾರ್ಮಿಕರು ಸೈಕಲ್ ರಿಕ್ಷಾ, ಆಟೋ ರಿಕ್ಷಾ ಓಡಿಸಬೇಕಾಯಿತು.

### ೨) ಕಾರ್ಮಿಕರ ನ್ಯಾಯಾಲಯಕ್ಕೆ :

ಕಾರ್ಮಿಕ ಸಂಘಟನೆ ಅನ್ಯಾಯವಾಗಿ ಯಾವ ಮುನ್ಸೂಚನೆಯಿಲ್ಲದೆ ಗಣಿಕಂಪನಿ ಬಂದ್ ಮಾಡಿ ಸುಮಾರು ೩೦೦ ಜನರನ್ನು ಕೆಲಸದಿಂದ ತೆಗೆದುಹಾಕಿದ್ದನ್ನು ಬೆಂಗಳೂರಿನ ಕಾರ್ಮಿಕ ನ್ಯಾಯಾಲಯದಲ್ಲಿ ಕೇಸು ದಾಖಲಿಸುವುದು ಅನಿವಾರ್ಯವಾಯಿತು. ಕಾರ್ಮಿಕ ನ್ಯಾಯಾಲಯದಲ್ಲಿ ಕೇಸು ಈಗಲೂ ನಡೆಯುತ್ತಿದೆ.

## ೩) ಆರ್ಥಿಕ ಪರಿಸ್ಥಿತಿಯ ಮೇಲೆ ಕೆಟ್ಟ ಪರಿಣಾಮ :

ಕೆಲಸದಿಂದ ತೆಗೆದ ಕಾರ್ಮಿಕರ ಕುಟುಂಬದ ಸದಸ್ಯರು ಅತ್ಯಂತ ಕೆಟ್ಟ ಪರಿಸ್ಥಿತಿಯನ್ನು ಅನುಭವಿಸಬೇಕಾಯಿತು. ಮಕ್ಕಳ ವಿದ್ಯಾಭ್ಯಾಸದ ಮೇಲೂ ಇದು ವ್ಯತಿರಿಕ್ತ ಪರಿಣಾಮ ಬೀರಿತು. ಶಾಲಾ ಫೀಜು ಕಟ್ಟಲಾರದೆ ಕಾರ್ಮಿಕರ ಮಕ್ಕಳು ಅರ್ಧದಲ್ಲಿಯೇ ಶಾಲೆ ಬಿಟ್ಟು ಕೂಲಿ ಕೆಲಸವನ್ನು ಹುಡುಕಬೇಕಾಯಿತು. ಕೆಲವರು ಕೃಷಿ ಕೂಲಿಕಾರರಾಗಿ ಜೀವನ ನಡೆಸಬೇಕಾಯಿತು. ಉಪಜೀವನಕ್ಕಾಗಿ ಮನೆಮಂದಿಯಲ್ಲಾ ಇತರೆ ಸಣ್ಣಪುಟ್ಟ ಉದ್ಯೋಗಗಳನ್ನು ಅರಸಿನಗರಕ್ಕೆ ಬರುವುದು ಅನಿವಾರ್ಯವಾಯಿತು.

ವ್ಯವಸ್ಥಿತವಾಗಿ ನಡೆದ ಚಳುವಳಿಯೊಂದು ಯಾವುದೇ ಪ್ರತಿಫಲ ಪಡೆಯಲು ಸಾಧ್ಯವಾಗದೇ ಹೋದದ್ದು ವಿಪರ್ಯಾಸವಾಗಿದೆ. ಆದರೆ ಸದ್ರಿ ಕಾರ್ಮಿಕರು ನ್ಯಾಯಾಲಯದಿಂದ ತಮಗೆ ಸೂಕ್ತ ನ್ಯಾಯ ಸಿಗಬಹುದೆಂಬ ನಿರೀಕ್ಷೆಯಲ್ಲಿ ಮಾತ್ರ ಇದ್ದಾರೆ. ಸಾಂಘಿಕ ಚಟುವಟಿಕೆಗಾಗಿ ಮಾಡಿದ ಪ್ರಯತ್ನದಿಂದ ಕಾರ್ಖಾನೆಯೊಂದು ಬಂದ್ ಆಗಿ ಕಾರ್ಮಿಕರನ್ನೇ ಕೆಲಸದಿಂದ ತೆಗೆದು ಹಾಕಿರುವ ಈ ಘಟನೆ ವಿಚಿತ್ರವಾದರೂ ಸತ್ಯವಾಗಿದೆ.

# ಸಾಂಸ್ಕೃತಿಕ ಸಾಂಘಿಕ ನೆಲೆ ಪರಿಣಾಮಗಳು

## ೧. ನಾಯಕತ್ವ ರೂಪಗೊಂಡಿದ್ದು

ಪ್ರಾರಂಭದಲ್ಲಿ ವೇದಿಕೆಯ ಕಾರ್ಯಕರ್ತರು ತುಂಬಾ ಭಾವುಕರಾಗಿದ್ದರು. ಬಾವುಕರಾದ್ದರಿಂದ ಪ್ರಾರಂಭಿಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆಗತಾನೆ ಹೊಸದಾಗಿ ಈ ಚಳುವಳಿಗೆ ಬಂದಂತಹ ಕೆಲವು ಮುಖಂಡರು ಭಯದಿಂದಲೋ, ಒತ್ತಡದಿಂದಲೋ ಚಟುವಟಿಕೆಗಳಿಂದ ದೂರಸರಿದರು. ಜನರ ಸಮಸ್ಯೆಗಳನ್ನು ಗುರುತಿಸಿ, ಅದಕ್ಕೆ ಸಂಬಂಧಪಟ್ಟವರಿಂದ ನ್ಯಾಯ ಪಡೆಯಲು ಈ ಎಲ್ಲಾ ವೈಯಕ್ತಿಕವಾಗಿ ಕೆಲವು ಸಮಸ್ಯೆಗಳನ್ನು ದಿಟ್ಟತನದಿಂದ ಎದುರಿಸುವುದು ಅನಿವಾರ್ಯವಾಗಿತ್ತು. ಭಾವೈಕ್ಯತಾ ವೇದಿಕೆಯು ಹಲವು ಅನುಭವಗಳಿಂದಾಗಿ ಕಲಿತ ಪಾಠದಿಂದ ಉತ್ತಮ ನಾಯಕತ್ವವನ್ನು ರೂಪಿಸಲು ನೆರವಾಯಿತು. ಯಾವುದೇ ಕಷ್ಟ, ಒತ್ತಡಗಳು ಬಂದರೂ ಎದೆಗುಂದದ ಸಾಮೂಹಿಕ ನಾಯಕತ್ವವನ್ನು ರೂಪಿಸಿಕೊಳ್ಳಲು ಇದರಿಂದ ಸಾಧ್ಯವಾಯಿತೆಂದರೆ ತಪ್ಪಾಗಲಾರದು.

## ೨. ಮೂಲಭೂತ ಸೌಕರ್ಯಗಳನ್ನು ಪಡೆಯಲು ಸಾಧ್ಯವಾದದ್ದು

ಭಾವೈಕ್ಯತಾವೇದಿಕೆ ಪ್ರಾರಂಭಿಸಿದ ಚಳುವಳಿಗಳ ಪ್ರಭಾವದಿಂದಾಗಿ ಸಿದ್ಧಲಿಂಗಪ್ಪ ಚೌಕಿ ಬಡಾವಣೆಯಲ್ಲಿ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು ಪೂರೈಕೆ, ಹೊಸ ರಸ್ತೆಗಳ ನಿರ್ಮಾಣ, ಹಳೆ ರಸ್ತೆಗಳ ದುರಸ್ಥಿ, ಶಾಲಾ ಕೊಠಡಿಗಳ ನಿರ್ಮಾಣದ ಹಲವು ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಾಯಿತು. ಭಾವೈಕ್ಯತಾ ವೇದಿಕೆಯು ಹಮ್ಮಿಕೊಂಡ ಜನಜಾಗೃತಿ ಪ್ರಭಾವದಿಂದ ಸ್ಥಳೀಯ ಜನರು ಲೋಕಸಭೆಯಂತಹ ಪ್ರಮುಖ ಚುನಾವಣೆಯನ್ನು ಬಹಿಷ್ಕರಿಸಿದರು. ಇದರಿಂದ ಚುನಾವಣೆ ನಂತರ ಈ ಮೂಲಭೂತ ಸೌಕರ್ಯಗಳನ್ನು ಪಡೆಯಲು ಸಾಧ್ಯವಾಯಿತೆಂಬುದನ್ನು ಹೆಮ್ಮೆಯಿಂದ ಹೇಳಬಹುದು.

## ೩. ಶಾಲೆಯ ಭೂಮಿಯನ್ನು ಆಕ್ರಮಿಸಿಕೊಂಡವರನ್ನು ತೆರವುಗೊಳಿಸಿದ್ದು

ಸ್ಥಳೀಯ ಪ್ರದೇಶದ ಗೀತಾಶ್ರಮ ಶಾಲೆಯ ಜಾಗವನ್ನು ಕೆಲವು ಪಟ್ಟಭದ್ರರು ಆಕ್ರಮಿಸಿಕೊಂಡಿದ್ದರು. ಲೋಕ ನಾಯಕ ಜಯ ಪ್ರಕಾಶ್ ನಾಯಕ್‌ರವರು ಈ ನಗರದ ಜೆ.ಪಿ. ನಗರಕ್ಕೆ ತಮ್ಮ ಹೆಸರನ್ನಿಡಲು ಹೊಸಪೇಟೆಯ ನಗರ ಸಭೆಗೆ ಅನುಮತಿ ನೀಡುವಾಗ ಈ ಪ್ರದೇಶದಲ್ಲಿ ಸರಾಯಿ ಅಂಗಡಿ ಇಡಬಾರದು. ಅಂಚೆಕಛೇರಿ ಇರಬೇಕು. ಮಕ್ಕಳ ಉದ್ಯಾನವನವಿರಬೇಕು. ಮತ್ತು ಗೀತಾಶ್ರಮಶಾಲೆ ತೆರೆಯಬೇಕೆಂದು ಷರತ್ತು ವಿಧಿಸಿದ್ದ ಮೇರೆಗೆ ಅಸ್ಥಿತ್ವಕ್ಕೆ ಬಂದ ಈ ಶಾಲೆಯ ಜಾಗವನ್ನು ಪ್ರಭಾವಿ ರಾಜಕಾರಣಿಯೊಬ್ಬರು ಆಕ್ರಮಿಸಿಕೊಂಡಿದ್ದನ್ನು ಗುರುತಿಸಿದ ವೇದಿಕೆ ಮಧ್ಯ ಪ್ರವೇಶಿಸಿ ಚಳುವಳಿ ಮಾಡಿದ್ದರಿಂದ ಆಕ್ರಮಣವನ್ನು ತೆರವು ಗೊಳಿಸಲಾಯಿತು. ಇದೂ ಕೂಡ ಪ್ರಮುಖವಾದ ಫಲಕಗಳಲ್ಲಿ ಒಂದೆಂದು ಹೇಳಬಹುದು.

## ೪. ಕೊಳಚೆ ಪ್ರದೇಶದ ಮಕ್ಕಳ ಪ್ರತಿಭೆಗೆ ಪುರಸ್ಕರಿಸಿದ್ದು

ಕೊಳಚೆ ಪ್ರದೇಶದ ಮಕ್ಕಳನ್ನು ಗುರುತಿಸಿ ಅವರಲ್ಲಡಗಿರುವ ಸುಪ್ತ ಪ್ರತಿಭೆಗೆ ಪ್ರೋತ್ಸಾಹ ನೀಡಿದ್ದು, ವೇದಿಕೆಯ ಹೆಗ್ಗಳಿಕೆ, ಬೇಸಿಗೆ, ಚಳಿಗಾಲದ ಶಿಬಿರಗಳನ್ನೇರ್ಪಡಿಸಿ ಅವರ ಆಸಕ್ತಿಗನುಗುಣವಾದ ವಿವಿಧ ಕಲೆ, ಚಿತ್ರಕಲೆ, ನಟನೆ, ಸಂಗೀತ, ಹಾಡು ವಿವಿಧ ಅಭಿರುಚಿಗಳಿಗೆ ಬೆನ್ನುತಟ್ಟಿ ಅವರಿಗೆ ಪ್ರೋತ್ಸಾಹ ನೀಡಿ ಬೆಂಬಲಿಸಿದ್ದು ಪ್ರಮುಖ ಸಾಧನೆ.

## ೫. ಜನಜಾಗೃತಿ ಮೂಡಿಸಿದ್ದು

ಅನಕ್ಷರತೆ, ಅಸ್ಪೃಶ್ಯತೆ, ದೇವದಾಸಿ ಪದ್ಧತಿ, ವರದಕ್ಷಿಣೆ ಪಿಡುಗು ಮೊದಲಾದ ಸಾಮಾಜಿಕ ಅನಿಷ್ಠಪದ್ದತಿಗಳ ವಿರುದ್ಧ ಜನಜಾಗೃತಿ ಮೂಡಿಸುವ ಮಹತ್ವವಾದ ಕೆಲಸವನ್ನು ಭಾವೈಕ್ಯತಾ ವೇದಕೆ ಮಾಡಿದೆ. ಅನಕ್ಷರತೆಯ ವಿರುದ್ಧ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಸರ್ವ ಶಿಕ್ಷ ಅಭಿಯಾನದ ಸಾಕ್ಷರತಾ ಜಾಥಾಗಳಲ್ಲಿಯೂ ಭಾಗವಹಿಸಿ ಅಕ್ಷರ ಕ್ರಾಂತಿಗೆ ಅಳಿಲು ಸೇವೆ ಸಲ್ಲಿಸಿದೆ. ಅಕ್ಷರ ಕಲಿಯದಿದ್ದರೆ ಆಗುವ ಅನ್ಯಾಯಗಳ ಕುರಿತು ಹಲವು ಚಿಕ್ಕ ಚಿಕ್ಕ ಬೀದಿ ನಾಟಕಗಳನ್ನು ರಚಿಸಿ ಜಾಥಾಗಳಲ್ಲಿ ಪ್ರಯೋಗಿಸಲಾಗಿದೆ. ಕೋಮು ಸೌಹಾರ್ದತೆಗೆ ಸಂಬಂಧ ಪಟ್ಟಂತೆ ''ನಾವು ಮನಜರು'' ನಾಟಕವನ್ನು ಹೊಸಪೇಟೆ ತಾಲೂಕಿನ ಜಿ. ನಾಗೇನಹಳ್ಳಿ, ಬಸವನದುರ್ಗ, ಅನಂತಶಯನಗುಡಿ, ಕಡ್ಡಿರಾಂಪುರ, ಕಮಲಾಪುರ, ಗಾಳೆಮ್ಮನಗುಡಿ ಮೊದಲಾದ ಹಳ್ಳಿಗಳಲ್ಲದೆ ಹೊಸಪೇಟೆ ನಗರದ ಹಲವು ಪ್ರದೇಶದಲ್ಲಿ ಹಲವಾರು ಪ್ರಯೋಗಗಳನ್ನು ಕೊಟ್ಟಿದೆ. ೧೯೯೨ ರ ಡಿಸೆಂಬರ್ ೬ರ ಅಯೋಧ್ಯ ಘಟನೆಯ ಹಿನ್ನೆಲೆಯಲ್ಲಿ ಈ ನಾಟಕ ಹೊಸಪೇಟೆ ತಾಲೂಕಿನಲ್ಲಿ ತುಂಬಾ ಜನಪ್ರಿಯವಾಗಿತ್ತು. ರೈತರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಡಾ|| ಕುವೆಂಪುರವರ ''ಧನ್ವಂತರ ಚಿಕಿತ್ಸೆ'' ನಾಟಕವನ್ನು ಪ್ರಯೋಗಿಸಲಾಯಿತು. ''ಅಕ್ಕ'' ನಾಟಕ ವರದಕ್ಷಿಣೆ, ಅತ್ಯಾಚಾರ, ದೇವದಾಸಿ ಪದ್ಧತಿ ಮೊದಲಾದ ಮಹಿಳಾ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ನಾಟಕ ಇದನ್ನು ಕೂಡ ಹೊಸಪೇಟೆ ನಗರ ಮತ್ತು ಚಿನ್ನಾಪುರ ಗ್ರಾಮದಲ್ಲಿ ನಡೆದ ಮುಸ್ಲಿಂ ಸಮುದಾಯದ ಮಹಿಳೆಯ ಕಗ್ಗೊಲೆಯ ಹಿನ್ನೆಲೆಯಲ್ಲಿ ರಚಿಸಲಾದ ಈ ನಾಟಕವೂ ಹಲವು ಕಡೆಗಳಲ್ಲಿ ಮಹಿಳಾ ಜಾಗೃತಿ ಮೂಡಿಸುವಲ್ಲಿ ತುಂಬಾ ಪ್ರಭಾವ ಬೀರಿತು. ದಲಿತರ ಮೇಲಿನ ದೌರ್ಜನ್ಯ, ಅಸ್ಪೃಶ್ಯತಾಚರಣೆಯ ಮೇಲೆ ಬೆಳಕು ಚೆಲ್ಲುವ ಶೂದ್ರ ಶಕ್ತಿ ನಾಟಕ, ಡಾ|| ಅಂಬೇಡ್ಕರ್ ಮತ್ತು ಮಹಾತ್ಮ ಗಾಂಧೀಜಿಯವರ ದಲಿತ ಚಿಂತನೆಯ ಮೇಲೆ ಬೆಳಕು ಚೆಲ್ಲುವ ಅಲ್ಲೇ ಇದ್ದವರು ನಾಟಕವನ್ನು ಭಾವೈಕ್ಯತಾ ವೇದಿಕೆಯ ತಂಡಕ್ಕೆ ಕನ್ನಡದ ಹೆಸರಾಂತ ರಂಗತಜ್ಞರಾದ ಪ್ರೊ. ಸಿ.ಜಿ. ಕೆ. ಯವರು ನಿರ್ದೇಶಿಸಿದ್ದರು. ಈ ನಾಟಕವೂ ಹೊಸಪೇಟೆಯ ತಾಲೂಕಿನಲ್ಲಿ ತುಂಬಾ ಮಹತ್ವವಾದ ಪ್ರಭಾವವನ್ನು ಬೀರಿದ ನಾಟಕವೆಂದು ಹೇಳಬಹುದು.

## ೬. ಚಳುವಳಿಗೆ ಹೊಸ ನಾಯಕತ್ವ

ಭಾವೈಕ್ಯತಾ ವೇದಕೆಯಿಂದ ಕೇವಲ ನಾಟಕ ತಂಡ ರಚಿಸುವುದಷ್ಟೆ ಅಲ್ಲ, ನಾಟಕ ಆಡಿವುದಷ್ಟೇ ಅಲ್ಲ, ಬದಲಿಗೆ ಚಳುವಳಿಗೆ ಹೊಸ ಹೊಸ ನಾಯಕರನ್ನು ತರುವುದೂ ವೇದಿಕೆಯ ಉದ್ದೇಶವಾಗಿದ್ದು, ಇದರಲ್ಲಿ ಯಶಸ್ವಿಯಾಗಿದೆ. ಅಂದರೆ ಉತ್ಪ್ರೇಕ್ಷೆಯಲ್ಲ. ಹಲವಾರು ಬಾಲಕರು ನಾಟಕದ ಜೊತೆಗೆ ವಿದ್ಯಾರ್ಥಿ ಚಳುವಳಿಯಲ್ಲಿ ವಿಶೇಷವಾಗಿ ಎಡ ಪಂಥೀಯ ವಿದ್ಯಾರ್ಥಿ ಚಳುವಳಿಯಲ್ಲಿ, ಯುವಜನ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ತಮ್ಮ ಬಿಡುವಿನ ವೇಳೆಯಲ್ಲಿ ನಮ್ಮ

ಚಟುವಟಿಕೆಗಳಲ್ಲಿ ಭಾಗವಹಿಸುವ ಮೂಲಕ ವೇದಿಕೆಯ ನಾಟಕ, ಹಾಡು ಮೂಲಕ ಜನಜಾಗೃತಿಯಲ್ಲಿ ನೆರವು ನೀಡುತ್ತಿದ್ದರು. ಹಲವು ರಂಗ ತರಬೇತಿ ಶಿಬಿರಗಳಲ್ಲಿ ಸಾಮಾಜಿಕ ಸಮಸ್ಯೆಗಳ ಕುರಿತು ತಿಳುವಳಿಕೆ ನೀಡುತ್ತಿದ್ದರಿಂದ ಸಮಸ್ಯೆಗಳನ್ನು ಗುರುತಿಸುವ ಮತ್ತು ಅದಕ್ಕೆ ಸೂಕ್ತ ಪರಿಹಾರ ಕಂಡು ಕೊಳ್ಳುವಲ್ಲಿ ಇದು ನೆರವಾಗುತ್ತಿತ್ತು.

## ೭. ಪ್ರದೇಶದ ಜನರನ್ನು ಹೋರಾಟಕ್ಕೆ ಅಣಿಗೊಳಿಸಿದ್ದು

ನಾಟಕ ಮಾಡುವ ಪ್ರದೇಶದ ಅನ್ಯಾಯ, ದೌರ್ಜನ್ಯಗಳ ಘಟನೆಗಳನ್ನು ಆಧರಿಸಿ ನಾಟಕ, ಹಾಡು ರಚಿಸಿ ಅವುಗಳನ್ನು ಬೀದಿ ಬೀದಿಗಳಲ್ಲಿ, ರಸ್ತೆ ಬದಿಗಳಲ್ಲಿ ನೀಡುತ್ತಿದ್ದುದ್ದರಿಂದ ಜನರು ಆ ಘಟನೆಯ ಅರಿವಿನಿಂದಾಗಿ ಸಹಜವಾಗಿ ತಾವೇ ಹೋರಾಟಕ್ಕೆ ಸಜ್ಜಾಗುತ್ತಿದ್ದರು. ಮುಸ್ಲಿಂ ಮಹಿಳೆಯ ವರದಕ್ಷಿಣೆ ಸಾವಿನ ಘಟನೆಯ ಕುರಿತಾದ ಹಾಡನ್ನು ವೇದಕೆಯ ಸದಸ್ಯರು ಹೋದಕಡೆಗೆಲ್ಲಾ ಹಾಡಿ ಜನರನ್ನು ಹೋರಾಟಕ್ಕೆ ಸಜ್ಜು ಗೊಳಿಸಿದ್ದರಿಂದ ಅದು ಜನತಾ ಆಂದೋಲನವಾಗಿ ರೂಪುಗೊಳ್ಳಲು ಸಾಧ್ಯವಾಯಿತು. ಇದೂ ಕೂಡ ಭಾವೈಕ್ಯತಾ ವೇದಕೆಯ ಪರಿಣಾಮಗಳಲ್ಲೊಂದಾಗಿದೆ.

## ೮. ಹಿಂದೂ-ಮುಸ್ಲಿಂ ಜನರಲ್ಲಿ ಸೌಹಾರ್ದತೆ ಮೂಡಿಸಿದ್ದು

ಭಾವೈಕ್ಯತಾ ವೇದಿಕೆ ಅಸ್ಥಿತ್ವಕ್ಕೆ ಬಂದಿದ್ದೇ ಮೊದಲೇ ತಿಳಿಸಿರುವಂತೆ ಡಿಸೆಂಬರ್ ೬, ೧೯೯೨ ರ ಅಯೋಧ್ಯೆಯಲ್ಲಿ ನಡೆದ ಬಾಬರಿ ಧ್ವಂಸ ಪ್ರಕರಣದ ಹಿನ್ನೆಲೆಯಲ್ಲಿ ಹಿಂದೂ ಮುಸ್ಲಿಂ ಕೋಮು ಸೌಹಾರ್ದತೆಯನ್ನು ಸಾಧಿಸುವ ಉದ್ದೇಶದಿಂದ, ಹೊಸಪೇಟೆಯ ಯಾವುದೇ ಪ್ರದೇಶದಲ್ಲಿ ಈ ಎರಡೂ ಕೋಮುಗಳ ನಡುವೆ ಘರ್ಷಣೆ ನಡೆದಾಗಲೆಲ್ಲಾ ಭಾವೈಕ್ಯತಾ ವೇದಿಕೆ ನಾಟಕ, ಹಾಡು ಕಾರ್ಯಕ್ರಮಗಳನ್ನು ನೀಡುವುದರ ಮೂಲಕ ಕೋಮು ಸೌಹಾರ್ದತೆಗೆ ಶ್ರಮಿಸಿದೆ. ಬಾಬಾ ಬುಡನ್‌ಗಿರಿಯ ದರ್ಗಾಕ್ಕೆ ಸಂಬಂಧ ಪಟ್ಟಂತೆಯೂ ಹಲವು ಬಾರಿ ಇಲ್ಲಿಂದ ಹೋಗಿರುವ ಜಾಥಾಗಳ ಜೊತೆ ಭಾಗವಹಿಸಿ, ತನ್ನ ಧ್ಯೇಯಕ್ಕನುಗುಣವಾಗಿ ನಡೆದುಕೊಂಡು ಬಂದಿದ್ದು, ಇದೂ ಕೂಡ ಒಂದು ಸಾಧನೆ.

# ಯುವಜನ ಸಾಂಘಿಕ ನೆಲೆಯ ಪರಿಣಾಮಗಳು

**೧. ಸರಕಾರಿ ಪ್ರಾಥಮಿಕ ಶಾಲೆ:-** ಈ ನಗರದಲ್ಲಿ ಸರಕಾರದಿಂದ ಸರಕಾರಿ ಪ್ರಾಥಮಿಕ ಶಾಲೆ ಮಂಜೂರಾಗಿದ್ದು, ಇದಕ್ಕೆಂದೇ ಮೀಸಲಿರಿಸಿದ್ದ ಜಾಗದಲ್ಲಿ ಪ್ರಾಥಮಿಕ ಶಾಲೆಯ ಕಟ್ಟಡ ನಿರ್ಮಿಸಿ ಸಾಕಷ್ಟು ಶಿಕ್ಷಕರು, ಪೀಠೋಪಕರಣಗಳಿಂದ ಶಾಲೆ ಸುವ್ಯವಸ್ಥಿತವಾಗಿ ನಡೆಯುತ್ತಿದ್ದು ಈ ಪ್ರದೇಶದ ಕಾರ್ಮಿಕರ ಮಕ್ಕಳು ಈ ಶಾಲೆಯ ಪ್ರಯೋಜನ ಪಡೆದುಕೊಂಡಿದ್ದಾರೆ.

**೨. ಅಂಗನವಾಡಿ ಕೇಂದ್ರ:-** ಈ ಪ್ರದೇಶದಲ್ಲಿ ಮನೆಗಳಲ್ಲಿ ಜನರು ವಾಸಿಸಲು ಪ್ರಾರಂಭಿಸಿದ ತಕ್ಷಣವೇ ಅಂಗನವಾಡಿ ಕೇಂದ್ರ ಆರಂಭವಾಯಿತು. ಈ ಪ್ರದೇಶದ ಬಡಮಕ್ಕಳಿಗೆ ಸರಕಾರದ ಪೌಷ್ಠಿಕ ಆಹಾರದ ಸೌಲಭ್ಯ ದೊರೆಯಲು ಆರಂಭವಾಯಿತು.

**೩. ಆಶ್ರಯ ಮನೆಗಳ ನಿರ್ಮಾಣ :-** ಆಯ್ದ ಕಾರ್ಮಿಕರಿಗೆ ಒಟ್ಟು ೨೦ ಆಶ್ರಯ ಮನೆಗಳನ್ನು ಈವರೆಗೂ ಕಟ್ಟಿಸಿಕೊಡಲಾಗಿದೆ. ಪ್ರತಿ ವರ್ಷವೂ ಕೆಲವರಿಗೆ ಆಶ್ರಯ ಮನೆಗಳನ್ನು ಮಂಜೂರು ಮಾಡಿಸಲು ಪ್ರಯತ್ನ ನಡೆಯಿತ್ತಿದ್ದು ಮುಂದಿನ ದಿನಗಳಲ್ಲಿ ಇಲ್ಲಿರುವ ಎಲ್ಲಾ ಅರ್ಹ ಕಾರ್ಮಿಕರಿಗೆ ಆಶ್ರಯ ಮನೆಗಳನ್ನು ಮಂಜೂರು ಮಾಡಿಸುವ ಭರವಸೆ ಹೊಂದಲಾಗಿದೆ.

**೪. ಕುಡಿಯುವ ನೀರಿನ ವ್ಯವಸ್ಥೆ :-** ಬಿ.ಟಿ. ಆರ್. ನಗರದಲ್ಲಿ ಪ್ರಾರಂಭದಲ್ಲಿ ಕುಡಿಯುವ ನೀರಿಗಾಗಿ ಪರದಾಡಬೇಕಾಗಿತ್ತು. ಸಂಘಟನೆಯ ನೇತೃತ್ವದಲ್ಲಿ ಹಲವು ಬಾರಿ ನಗರಸಭೆಯ ಮುಂದೆ ಖಾಲಿ ಕೊಡಗಳ ಪ್ರದರ್ಶನವೂ ಸೇರಿದಂತೆ ಹಲವಾರುಬಾರಿ ಪ್ರತಿಭಟನೆ ನಡೆಸಲಾಯಿತು. ನಗರಸಭೆ ಪ್ರಾರಂಭದಲ್ಲಿ ಟ್ಯಾಂಕರ್‌ಗಳನ್ನು ಕಳಿಸುವ ಮೂಲಕ ಕುಡಿಯುವ ನೀರಿನ ಸ್ವಲ್ಪಮಟ್ಟಿನ ಅನುಕೂಲ ಪ್ರಾರಂಭಿಸಿತು. ಆಮೇಲೆ ಕೊಳವೆ ಬಾವಿಯನ್ನು ಕೊರೆಸುವುದರ ಮೂಲಕ ಇನ್ನೂ ಹೆಚ್ಚಿನ ಅನುಕೂಲ ಕಲ್ಪಿಸಲು ಇದೂ ಸಹಾ ಇಲ್ಲಿಯ ಜನರ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸದೇ ಇದ್ದುದರಿಂದ ಮತ್ತು ಈ ನಗರವು ಹೋರಾಟಗಾರರ ತಾಣವೇ ಆಗಿದ್ದುದರಿಂದ ಇವರ ಸಾಂಘಿಕ ಪ್ರತಿಭಟನೆಯ ಫಲವಾಗಿ ಕಿರು ನೀರು ಸರಬರಾಜು ಟ್ಯಾಂಕನ್ನು ನಿರ್ಮಿಸಿದ್ದು ಈಗ ಕೊಳಾಯಿಗಳ ಮೂಲಕ ನೀರು ಪೂರೈಕೆಯಾಗುತ್ತಿದೆ.

**೫) ವಿದ್ಯುತ್ ದೀಪದ ವ್ಯವಸ್ಥೆ :-** ಇಲ್ಲಿಯ ನಿವಾಸಿಗಳಲ್ಲಿ ಹೆಚ್ಚಿನವರು ದಲಿತರು. ಅದರಲ್ಲಿ ಬೋವಿ ಜನಾಂಗವೇ ಹೆಚ್ಚಿನ ಸಂಖ್ಯೆಯಲ್ಲಿದ್ದು ಇವರೆಲ್ಲಾ ಕಲ್ಲು ಒಡೆಯುವ ಕಾಯಕದಿಂದ ಜೀವನ ಸಾಗಿಸುತ್ತಿದ್ದು ದಲಿತರಿಗಾಗಿ ಹಲವು ಯೋಜನೆಗಳಲ್ಲಿ ವಿದ್ಯುತ್ ಸಂಪರ್ಕವನ್ನು ಮನೆಗಳಿಗೆ ಕಲ್ಪಿಸಲಾಗಿದೆ. ಇದಲ್ಲದೆ ನಗರದಲ್ಲಿ ಬೀದಿದೀಪಗಳ ವ್ಯವಸ್ಥೆ ಕಲ್ಪಿಸಲಾಗಿದೆ.

**೬) ಕೊಳಚೆ ಪ್ರದೇಶಾಭಿವೃದ್ಧಿ ಯೋಜನೆ :-** ಬಿ.ಟಿ. ಆರ್. ನಗರದ ಕಾರ್ಮಿಕರ ಸಂಘಟಿತ ಹೋರಾಟದ ಪರಿಣಾಮವಾಗಿ ಈ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಲಾಗಿದೆ. ಸರಕಾರ ಈ ಪ್ರದೇಶವನ್ನು ಈ ರೀತಿ ಘೋಷಿಸಲು ಕಾರ್ಮಿಕರು ತಮ್ಮ ಕುಟುಂಬದ ಸದಸ್ಯರೆಲ್ಲರೊಂದಿಗೆ ನಡೆಸಿದ ದೀರ್ಘಾವಧಿ ಹೋರಾಟದ ಪ್ರತಿಫಲವೆಂದು ಹೇಳಬಹುದು. ಅನೇಕ ಸಲ ತಾಲೂಕು ಕಛೇರಿ

ಎದುರಿನಲ್ಲಿ ಪ್ರತಿಭಟನೆ ಮಾಡಿ ಇದಕ್ಕಾಗಿ ಒತ್ತಾಯಿಸಲಾಗಿದೆ. ರಸ್ತೆ ತಡೆ ಚಳುವಳಿ ಮಾಡಲಾಗಿದೆ. ೧೯೯೯ರ ಫೆಬ್ರವರಿ ೧೪ ರಂದು ಈ ಪ್ರದೇಶದ ಎಲ್ಲರೂ ತಮ್ಮ ಮನೆ, ಗುಡಿಸಲುಗಳಿಗೆ ಬೀಗ ಜಡಿದು ಹೆಂಗಸರು, ಮಕ್ಕಳು, ವೃದ್ಧರೂ ಸೇರಿದಂತೆ ಎಲ್ಲರೂ ಎ.ಪಿ. ಎಂ.ಸಿ. ಮುಂದೆ ರಸ್ತಾ ರೋಕೋ ಚಳುವಳಿ ನಡೆಸಿದರು. ಈ ಚಳುವಳಿ ನಡೆಯುವ ಸ್ಥಳಕ್ಕೆ ಧಾವಿಸಿ ಬಂದ ಸಹಾಯಕ ಆಯುಕ್ತರು, ನಗರಸಭೆ ಆಯುಕ್ತರು ಈ ಏರಿಯಾವನ್ನು ಕೊಳಚೆ ಪ್ರದೇಶ ಎಂದು ಘೋಷಿಸಲು ಸರಕಾರದ ವಿಶೇಷ ಯೋಜನೆಯನ್ನು ಮಂಜೂರು ಮಾಡಿಸಲು ಖಚಿತ ಭರವಸೆ ಸಿಕ್ಕ ನಂತರವೇ ಚಳುವಳಿಯನ್ನು ಹಿಂದಕ್ಕೆ ಪಡೆಯಲಾಯಿತು. ಈ ಹೋರಾಟದ ಪ್ರತಿಫಲವಾಗಿ ಪ್ರಾರಂಭಿಕ ಪ್ರಕ್ರಿಯೆಗಳೆಲ್ಲಾ ಮುಗಿದು ೨೦೦೪ರ ಮಾರ್ಚ ತಿಂಗಳಲ್ಲಿ ಯೋಜನೆ ಮಂಜೂರಾಗಿದ್ದು ಈಗಾಗಲೆ ಈ ಪ್ರದೇಶದ ಮುಖ್ಯ ರಸ್ತೆಗಳು ಡಾಂಬರೀಕರಣದ ರಸ್ತೆಗಳು, ಉಪರಸ್ತೆಗಳನ್ನು ಕಾಂಕ್ರೀಟ್ ರಸ್ತೆಗಳನ್ನಾಗಿ ಮಾಡುವುದು. ಸಾಮಾಜಿಕ ಶೌಚಾಲಯ ಮೊದಲಾದ ಕಾಮಗಾರಿಗಳು ಪ್ರಗತಿಯಲ್ಲಿವೆ ಎಂಬುದು ತಿಳಿದು ಬಂದಿದೆ.

ಈ ಪ್ರದೇಶದ ನಿವಾಸಿಗಳಲ್ಲಿ ನಾನು ಈಗಾಗಲೇ ಹೇಳಿದಂತೆ ಇವರೆಲ್ಲಾ ದಲಿತರೇ ಆಗಿದ್ದು ಇವರಲ್ಲಿ ಬೋವಿ ಜಾತಿಯವರು ಹೆಚ್ಚಿನ ಸಂಖ್ಯೆಯಲ್ಲಿದ್ದು ಕಲ್ಲು ಒಡೆಯುವ ಕೆಲಸವೇ ಇವರಿಗೆ ಜೀವನಾಧಾರ, ಇನ್ನು ಕೆಲವರು ಹಮಾಲಿಗಳಿದ್ದಾರೆ. ಮತ್ತೆ ಕೆಲವು ಕಟ್ಟಡ ಕಾರ್ಮಿಕರಿದ್ದಾರೆ. ಮುಸ್ಲಿಂರಲ್ಲಿ ಕೆಲವರು ಡ್ರೈವರ್‌ಗಳಿದ್ದಾರೆ. ಕೆಲವರು ಬಂಡಿ ಹಮಾಲಿಗಳಿದ್ದಾರೆ. ಕೆಲವರು ಸಣ್ಣ ಸಣ್ಣ ಕಿರಾಣಿ ಅಂಗಡಿಗಳನ್ನು ಇಟ್ಟುಕೊಂಡಿದ್ದಾರೆ. ದಲಿತರೇ ಹೆಚ್ಚಿರುವ ಈ ಪ್ರದೇಶದಲ್ಲಿ ''ಹುಲಿಗೆಮ್ಮ ದೇವಸ್ಥಾನವನ್ನು'' ಕಟ್ಟಿಸಿದ್ದಾರೆ. ಈ ಪ್ರದೇಶದ ಎಲ್ಲರೂ ಈ ದೇವತೆಯನ್ನು ಆರಾಧಿಸುತ್ತಾರೆ. ಇವರಲ್ಲಿ ಹೆಚ್ಚಿನವರು ಅವಿದ್ಯಾವಂತರಾಗಿದ್ದು ಇದೀಗ ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳಿಸುತ್ತಿದ್ದು ಇವರ ಸಂಘಟಿತ ಬದುಕು ಒಗ್ಗಟ್ಟಿನಿಂದ ಮುಂದುವರೆದರೆ ಮುಂದಿನ ದಿನಗಳು ಇವರಿಗೆ ಸುಖಕರವಾಗ ಬಹುದೆಂದು ಖಚಿತವಾಗಿ ಹೇಳಬಹುದು.

# ಅಧ್ಯಾಯ : ಆರು

## ಉಪ ಸಂಹಾರ

ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು ಮತ್ತು ಪರಿಣಾಮಗಳ ಕುರಿತು ಇದುವರೆಗೆ ವಿವಿಧ ಮುಖಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಈ ಮಹಾ ಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದ್ದು ಪ್ರಾರಂಭದಲ್ಲಿ ಅಧ್ಯಯನದ ಪ್ರಸ್ತಾವನೆ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಮಹತ್ವ, ವಿಧಿವಿಧಾನಗಳನ್ನು ಕುರಿತು ಒಟ್ಟಾರೆ ಅಧ್ಯಯನದ ಹರವಿನ ಬಗ್ಗೆ ವಿಸ್ತಾರವಾಗಿ ಹೇಳಲಾಗಿದೆ. ಎರಡನೇ ಅಧ್ಯಾಯದಲ್ಲಿ ಐತಿಹಾಸಿಕ ಸಾಮ್ರಾಜ್ಯ ಹಿನ್ನೆಲೆಯಿಂದ ಅಸ್ತಿತ್ವಕ್ಕೆ ಬಂದ ಹೊಸಪೇಟೆ ತಾಲೂಕಿನ ಭೌಗೋಳಿಕ, ಚಾರಿತ್ರಿಕವಿಶ್ಲೇಷಣೆ ಮಾಡುವುದರ ಜೊತೆಗೆ ಸ್ವಾತಂತ್ರ ಹೋರಾಟದಲ್ಲಿ ಹೊಸಪೇಟೆ ತಾಲೂಕಿನ ಜನಗಳ ಭಾಗವಹಿಸುವಿಕೆ ಕುರಿತು ವಿವರಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಒಟ್ಟಾರೆ ಹೊಸಪೇಟೆ ತಾಲೂಕಿನ ಸಮಗ್ರ ಜನ ಜೀವನದ ಬಗ್ಗೆ, ತಾಲೂಕಿನ ವಿವಿಧ ಸಮುದಾಯಗಳ ಅಸ್ತಿತ್ವ ಕುರಿತು ವಿವರಿಸಲಾಗಿದೆ. ನಾಲ್ಕು ಮತ್ತು ಐದನೆ ಅಧ್ಯಾಯಗಳು ನನ್ನ ಅಧ್ಯಯನದ ಬಹುಮುಖ್ಯ ಅಧ್ಯಾಯಗಳಾಗಿದ್ದು ಹೊಸಪೇಟೆ ತಾಲೂಕಿನಲ್ಲಿ ಸ್ವಾತಂತ್ರ್ಯ ನಂತರ ವಿವಿಧ ಸಾಂಘಿಕ ನೆಲೆಗಳಲ್ಲಿ ನಡೆದ ಸಾಂಘಿಕ ಚಳುವಳಿಗಳ ಕುರಿತು ವಿವರವಾಗಿ ಗುರುತಿಸಲಾಗಿದೆ. ರೈತರ ಚಳುವಳಿ, ದಲಿತರ ಚಳುವಳಿ, ಭಾಷಾ ಚಳುವಳಿ, ಯುವಜನ, ವಿದ್ಯಾರ್ಥಿ ಚಳುವಳಿಗಳನ್ನು ಕುರಿತು ಚರ್ಚಿಸಿದ್ದು, ಈ ಸಾಂಘಿಕ ನೆಲೆಗಳಲ್ಲಾದ ನಿರ್ದಿಷ್ಟ ಪರಿಣಾಮಗಳನ್ನು ಪಟ್ಟಿ ಮಾಡಲಾಗಿದೆ. ಈ ಚಳುವಳಿಗಳಿಂದ ಆಯಾ ಜನಗಳ ಮೇಲಾದ ವೈಯಕ್ತಿಕ ಹಾಗೂ ಸಾಮೂಹಿಕ ಪರಿಣಾಮಗಳನ್ನು ಗುರುತು ಮಾಡಲಾಗಿದೆ.

ದುಡಿಯುವ ಪ್ರಮುಖ ಜನಗಳಾದ ರೈತರು, ಕೃಷಿ ಕೂಲಿಕಾರರು, ಗಣಿ ಕಾರ್ಮಿಕರು, ಕಸಬುದಾರರು ಕಾರ್ಖಾನೆಗಳ ಕಾರ್ಮಿಕರು ಇತ್ಯಾದಿ ಜನ ವಿಭಾಗಗಳು ಸಾಂಘಿಕ ನೆಲೆಗಳಲ್ಲಿ ನಡೆಸಿದ ಪ್ರಯತ್ನಗಳ ಕಡೆಗೆ ನನ್ನ ಅಧ್ಯಯನ ಕೇಂದ್ರೀಕರಿಸಿದ್ದು ನಗರದ ನಾಗರೀಕತೆಯ ಪ್ರಭಾವ, ಬದಲಾಗುತ್ತಿರುವ ಜೀವನ ಕುರಿತು ತಿಳಿಸಲಾಗಿರುತ್ತದೆ. ಬದಲಾದ ಸಂದರ್ಭಗಳಲ್ಲಿ ತಾಲೂಕಿನ ಜನ ಆಧುನಿಕಸೌಲಭ್ಯಗಳನ್ನು ಬಳಸಿಕೊಂಡು ತಮ್ಮ ಶಾರೀರಿಕ, ಸಾಮಾಜಿಕ, ಆರ್ಥಿಕ, ಬುದ್ಧಿ ವಿಕಾಸ ಗಳೊಂದಿಗೆ ಸಮಗ್ರ ಬದಲಾವಣೆ ಹೊಂದುವ ಸಂದರ್ಭಗಳಲ್ಲಿ ಆಗಿರುವ ಮಾರ್ಪಾಡುಗಳನ್ನು ವಿವರಿಸಲಾಗಿದೆ.

ಮೂಲಭೂತವಾಗಿ ಈ ತಾಲೂಕು ಏಕೀಕರಣ ಚಳುವಳಿಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿದ್ದು ಅಖಂಡ ಕರ್ನಾಟಕ ನಿರ್ಮಾಣಕ್ಕಾಗಿ 'ಹಂಪಿ' ಪರಿಸರ ಬಹಳಷ್ಟು ಕೊಡುಗೆಯನ್ನು ನೀಡಿದೆ ಎಂದು ಹೇಳಬಹುದು. ಸ್ವಾತಂತ್ರ್ಯ ಹೋರಾಟದ ಪ್ರಭಾವ ಮತ್ತು ಏಕೀಕರಣ ಚಳುವಳಿಯ ದಟ್ಟ ಪ್ರಭಾವದಿಂದಾಗಿ ಮುಂದಿನ ದಿನಗಳಲ್ಲಿ ನಡೆದ ಸಾಂಘಿಕ ಪ್ರವೃತ್ತಿಗಳ ಮೇಲೆ ವ್ಯಾಪಕ ಪರಿಣಾಮ ಬೀರಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

**೧. ಸಾಂಪ್ರದಾಯಿಕ ನಾಯಕತ್ವ ಕಡಿಮೆಯಾದದ್ದು :-** ಸಾಂಪ್ರದಾಯಿಕವಾಗಿ ಅಂದಿನವರೆಗೆ ನೆಲೆಯೂರಿದ್ದ ಪಾಳೆಗಾರಿಕೆಯನೆಲೆಗಳು ಈ ಚಳುವಳಿಗಳಿಂದ ಸಡಿಲಗೊಂಡವು. ಗ್ರಾಮೀಣ ಪ್ರದೇಶದಲ್ಲಿ ಮೇಲ್ಜಾತಿ ಮತ್ತು ಕೆಳಜಾತಿಗಳ ನಡುವೆ ಅಸ್ತಿತ್ವದಲ್ಲಿದ್ದ ವ್ಯಾಪಕ ಅಸಮಾನತೆಗಳು ಮತ್ತು ಸಾಂಪ್ರದಾಯಿಕವಾಗಿ ಮೇಲ್ಜಾತಿಯ ಕೆಲವೇ ಕೆಲವು ಮುಖಂಡರು ಹೊಂದಿದ್ದ ಕೆಳಜಾತಿಗಳ ಮೇಲಿನ ಹಿಡಿತ ಈ ಸಾಂಘಿಕ ಪ್ರವೃತ್ತಿಯಿಂದ ಕಡಿಮೆಯಾಗಿದ್ದು ಕಂಡುಬರುತ್ತದೆ.

**೨. ಜನಜಾಗೃತಿ ಮೂಡಿದ್ದು :-** ಸ್ವಾತಂತ್ರ್ಯ ನಂತರದಲ್ಲಿ ಈ ತಾಲೂಕಿನಲ್ಲಿ ಬೇರೆಲ್ಲಾ ಪ್ರದೇಶಗಳಲ್ಲಿ ಆದಂತೆಯೇ ಇಲ್ಲಿಯೂ ಸಹಾ ಸ್ವಾತಂತ್ರ್ಯ, ಸ್ವಾಭಿಮಾನ, ಸ್ವಾವಲಂಬನೆಯ ಬಗ್ಗೆ ಜನಜಾಗೃತಿ ಮೂಡಿದ್ದು ಈ ಸಾಂಘಿಕ ನೆಲೆಗಳ ಪರಿಣಾಮಗಳನ್ನು ಪರಿಶೀಲಿಸಿದಾಗ ಕಂಡು ಬರುತ್ತದೆ. ವಿಶೇಷವಾಗಿ ಗ್ರಾಮೀಣ ಪ್ರದೇಶದಲ್ಲಿ ದಲಿತರು ಮೇಲ್ಜಾತಿಜನರ ಮರ್ಜಿಯಲ್ಲಿ ಬದುಕುತ್ತಿದ್ದ ಧಾರುಣ ಪರಿಸ್ಥಿತಿಯಿಂದ ಹೊರಗಡೆ ಬಂದು ನಡೆಸಿದ ಹಲವು ಸಾಂಘಿಕ ಯತ್ನಗಳನ್ನು ನಿರ್ದಿಷ್ಟವಾಗಿ ವಿವರಿಸಲಾಗಿದೆ.

**೩. ಶಿಕ್ಷಣ :-** ಸಾವಿರಾರು ವರ್ಷಗಳಿಂದ ತುಳಿತಕ್ಕೊಳಗಾದ ಶೋಷಿತರೂ, ದಲಿತರೂ ಸೇರಿದಂತೆ ಹಿಂದುಳಿದ ವರ್ಗಗಳು, ಅಲ್ಪಸಂಖ್ಯಾತರೂ, ಮಹಿಳೆಯರೂ ಶಿಕ್ಷಣ ಪಡೆಯಲು ಸಾಧ್ಯವಾಗಿದೆ. ಸ್ವಾವಲಂಬಿಜೀವನ, ಶೋಷಣಾರಹಿತಜೀವನಕ್ಕಾಗಿ ಶಿಕ್ಷಣವನ್ನು ಪಡೆಯುವ ಅವಶ್ಯಕತೆಯ ಬಗ್ಗೆ ಹಲವು ಜನಪರ ಸಂಘಟನೆಗಳು ತಮ್ಮ ವಿಶಿಷ್ಟ ಕಾರ್ಯಕ್ರಮಗಳ ಮೂಲಕ ವ್ಯಾಪಕ ಪ್ರಯತ್ನಗಳನ್ನು ನಡೆಸಿದ್ದಾರೆ. ಸಾಂಸ್ಕೃತಿಕ ಸಾಂಘಿಕ ಪ್ರವೃತ್ತಿಗಳಲ್ಲಿ ಶಿಕ್ಷಣದ ಜಾಗೃತಿ ಮೂಡಿಸಿರುವ ಪ್ರಯತ್ನಗಳನ್ನು ನೋಡ ಬಹುದಾಗಿದೆ.

### ೪. ಕೆಳಜಾತಿಗಳ ಜೀವನ ಮಟ್ಟದಲ್ಲಾದ ಬದಲಾವಣೆಗಳು :

ಹೊಸಪೇಟೆ ತಾಲೂಕಿನ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ಜಾತಿಗಳಾದ ವಾಲ್ಮೀಕಿ ನಾಯಕ, ಮಡಿವಾಳ, ಗಂಗಾಮತ, ದೇವಾಂಗ, ಪದ್ಮಶಾಲೀಯ, ಗೌಳಿಗರು, ಖಾಟಿಕ್ ಮೊದಲಾದ ಕೆಳಜಾತಿಗಳಲ್ಲಿ ಸಾಂಘಿಕ ಪ್ರವೃತ್ತಿಗಳ ವ್ಯಾಪ್ತಿಗೆ ತೊಡಗಿಸಿಕೊಂಡಿದ್ದು ಪ್ರಮುಖ ಬದಲಾವಣೆಯಾಗಿದೆ. ಇದರಿಂದ ಈ ಸಮುದಾಯಗಳ ಐಕ್ಯತೆ ಕಾಪಾಡಿಕೊಳ್ಳುವುದರ ಜೊತೆಗೆ ಸರಕಾರದಿಂದ, ಸಮಾಜದಿಂದ ತಮ್ಮ ನ್ಯಾಯಯುತವಾದ ಬೇಡಿಕೆಗಳನ್ನು ಸಂಪೂರ್ಣವಲ್ಲದಿದ್ದರೂ ಸ್ವಲ್ಪಮಟ್ಟಿಗಾದರೂ ಪಡೆಯಲು ಸಾಧ್ಯವಾಗಿದೆಯೆಂದರೆ ಅದಕ್ಕೆ ಕಾರಣ ಸಾಂಘಿಕ ನೆಲೆಗಳ ಪರಿಣಾಮಗಳೆಂದು ಹೇಳಬಹುದು. ಈ ಸಮುದಾಯಗಳ ಈ ಪ್ರಮುಖ ಬದಲಾವಣೆಗಳಿಂದಾಗಿ ಇವರಲ್ಲಿ ಸ್ವಾಭಿಮಾನ ಮೂಡಿಸಲು, ಪರಸ್ಪರ ವಿಶ್ವಾಸ ಬೆಳೆಸಲು ಇದರಿಂದ ಸಾಧ್ಯವಾಗಿದ್ದು ಇದು ನನ್ನ ಅಧ್ಯಯನದ ಪ್ರಮುಖ ವಿಚಾರವಾಗಿದೆ.

ಸಾಂಘಿಕ ನೆಲೆಗಳು ಅಪಾರವಾಗಿದ್ದರೂ ಸಂಪೂರ್ಣವಾಗಿ ಸಾಂಘಿಕ ಪ್ರಯತ್ನಗಳಾಗದೇ ಇರುವುದು ನನ್ನ ಅಧ್ಯಯನದ ಮಿತಿಯಾಗಿರುತ್ತದೆ. ಸಾಂಘಿಕ ಪ್ರಯತ್ನಗಳನ್ನಷ್ಟೇ ಪ್ರಸ್ತಾಪಿಸಿರುವ ನಾನು ಸಾಂಘಿಕ ನೆಲೆಗಳಿದ್ದೂ ಯತ್ನಗಳಾಗದೇಯಿರುವ ಹಲವು ವಲಯಗಳನ್ನು ಕೇವಲ ಸಾಂಕೇತಿಕವಾಗಿ ಗುರುತುಮಾಡಿದ್ದೇನೆ. ಕೃಷಿ ಕೂಲಿಕಾರರು (ವಿಶೇಷವಾಗಿ ಮಹಿಳೆಯರು) ದಲಿತರು, ರೈತರು, ಗಣಿಕಾರ್ಮಿಕರು, ಬಾಲ ಕಾರ್ಮಿಕರು, ಗ್ರಾಮೀಣ ಕಸಬುದಾರರು ಮೊದಲಾದವರ ಸಂಘಟನೆಗಳು ಇನ್ನು ವ್ಯಾಪಕವಾಗಿ ರೂಪಿಸುವ ಅವಶ್ಯಕತೆಯಿದೆ. ವಿವಿಧ ಸಮುದಾಯಗಳ ಸಂಘಟನೆ ವಿಸ್ತರಿಸುವುದರ ಜೊತೆಗೆ ಕೆಳ, ಹಿಂದುಳಿದಜಾತಿಗಳಲ್ಲಿ ಇವತ್ತಿಗೂ ವಿವಿಧ ರೂಪಗಳಲ್ಲಿ ಆಚರಣೆಯಲ್ಲಿರುವ ದೇವದಾಸಿ, ಬಾಲ್ಯವಿವಾಹ, ಬಾಲಕಾರ್ಮಿಕದಂತಹ ಅನಿಷ್ಟ ಪದ್ಧತಿಗಳ ಸಂಪೂರ್ಣ ನಿರ್ಮೂಲನದ ಅವಶ್ಯಕತೆ ಇರುತ್ತದೆ. ಹಾಗೆಯೇ ಹೊಸಪೇಟೆ ತಾಲೂಕಿನ ಜನ ಜೀವನದ ಮೇಲೆ ವ್ಯಾಪಕ ವ್ಯತಿರಿಕ್ತ ಪರಿಣಾಮ ಬೀರಿರುವ ಭ್ರಷ್ಟಾಚಾರ, ಲಂಚಗುಳಿತನ, ಸ್ವಜನ ಪಕ್ಷಪಾತ, ಜಾತೀಯತೆ, ನಿರುದ್ಯೋಗ, ಅನಕ್ಷರತೆಯಂತಹ ಸರ್ವ ಸಮುದಾಯಗಳ ಸಾಮಾನ್ಯ ಕನಿಷ್ಟ ಸಮಸ್ಯೆಗಳ ಬಗ್ಗೆ ಸರ್ವರಲ್ಲಿ ಜಾಗೃತಿ ಮೂಡಿಸುವುದರ ಜೊತೆಗೆ ಸಾಂಘಿಕ ಸಮನ್ವಯತೆಯನ್ನು ಸಾಧಿಸುವ ಅವಶ್ಯಕತೆ ಇರುತ್ತದೆ.

ಹೊಸಪೇಟೆ ತಾಲೂಕು ಸಾಂಸ್ಕೃತಿಕವಾಗಿ, ಚಾರಿತ್ರಿಕವಾಗಿ ಅತ್ಯಂತ ಪ್ರಮುಖ ತಾಲೂಕಾಗಿದ್ದು ಇಲ್ಲಿ ಎಲ್ಲವೂ ಇದೆ. ಎರಡು ರಾಷ್ಟ್ರೀಯ ಹೆದ್ದಾರಿಗಳು, ರೈಲು ಸಾರಿಗೆ, ಪಕ್ಕದಲ್ಲಿ ವಿಮಾನ ನಿಲ್ದಾಣ, ಐತಿಹಾಸಿಕ ತಾಣವಾದ ಹಂಪಿ ಪ್ರವಾಸಿ ಕೇಂದ್ರದ ಸ್ಥಾನವನ್ನು ಹೊಂದಿದೆ. ತುಂಗಾಭದ್ರಾ ಜಲಾಶಯದಿಂದಾಗಿ ವಿಪುಲ ನೀರಾವರಿ ಅನುಕೂಲ ಕಲ್ಪಿಸಲಾಗಿದೆ. ವಿಶ್ವಗುಣ ದರ್ಜೆಯ ಗಣಿ ಸಂಪತ್ತಿನಿಂದಾಗಿ ಆಧುನಿಕ ಕುಬೇರರು ಹುಟ್ಟಿದ್ದು ತಾಲೂಕಿನ ಆರ್ಥಿಕ, ರಾಜಕೀಯ ವಿದ್ಯಾಮಾನಗಳ ವಾಸ್ತವಿಕ ನಿರ್ಣಾಯಕಾರರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಸಾಂಘಿಕ ಪ್ರವತ್ತಿಗಳನ್ನು ರೂಪಿಸುವ ಆ ಮೂಲಕ ಜನ ಜೀವನ ಉತ್ತಮಗೊಳಿಸುವ ನಿಟ್ಟಿನಲ್ಲಿ ನನ್ನ ಅದ್ಯಯನ ಪ್ರಾಮಾಣಿಕ ಪ್ರಯತ್ನ ಮಾಡಿದ್ದು, ಇದು ಸುವ್ಯವಸ್ಥಿತವಾಗಿ ಕೈಗೂಡಿದರೆ ಇದರಷ್ಟು ಮಾದರಿ ತಾಲೂಕು ಮತ್ತೊಂದಿರಲಾರದೆಂದು ಭಾವಿಸಿದ್ದೇನೆ.

ಕೊನೆಯಲ್ಲಿ ವಕ್ತೃ ವಿವರ, ಅನುಬಂಧ, ಗ್ರಂಥಸೂಚಿ, ನಕಾಶೆ ಮತ್ತು ಛಾಯಾಚಿತ್ರಗಳನ್ನು ಅಳವಡಿಸಿದ್ದು ಇದೊಂದು ಕ್ಷೇತ್ರ ಕಾರ್ಯಾಧಾರಿತ ಅಧ್ಯಯನವೆಂದು ಹೇಳಬಹುದು.

## ಪರಾಮರ್ಶನ ಗ್ರಂಥಗಳು :

೧. ಜೋಗನ್ ಶಂಕರ್, ೧೯೯೫, 'ಗ್ರಾಮ ಸಮಾಜ; ಜೀವ ಪ್ರಕಾಶನ ಮೈಸೂರು.

೨. ಪ್ರೊ. ಎಚ್.ವಿ.ನಾಗೇಶ್, ೧೯೮೮, 'ಗ್ರಾಮಾಂತರ' ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩. ಡಾ.ಸಿ. ಮಹದೇವ, ಡಾ. ಎ. ಸುಬ್ಬಣ್ಣ ರೈ, ಡಾ. ಮಾಧವ ಪೆರಾಜೆ (ಸಂ), ೨೦೦೨, 'ಹೊಸಪೇಟೆ ತಾಲೂಕು ದರ್ಶನ' ಕ.ವಿ.ವಿ. ಹಂಪಿ.

೪. ರವಿಂದ್ರನ್.ಕೆ ೧೯೮೬ 'ಭಾರತದ ಸಾಮಾಜಿಕ ಸಮಸ್ಯೆಗಳು' ವಿಜಯ್ ಬುಕ್ ಡಿಪೋ, ಗದಗ

೫. ಹಿರೇಮಠ, ಎಸ್. ಎಸ್. ೧೯೯೩, 'ಜಾತ್ರೆಗಳು' ಸಮತಾ ಪ್ರಕಾಶನ, ಹೊಸಪೇಟೆ.

೬. ಡಾ. ಚಂದ್ರ ಪೂಜಾರಿ.ಎಂ, ೨೦೦೦, 'ದೇಶೀಯತೆಯ ನೆರಳಲ್ಲಿ ವಿಕೇಂದ್ರೀಕರಣ'' ಪ್ರಸಾರಾಂಗ, ಕ.ವಿ.ವಿ.ಹಂಪಿ.

೭. ನಾಗರಾಜ ಗುಡಿಹಳ್ಳಿ, ೧೯೯೯, 'ಕಲಾಗ್ರಾಮ ಮರಿಯಮ್ಮನಹಳ್ಳಿ '' ಪ್ರಸಾರಾಂಗ, ಕ.ವಿ.ವಿ. ಹಂಪಿ.

೮. ಮಹಾದೇವಯ್ಯ.ಪಿ, ೧೯೯೯, ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ' ಪ್ರಸಾರಾಂಗ, ಕ.ವಿ.ವಿ. ಹಂಪಿ.

೯. ಶೇಷಾದ್ರಿ.ಬಿ, ೧೯೯೮, ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು ಜನಾಂದೋಲನ ಪ್ರಸಾರಾಂಗ, ಕ.ವಿ.ವಿ. ಹಂಪಿ.

೧೦. ಶೇಷಾದ್ರಿ, ಬಿ : ಚಂದ್ರಶೇಖರ ಟಿ. ಆರ್ (ಸಂ) ೧೯೯೮ '' ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ'' ಪ್ರಸಾರಾಂಗ, ಕ.ವಿ.ವಿ. ಹಂಪಿ.

೧೧) ಡಾ. ರಂಗರಾಜ ವನದುರ್ಗ, ೨೦೦೨, ಬಂಡಾಯ ಸಾಹಿತ್ಯ ಸಂವೇದನೆ, ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು.

೧೨) ಡಾ. ಚಂದ್ರಶೇಕರ್ ಟಿ. ಆರ್ (ಸಂ) ೧೯೯೯, ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ, ಪ್ರಸಾರಾಂಗ, ಕ.ವಿ.ವಿ. ಹಂಪಿ.

೧೩) ಮಹೇಶ ತಿಪ್ಪಶೆಟ್ಟಿ, ೨೦೩, ಬಸವ ತತ್ವ ಸಾಮಾಜಿಕ ಬದಲಾವಣೆ; ಪ್ರಸಾರಾಂಗ, ಕ.ವಿ.ವಿ. ಹಂಪಿ

೧೪) ಡಾ. ಮೋಹನ ಕೃಷ್ಣ ರೈ, ೨೦೪, 'ಪ್ರಭುತ್ವ ಮತ್ತು ಜನತೆ' ಪ್ರಸಾರಾಂಗ, ಕ.ವಿ.ವಿ.ಹಂಪಿ

೧೫) ಎಚ್. ಎಂ. ಮರುಳ ಸಿದ್ದಯ್ಯ, ೧೯೯೩; 'ಸಂಶೋಧನೆಯ ಎರಡು ಹೆಜ್ಜೆಗಳು; ಪ್ರಸಾರಾಂಗ, ಕ.ವಿ.ವಿ. ಹಂಪಿ.

೧೬) ಡಾ. ಥಾಮಸ್ ಇಸಾಕ್, ೧೯೯೪, 'ನಮ್ಮ ಸ್ವಾತಂತ್ರ್ಯ' ಹಮಾರಾದೇಶ್' ಕರ್ನಾಟಕ ರಾಜ್ಯ ಸಮಿತಿ, ಬೆಂಗಳೂರು.

೧೭) ಟಿ. ಆರ್. ಚಂದ್ರಶೇಖರ, ೧೯೯೯, 'ಅಮರ್ತ್ಯಸೇನ್‌ರ ಅಭಿವೃದ್ಧಿ ಕಥನ'

೧೮) ಎಂ.ಕೆ. ಫಂದೆ, ೧೯೯೮; 'ಕಾರ್ಮಿಕ ಸಂಘ ಹಕ್ಕುಗಳ ಮೇಲೆ ಉಗ್ರದಾಳಿ' ಸಿ. ಐ.ಟಿ.ಯು, ಬೆಂಗಳೂರು.

೧೯) ಕೆ.ದಾಮೋದರನ್, ೧೯೮೫; 'ವರ್ಗ ಹೋರಾಟ ಮತ್ತು ಪ್ರಭುತ್ವ' ನವ ಕರ್ನಾಟಕ, ಬೆಂಗಳೂರು.

೨೦) ಡಾ. ಎಂ. ಚಂದ್ರ, ಪೂಜಾರಿ; ೧೯೯೮; 'ಪರಿಸರ ಮತ್ತು ಅಭಿವೃದ್ಧಿ' ಪ್ರಸಾರಾಂಗ, ಕ.ವಿ.ವಿ.ಹಂಪಿ.

೨೧) ಕೆ.ನಾರಾಯಣ ಭಟ್ಟ (ಸಂ); ೧೯೯೨; 'ಜೆ.ಪಿ.ವಿಚಾರದೃಷ್ಟಿ' ಕರುಣಾ ಪ್ರಕಾಶನ, ಹೊಸಪೇಟೆ.

೨೨) ಹೆಚ್.ಸರ್ವೇಶ್ವರ (ಸಂ); ೧೯೬೪; 'ಸುವರ್ಣ ಪುಷ್ಪಾಂಜಲಿ', ಹೊಸಪೇಟೆ

೨೩) ಪ್ರೊ. ಎ. ಆರ್. ಶರ್ಮ; ೧೯೯೯; ಸಾಮಾಜಿಕ ಬದಲಾವಣೆ ಮತ್ತು ಚಳುವಳಿ ಅಖಿಲಾ ಏಜೆನ್ಸೀಸ್, ಮೈಸೂರು.

೨೪) ಡಾ. ಎಂ. ಉಷಾ, ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಕನ್ನಡ ವಿ.ವಿ. ಪ್ರಸಾರಾಂಗ ಹಂಪಿ.

೨೫) ಸಿ.ನಂಜುಂಡಪ್ಪ, ೧೯೯೮ ಕಾರ್ಮಿಕ ಚಳುವಳಿಯ ಕುರಿತು, ಭಾರತಿ ಪ್ರಕಾಶನ ಮೈಸೂರು.

೨೬) ಬೆಲ್ಲದ್ ಚೆನ್ನಪ್ಪ, ೧೯೯೦, ಕಬ್ಬು ಬೆಳೆಗಾರರ ಹೋರಾಟ, ರೈತ ಸಂಘ, ಹೊಸಪೇಟೆ.

೨೭) ಡಾ. ವಿಜಯ್ ಪೂಣಚ್ಚ, ೧೯೯೯, ರೈತ ಚಳುವಳಿಗಳು ಕನ್ನಡ ವಿ.ವಿ. ಪ್ರಸಾರಾಂಗ, ಹಂಪಿ.

೨೮) ಕೆ. ಮೋಹನ್ ಕೃಷ್ಣ ರೈ, ೧೯೯೯, ಪರಿಸರ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೨೯) ಚಂದ್ರಶೇಖರ್, ೧೯೮೩, ಸಮಾಜಿಕ ಕ್ರಾಂತಿ, ಜನ ಪ್ರಕಾಶನ, ಬೆಂಗಳೂರು.

೩೦) ಡಾ. ಸಿ. ಆರ್. ಗೋವಿಂದರಾಜು, ೧೯೯೯, ಕನ್ನಡ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

೩೧) ಡಾ. ಆರ್ಕೆ. ಮಣಿಪಾಲ, ೧೯೯೪ ಸಾಮಾಜಿಕ ಚಳುವಳಿಗಳು, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೩೨) ಡಾ. ಎನ್.ಚಿನ್ನಸ್ವಾಮಿ ಸೋಸಲೆ, ೧೯೯೯, ಗಡಿ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ.

೩೩) ಟಿ. ಆರ್. ಚಂದ್ರಶೇಖರ್, ೧೯೯೩, 'ಅಭಿವೃದ್ಧಿ ಮಿಮಾಂಸೆ' ಪ್ರಸಾರಾಂಗ, ಕ.ವಿ.ವಿ. ಹಂಪಿ.

೩೪) ಸಿ. ಆರ್.ಭಟ್, ೨೦೦೦, 'ಜಾಗತೀಕರಣದ ಹತ್ತು ವರ್ಷಗಳು' ಕರ್ನಾಟಕ ಸಮಾಜ ವಿಜ್ಞಾನ ಕೇಂದ್ರ, ಧಾರವಾಡ.

೩೫) ಸುನಿಲ್ ಮೈತ್ರ; ೨೦೦೦; ಕಾರ್ಮಿಕ ವರ್ಗದ ರಾಜಕೀಯ ಮತ್ತು ಇತರ ಪ್ರಬಂಧಗಳು; ಅಧ್ಯಯನ ಪ್ರಕಾಶನ ತಿರಸಿ.

೩೬) ಟಿ. ಆರ್. ಚಂದ್ರಶೇಖರ, ಎಂ.ಚಂದ್ರಪೂಜಾರಿ (ಸಂ); ೨೦೦೨, ೨೦೦೩, 'ಅಭಿವೃದ್ಧಿ ಅಧ್ಯಯನ , ಸಮಾಜ ವಿಜ್ಞಾನ ಪತ್ರಿಕೆ, ಪ್ರಸಾರಾಂಗ, ಕ.ವಿ.ವಿ. ಹಂಪಿ.

೩೭) ಡಾ. ಎಂ. ಉಷಾ ; ೨೦೦೫; 'ಮಹಿಳೆ ಮತ್ತು ಜಾತಿ' ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ, ಕ.ವಿ.ವಿ.ಹಂಪಿ.

೩೮) ಬಿ.ಟಿ.ರಣದಿವೆ; ೨೦೦೪, ' ಐಕ್ಯತೆ ಮತ್ತು ಹೋರಾಟ'; ಸಿ. ಐ.ಟಿ. ಯು ಪ್ರಕಟಣೆ, ಬೆಂಗಳೂರು.

೩೯) ಬಿಪಿನ್‌ಚಂದ್ರ, ಅಮಲೇಶ ತ್ರಿಪಾಠಿ, ಬರುನ್‌ಡೇ; ೧೯೮೪, 'ಸ್ವಾತಂತ್ರ್ಯದ ಹೋರಾಟ' ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ.

೪೦) ಬೆಲ್ಲದ ಚೆನ್ನಪ್ಪ ; ೧೯೯೨; 'ಹಣ್ಣೆಲಯ ಹಸಿರು ನೆನಪುಗಳು' ಕಲ್ಮಟೇಶ್ವರ ಪ್ರಕಾಶನ ಚಿತ್ತವಾಡಿಗಿ, ಹೊಸಪೇಟೆ.

೪೧) ಕೆ. ಫಣಿರಾಜ್; ೨೦೦೨; 'ಭಯೋತ್ಪಾದನೆ ಮತ್ತು ಕೋಮುವಾದ' ಸಮುದಾಯ; ಬೆಂಗಳೂರು.

೪೨) ಎನ್.ಕೆ. ಉಪಾಧ್ಯಾಯ; ೧೯೯೮; 'ಪಂಜಾಬಿನ ದಳ್ಳುರಿ' ಕ್ರಿಯಾ ಪ್ರಕಾಶನ, ಬೆಂಗಳೂರು

೪೩) ಬರಗೂರು ರಾಮಚಂದ್ರಪ್ಪ; ೧೯೮೧; ಸಾಹಿತ್ಯ ಮತ್ತು ರಾಜಕಾರಣ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೪) ಸಿ. ಆರ್. ಭಟ್; ೧೯೯೮, 'ಶ್ರೀಮಂತ ಭಾರತದಲ್ಲಿ ಬಡ ಭಾರತೀಯರು' ಕರ್ನಾಟಕ ಸಮಾಜ ವಿಜ್ಞಾನ ಕೇಂದ್ರ, ಧಾರವಾಡ.

೪೫) ಎಚ್. ತುಕಾರಾಮರಾವ್; ೧೯೯೭; 'ಹೊಸಪೇಟೆ' ಶರಣರ ಸುವಾಸಿನಿ ಬಳಗ, ಹೊಸಪೇಟೆ.

೪೬) ಡಾ.ಟಿ. ಆರ್.ಚಂದ್ರಶೇಖರ; ೨೦೦೪, 'ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ' ಪ್ರಸಾರಾಂಗ, ಕ.ವಿ.ವಿ. ಹಂಪಿ.

೪೭) ಡಾ. ಸಿದ್ದಲಿಂಗಯ್ಯ, ೧೯೭೫; 'ಹೊಲೆ ಮಾದಿಗರ ಹಾಡು' ಬೆಂಗಳೂರು.

೪೮) ಡಾ. ಸಿದ್ಧಲಿಂಗಯ್ಯ; ೧೯೭೯, 'ಸಾವಿರಾರು ನದಿಗಳು' ಸಮುದಾಯ , ಬೆಂಗಳೂರು.

೪೯) ಡಾ. ಕೆ.ರವೀಂದ್ರನಾಥ (ಸಂ); ೨೦೦೫; 'ಬಳ್ಳಾರಿ ಜಿಲ್ಲಾ ದರ್ಶನ' ಪ್ರಸಾರಾಂಗ, ಕ.ವಿ.ವಿ. ಹಂಪಿ.

೫೦) ಡಾ.ವಿರೂಪಾಕ್ಷಿ ಪೂಜಾರಹಳ್ಳಿ (ಸಂ); ೨೦೦೫; ದಲಿತರು ಮತ್ತು ಚರಿತ್ರೆ; ಪ್ರಸಾರಾಂಗ, ಕ.ವಿ.ವಿ. ಹಂಪಿ.

೫೧) ಎನ್.ಗಾಯಿತ್ರಿ; ೧೯೯೧; 'ಮಹಿಳೆ ಬಿಡುಗಡೆಯ ಹಾದಿಯಲ್ಲಿ ' ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೨) ಸೀತಾರಾಮ ಯೆಚೂರಿ; ೧೯೯೮, 'ಭಾರತ ರಾಜಕಾರಣದಲ್ಲಿ ಇಂದು ಜಾತಿ ಮತ್ತು ವರ್ಗ' ಬೆಂಗಳೂರು.

೫೩) ಡಾ. ಟಿ. ಆರ್. ಚಂದ್ರಶೇಖರ್ ; ೨೦೦೫; 'ಜನರ ಯೋಜನೆ ಕರ್ನಾಟಕದ ಅನುಭವಗಳು' ಪ್ರಸಾರಾಂಗ, ಕ.ವಿ.ವಿ.ಹಂಪಿ.

೫೪) ಬಿ.ವಿ. ಕಕ್ಕಿಲಾಯ; ೧೯೯೭; ಡಾ.ಬಿ. ಆರ್. ಅಂಬೇಡ್ಕರ್ ಮತ್ತು ದಲಿತರ ವಿಮೋಚನೆ, ಜನಜಾಗೃತಿ ವೇದಿಕೆ, ಮಂಗಳೂರು.

೫೫) ಡಾ. ವಿರುಪಾಕ್ಷಿ ಪೂಜಾರಹಳ್ಳಿ; ೧೯೯೯; 'ಜಲಸಂಬಂಧಿ ಚಳುವಳಿಗಳು' ಪ್ರಸಾರಾಂಗ, ಕ.ವಿ.ವಿ. ಹಂಪಿ.

೫೬) ಮಹೇಶ ತಿಪ್ಪಶೆಟ್ಟಿ; ೨೦೦೩; ಬಸವ ತತ್ವ ಸಾಮಾಜಿಕ ಬದಲಾವಣೆ, ಪ್ರಸಾರಾಂಗ, ಕ.ವಿ.ವಿ. ಹಂಪಿ.

# ವಕ್ತೃ ವಿವರ

| ಕ್ರ. ಸಂ. | ಹೆಸರು | ವಯಸ್ಸು | ಜಾತಿ | ವೃತ್ತಿ | ಹುಟ್ಟಿದ ಊರು |
|---|---|---|---|---|---|
| 1. | ನಾರಾಯಣ ಭಟ್ಟರು | 72 | ಬ್ರಾಹ್ಮಣ | ನಿವೃತ್ತ ಶಿಕ್ಷಕರು | ಉಡುಪಿ |
| 2. | ಪಿ. ಎಸ್. ಸಿದ್ದೇಶ್ವರ | 64 | ಪದ್ಮಶಾಲಿ | ನಿವೃತ್ತ ಶಿಕ್ಷಕರು | ಕಮಲಾಪುರ |
| 3. | ಮಹಾಬಲೇಶ್ವರ | 48 | ಲಿಂಗಾಯತ | ಕೃಷಿಕರು | ಕಂಪ್ಲಿ |
| 4. | ರಾಜಶೇಕರ ಗೌಡ | 35 | ಲಿಂಗಾಯತ | ವಕೀಲರು | ಚಿಕ್ಕಜಾಯಿಗನೂರು |
| 5. | ಬಿ. ತಾಯಪ್ಪ ನಾಯಕ | 55 | ನಾಯಕ | ಸರ್ಕಾರಿ ನೌಕರ | ಹೊಸಪೇಟೆ |
| 6. | ಎಂ. ಜಂಬಯ್ಯ ನಾಯಕ | 54 | ನಾಯಕ | ಸರ್ಕಾರಿ ನೌಕರ | ಹೊಸಪೇಟೆ |
| 7. | ಎಸ್. ಗಾಳೆಪ್ಪ | 48 | ಗಂಗಾಮತ | ಕೃಷಿಕರು | ಹೊಸಪೇಟೆ |
| 8. | ಪಿ.ದುರುಗಪ್ಪ | 48 | ನಾಯಕ | ಕೃಷಿಕರು | ಹೊಸಪೇಟೆ |
| 9. | ಮಂಜುನಾಥ | 50 | ನಾಯಕ | ಶಿಕ್ಷಕರು | ಮರಿಯಮ್ಮನಹಳ್ಳಿ |
| 10. | ಸತ್ಯನಾರಾಯಣ | 62 | ನಾಯಕ | ರಾಜಕಾರಣಿ | ಮರಿಯಮ್ಮನಹಳ್ಳಿ |
| 11. | ಮಡ್ಡಿ ಮಂಜುನಾಥ | 35 | ಗಂಗಾಮತ | ಉಪನ್ಯಾಸಕರು | ಹೊಸಪೇಟೆ |
| 12. | ಚಂದ್ರಪ್ಪ | 28 | ನಾಯಕ | ಶಿಕ್ಷಕರು | ಕಾರಿಗನೂರು |
| 13. | ಬಿ. ವೆಂಕೋಬನಾಯಕ | 52 | ನಾಯಕ | ಶಿಕ್ಷಕರು | ಹೊಸಪೇಟೆ |
| 14. | ಸಿದ್ಧಲಿಂಗಪ್ಪ | 51 | ಲಿಂಗಾಯತ | ಉದ್ಯೋಗಿ | ಮಲಪನಗುಡಿ |
| 15. | ಕೆ. ಮಲ್ಲಿನಾಥ | 62 | ಲಿಂಗಾಯತ | ನಿವೃತ್ತಿ ನೌಕರರು | ಹೊಸಪೇಟೆ |
| 16. | ಬಸಪ್ಪ | 56 | ಲಿಂಗಾಯತ | ಕೃಷಿಕರು | ವಡ್ಡರಹಳ್ಳಿ |
| 17. | ಇಸ್ಮಾಯಿಲ್ | 48 | ಮುಸ್ಲೀಂ | ಕೃಷಿಕರು | ನಲ್ಲಾಪುರ |
| 18. | ನೂರುಲ್ಲಾ ಖಾನ್ | 54 | ಮುಸ್ಲೀಂ | ಕೃಷಿಕರು | ಕಮಲಾಪುರ |
| 19. | ಶೆಲ್ಲಪ್ಪನ್ | 62 | ಕ್ರಿಶ್ಚಿಯನ್ | ಕೃಷಿಕರು | ಕಮಲಾಪುರ |
| 20. | ನಾರಾಯಣ | 46 | ನಾಯಕ | ಕೃಷಿಕರು | ರಾಮಸಾಗರ |
| 21. | ಡಾ|| ಜೆ. ಕ್ರಿಷ್ಣ | 40 | ಲಿಂಗಾಯತ | ನೌಕರ | ರಾಮಸಾಗರ |
| 22. | ಶ್ರೀನಿವಾಸ | 36 | ಲಿಂಗಾಯತ | ಕೃಷಿಕರು | ರಾಮಸಾಗರ |
| 23. | ನಟರಾಜ | 38 | ರೆಡ್ಡಿಲಿಂಗಾಯತ | ಕೃಷಿಕರು | ಕಂಪ್ಲಿ |
| 24. | ಗುರು | 32 | ಲಿಂಗಾಯತ | ಕೃಷಿಕರು | ರಾಮಸಾಗರ |
| 25. | ಬೆಳಗೋಡು ಈರಣ್ಣ | 58 | ಗಂಗಾಮತ | ಕೃಷಿಕರು | ಬೆಳಗೋಡು |
| 26. | ವೆಂಕಟನಾಯ್ಡು | 54 | ಕಮ್ಮ | ಕೃಷಿಕರು | ಸಣಾಪುರ |
| 27. | ಉಧೇದಪ್ಪ | 35 | ಹರಿಜನ | ಗಣಿಕೂಲಿ | ಇಂಗಳಗಿ |
| 28. | ಚಂದ್ರಬಾಬು | 40 | ನಾಯಕ | ಕೃಷಿಕರು | ಹೊಸಪೇಟೆ |
| 29. | ಜಂಬಾನಳ್ಳಿ ವೆಂಕೋಬಣ್ಣ | 60 | ನಾಯಕ | ಕೃಷಿಕರು | ಹೊಸಪೇಟೆ |
| 30. | ಜಿ. ಭರ್ಮಪ್ಪ | 42 | ನಾಯಕ | ಕೃಷಿಕ | ಹೊಸಪೇಟೆ |
| 31. | ಲಕ್ಷ್ಮಣ | 43 | ನಾಯಕ | ಕಾರ್ಮಿಕ | ಕಮಲಾಪುರ |

| | | | | | |
|---|---|---|---|---|---|
| 32. | ಲೋಕೇಶ್ | 48 | ಪದ್ಮಶಾಲಿ | ಗಣಿ ಉದ್ಯಮಿ | ವೆಂಕಟಾಪುರ |
| 33. | ಹನುಮಂತಪ್ಪ | 56 | ಭೋವಿ | ಬಂಡಿ ಒಡ್ಡ | ವೆಂಕಟಾಪುರ |
| 34. | ಶಿವಶಂಕರಗೌಡ | 46 | ಲಿಂಗಾಯತ | ಕೃಷಿಕರು | ರಾಮಸಾಗರ |
| 35. | ಹರಿಜನ ತಿಮ್ಮಪ್ಪ | 36 | ಹರಿಜನ | ಕೃಷಿಕರು | ರಾಮಸಾಗರ |
| 36. | ವೀರೇಶಪ್ಪ | 43 | ನಾಯಕ | ಕೃಷಿಕರು | ಜೌಕ್ |
| 37. | ಹುಲುಗಪ್ಪ | 28 | ಭೋವಿ | ಕೃಷಿಕರು | ಧರ್ಮಸಾಗರ |
| 38. | ದೇವೇಂದ್ರಪ್ಪ | 44 | ಉಪ್ಪಾರ | ಕೃಷಿಕರು | ಧರ್ಮಸಾಗರ |
| 39. | ಕೆ. ಸೀತಾರಾಮಶೆಟ್ಟಿ | 58 | ಆರ್ಯವೈಶ್ಯ | ವ್ಯಾಪಾರಿ | ಕಾಕುಬಾಳು |
| 40. | ಕೆ. ಪಾಂಡುರಂಗಶೆಟ್ಟಿ | 63 | ಆರ್ಯವೈಶ್ಯ | ಉದ್ಯಮಿ | ಹೊಸಪೇಟೆ |
| 41. | ಕೆ. ಬಾಬುಲಾಲ್ ಜೈನ್ | 61 | ಜೈನರು | ವ್ಯಾಪಾರಿ | ಹೊಸಪೇಟೆ |
| 42. | ದೇವೆಂದ್ರಗೌಡ | 53 | ಲಿಂಗಾಯತ | ಉದ್ಯೋಗಿ | ಹನುಮನಹಳ್ಳಿ |
| 43. | ಮಂಜುನಾಥಯ್ಯ | 52 | ಲಿಂಗಾಯತ | ಉದ್ಯೋಗಿ | ಹನುಮನಹಳ್ಳಿ |
| 44. | ಚಂದ್ರಣ್ಣ | 44 | ಹರಿಜನ | ಕೃಷಿ ಕಾರ್ಮಿಕ | ಹನುಮನಹಳ್ಳಿ |
| 45. | ಮಾರುತಿ ರಾವ್ | 68 | ಭಾವಕ್ಷತ್ರಿಯ | ನಿವೃತ್ತಿ ಉದ್ಯೋಗಿ | ಹನುಮನಹಳ್ಳಿ |
| 46. | ಪ್ರಕಾಶ್ | 49 | ಉಪ್ಪಾರ | ಉದ್ಯೋಗಿ | ಹೊಸಪೇಟೆ |
| 47. | ಡಾ॥ ಅಂಬಣ್ಣ | 64 | ಗಂಗಾಮತ | ವೈದ್ಯರು | ಮರಿಯಮ್ಮನಹಳ್ಳಿ |
| 48. | ಸತ್ಯನಾರಾಯಣ | 58 | ನಾಯಕ | ಕೃಷಿಕರು | ಮರಿಯಮ್ಮನಹಳ್ಳಿ |
| 49. | ಮಂಜುನಾಥ | 49 | ನಾಯಕ | ಶಿಕ್ಷಕರು | ಮರಿಯಮ್ಮನಹಳ್ಳಿ |
| 50. | ಕೆ. ನಾಗರತ್ನ | 59 | ನಾಯಕ | ಕಲಾವಿದೆ | ಮರಿಯಮ್ಮನಹಳ್ಳಿ |
| 51. | ನಾಗರಾಜ | 48 | ಹಜಾಮ | ಶಿಕ್ಷಕರು | ಮರಿಯಮ್ಮನಹಳ್ಳಿ |
| 52. | ಕೆ. ಹಾಲಪ್ಪ | 55 | ಕುರುಬ | ಕೃಷಿಕರು | ಗಾದಿಗನೂರು |
| 53. | ಪೊಂಪಣ್ಣ | 58 | ಕುರುಬ | ಕೃಷಿಕರು | ಬೈಲುವದ್ದಿಗೇರಿ |
| 54. | ರಾಮನಾಯ್ಡು | 43 | ಕಮ್ಮ | ಕೃಷಿಕರು | ಸಣಾಪುರ |
| 55. | ಗೋಪಾಲ ಕ್ರಿಷ್ಣ | 40 | ಕಮ್ಮ | ಕೃಷಿಕರು | ದೇವಸಮುದ್ರ |
| 56. | ಡಾ॥ ವೆಂಕಟೇಶ್ | 58 | ನಾಯಕ | ವೈದ್ಯರು | ಕಂಪ್ಲಿ |
| 57. | ಯಂಕಪ್ಪ | 68 | ನಾಯಕ | ಕೃಷಿಕರು | ಕಂಪ್ಲಿ |
| 58. | ಗುಂಡೂರಾವ್ | 46 | ನಾಯಕ | ಶಿಕ್ಷಕರು | ಕಂಪ್ಲಿ |
| 59. | ಮಹದೇವ | 43 | ಗೊಲ್ಲರು | ಕೃಷಿಕರು | ನಂ.10 ಮುದ್ದಾಪುರ |
| 60. | ರುದ್ರಮುನಿ | 51 | ಲಿಂಗಾಯತ | ಕೃಷಿಕರು | ದೇವಸಮುದ್ರ |
| 61. | ಸಾವಿತ್ರಮ್ಮ | 53 | ನಾಯಕ | ಕೃಷಿಕರು | ಉಪ್ಪಾರಹಳ್ಳಿ |
| 62. | ಶಿವಗಂಗಮ್ಮ | 64 | ಲಿಂಗಾಯತ | ಕೃಷಿಕರು | ಕಂಪ್ಲಿ |
| 63. | ನಾರಾಯಣಮ್ಮ | 53 | ಗಂಗಾಮತ | ಕೃಷಿಕರು | ರಾಮಸಾಗರ |
| 64. | ಬಸವರಾಜ | 41 | ಗಂಗಾಮತ | ಕೃಷಿಕರು | ರಾಮಸಾಗರ |
| 65. | ಚಂದ್ರಶೇಖರ | 46 | ಗಂಗಾಮತ | ಪತ್ರಕರ್ತರು | ರಾಮಸಾಗರ |

| | | | | | |
|---|---|---|---|---|---|
| 66. | ಸಿದ್ದೇಶ್ವರ | 48 | ಲಿಂಗಾಯತ | ಕೃಷಿಕರು | ಕಮಲಾಪುರ |
| 67. | ಅಂಬಣ್ಣ | 54 | ನಾಯಕ | ಕೃಷಿಕರು | ಕಂಪ್ಲಿ |
| 68. | ಅಂಬಣ್ಣ | 56 | ಹರಿಜನ | ಶಿಕ್ಷಕರು | ಕಮಲಾಪುರ |
| 69. | ಕ್ರಿಷ್ಣಮೂರ್ತಿ | 66 | ನಾಯಕ | ನಿವೃತ್ತ ಶಿಕ್ಷಕರು | ಕಮಲಾಪುರ |
| 70. | ಗೋವಿಂದರಾಜ | 44 | ನಾಯಕ | ಉದ್ಯೋಗಿ | ಚಿಲಕನಹಟ್ಟಿ |
| 71. | ಬಸವರಾಜ | 42 | ಲಿಂಗಾಯತ | ಉದ್ಯೋಗಿ | ಚಿಲಕನಹಟ್ಟಿ |
| 72. | ವೆಂಕಪ್ಪ | 56 | ಕುರುಬ | ವಕೀಲರು | ಮಲಪನಗುಡಿ |
| 73. | ವಿಜಯಕುಮಾರ್ | 44 | ಲಿಂಗಾಯತ | ವಕೀಲರು | ಹೊಸಪೇಟೆ |
| 74. | ಸಿ. ವೆಂಕಪ್ಪ | 46 | ಚೆಲುವಾದಿ | ವಕೀಲರು | ಹೊಸಪೇಟೆ |
| 75. | ನಾಗೇಂದ್ರಪ್ಪ | 48 | ಚೆಲುವಾದಿ | ಶಿಕ್ಷಕರು | ಹೊಸಪೇಟೆ |
| 76. | ಜಯಪದ್ಮ | 42 | ನಾಯಕ | ಕೃಷಿಕರು | ಹೊಸೂರು |
| 77. | ನಾಗರತ್ನ | 45 | ಉಪ್ಪಾರರು | ಉದ್ಯೋಗಿ | ಹೊಸಪೇಟೆ |
| 78. | ಅಬ್ದುಲ್ ಖಾದರ್ | 54 | ಮುಸ್ಲೀಂ | ಗಣಿಕಾರ್ಮಿಕ | ಕಾರಿಗನೂರು |
| 79. | ಕೆ. ಬಡಾವಲಿ | 42 | ಮುಸ್ಲೀಂ | ಉದ್ಯಮಿ | ಹೊಸಪೇಟೆ |
| 80. | ಇಮಾಂ ಸಾಬ್ | 46 | ಮುಸ್ಲೀಂ | ಉದ್ಯಮಿ | ಹೊಸಪೇಟೆ |
| 81. | ರಾಮಚಂದ್ರಬಾಬು | 43 | ಉಪ್ಪಾರ | ಕಾರ್ಮಿಕ | ಹೊಸಪೇಟೆ |
| 82. | ಸಿದ್ದೇಶ್ವರ | 53 | ಬಣಜಿಗ | ಉದ್ಯೋಗಿ | ಹೊಸಪೇಟೆ |
| 83. | ಕೆ. ರಮೇಶ | 28 | ಬಣಜಿಗ | ವಿದ್ಯಾರ್ಥಿ | ಹೊಸಪೇಟೆ |
| 84. | ಮಲ್ಲಾರಿ ದೀಕ್ಷಿತ್ | 60 | ಬ್ರಾಹ್ಮಣ | ನಿವೃತ್ತ ಶಿಕ್ಷಕರು | ಹೊಸಪೇಟೆ |
| 85. | ಲಕ್ಷ್ಮಿನಾರಾಯಣ ಶೆಟ್ಟಿ | 59 | ಆರ್ಯವೈಶ್ಯ | ನಿವೃತ್ತ ಶಿಕ್ಷಕರು | ಹೊಸಪೇಟೆ |
| 86. | ಪಿ. ಮಲ್ಲಿನಾಥ | 50 | ಲಿಂಗಾಯತ | ಉದ್ಯೋಗಿ | ಹೊಸಪೇಟೆ |
| 87. | ರೇಣುಕಮ್ಮ | 58 | ನಾಯಕ | ಉದ್ಯೋಗಿ | ಹೊಸಪೇಟೆ |
| 88. | ಮೊ.ಬ. ಸೋಮಣ್ಣ | 57 | ವಿಶ್ವಕರ್ಮ | ಶಿಕ್ಷಕರು | ಜಿ. ನಾಗಲಾಪುರ |
| 89. | ಬಸವರಾಜ | 56 | ಲಿಂಗಾಯತ | ಉದ್ಯೋಗಿ | ದೇವಸಮುದ್ರ |
| 90. | ಭೀಮಪ್ಪ | 46 | ಗಂಗಾಮತ | ಕೃಷಿಕರು | ನಲ್ಲಾಪುರ |
| 91. | ರಾಮನಾಯ್ಕ | 53 | ಲಂಬಾಣಿ | ಗಣಿಕಾರ್ಮಿಕ | ಕಲ್ಲಹಳ್ಳಿ |
| 92. | ಭೀಮನಾಯ್ಕ | 41 | ಲಂಬಾಣಿ | ಗಣಿ ಉದ್ಯಮಿ | ಕಲ್ಲಹಳ್ಳಿ |
| 93. | ನಾಗೇಂದ್ರಪ್ಪ | 46 | ಕುರುಬ | ಕೃಷಿಕರು | ರಾಜಾಪುರ |
| 94. | ವ್ಯಾಸನಕೆರೆ ಶ್ರೀನಿವಾಸ | 48 | ನಾಯಕ | ಕೃಷಿಕರು | ವ್ಯಾಸನಕೆರೆ |
| 95. | ಗುಜ್ಜಲ ಶ್ರೀನಿವಾಸ | 46 | ನಾಯಕ | ಕೃಷಿಕರು | ಬೈಲುವದ್ದಿಗೇರಿ |
| 96. | ಮಹೇಶ್ | 26 | ನಾಯಕ | ವಿದ್ಯಾರ್ಥಿ | ಹೊಸಪೇಟೆ |
| 97. | ಮೈದೂರು ಕೇಶವಾಚಾರ್ | 66 | ಬ್ರಾಹ್ಮಣ | ವಕೀಲರು | ಹೊಸಪೇಟೆ |
| 98. | ಹೆಚ್. ವೆಂಕಟರಾವ್ | 68 | ಬ್ರಾಹ್ಮಣ | ವಕೀಲರು | ಹೊಸಪೇಟೆ |
| 99. | ಡಿ. ಶೇಷಾಚಲಂ | 69 | ಬ್ರಾಹ್ಮಣ | ನಿವೃತ್ತ ಉದ್ಯೋಗಿ | ಹೊಸಪೇಟೆ |

| | | | | |
|---|---|---|---|---|
| 100. ಜಿ.ವಿ. ರಮೇಶ | 48 | ಲಿಂಗಾಯತ | ಕಾರ್ಮಿಕ | ಹೊಸಪೇಟೆ |
| 101. ಡಿ. ವೆಂಕಟರಮಣ | 49 | ಗೌಳಿಗರು | ಕಾರ್ಮಿಕ ಮುಖಂಡರು | ಹೊಸಪೇಟೆ |
| 102. ಯು. ಬಸವರಾಜ | 49 | ಲಿಂಗಾಯತ | ರೈತ ಮುಖಂಡರು | ಹೊಸಪೇಟೆ |
| 103. ಕಿಚಿಡಿ ಲಕ್ಷ್ಮಣ | 64 | ನಾಯಕ | ರೈತ ಮುಖಂಡರು | ಕುಡುತಿನಿ |
| 104. ಜೆ. ಸತ್ಯನಾರಾಯಣ | 48 | ನಾಯಕ | ಪತ್ರಕರ್ತರು | ಹೊಸಪೇಟೆ |
| 105. ನಾಗರಾಜ | 42 | ಲಿಂಗಾಯತ | ಪತ್ರಕರ್ತರು | ಹೊಸಪೇಟೆ |
| 106. ಶಿವಶಂಕರ | 46 | ಲಿಂಗಾಯತ | ಪತ್ರಕರ್ತರು | ಮರಿಯಮ್ಮನಹಳ್ಳಿ |
| 107. ವೆಂಕಿ | 42 | ನಾಯಕ | ಪತ್ರಕರ್ತರು | ಹೊಸಪೇಟೆ |
| 108. ಪ್ರಕಾಶ | 56 | ಲಿಂಗಾಯತ | ಪತ್ರಕರ್ತರು | ಹೊಸಪೇಟೆ |
| 109. ಗೋವಿಂದರ ಪರಶುರಾಮ | 42 | ನಾಯಕ | ಯುವ ಮುಖಂಡರು | ಮರಿಯಮ್ಮನಹಳ್ಳಿ |
| 110. ಬಸವರಾಜ | 56 | ಲಿಂಗಾಯತ | ಕೃಷಿಕರು | ನಾಗಲಾಪುರ |
| 111. ಸಿದ್ರಾಮಪ್ಪ | 54 | ಲಿಂಗಾಯತ | ಕೃಷಿಕರು | ನಾಗಲಾಪುರ |
| 112. ರಾಮಪ್ಪ | 48 | ನಾಯಕ | ಕೃಷಿಕರು | ದೇವಸಮುದ್ರ |
| 113. ಕೃಷ್ಣಪ್ಪ | 68 | ನಾಯಕ | ನಿವೃತ್ತ ಕಾರ್ಮಿಕ | ಮರಿಯಮ್ಮನಹಳ್ಳಿ |
| 114. ಯಮುನೇಶ | 58 | ಗಂಗಾಮತ | ಉಪನ್ಯಾಸಕರು | ಹೊಸಪೇಟೆ |
| 115. ಸುದರ್ಶನ | 64 | ಗಂಗಾಮತ | ನಿವೃತ್ತ ಉದ್ಯೋಗಿ | ಹೊಸಪೇಟೆ |
| 116. ಕೆ. ವಸಂತ | 48 | ನಾಯಕ | ಉದ್ಯೋಗಿ | ಹೊಸಪೇಟೆ |
| 117. ಹುಳ್ಳಿ ಉಮೇಶ | 33 | ನಾಯಕ | ಕಾರ್ಮಿಕ ಮುಖಂಡ | ಹೊಸಪೇಟೆ |
| 118. ಸುರೇಶ ಚೌವ್ಹಾಣ್ | 26 | ರಜಪೂತರು | ವಿದ್ಯಾರ್ಥಿ | ಹೊಸಪೇಟೆ |
| 119. ಕೆ. ರಾಮಚಂದ್ರ | 62 | ಕಟಗರು | ನಿವೃತ್ತ ಶಿಕ್ಷಕರು | ಹೊಸಪೇಟೆ |
| 120. ಪರಶುರಾಮ ಕಲಾಲ್ | 48 | ಕಟಗರು | ಪತ್ರಕರ್ತರು | ಮಲಪನಗುಡಿ |
| 121. ಭರಮಲಿಂಗನಗೌಡ | 49 | ಕುರುಬರು | ಉದ್ಯಮಿ | ಹೊಸಪೇಟೆ |
| 122. ಗೋವಿಂದ ಕುಲಕರ್ಣಿ | 46 | ಬ್ರಾಹ್ಮಣ | ಉದ್ಯೋಗಿ | ಹೊಸಪೇಟೆ |
| 123. ಸಣ್ಣ ಭರ್ಮಪ್ಪ | 59 | ಹರಿಜನ | ನಿವೃತ್ತ ಉದ್ಯೋಗಿ | ಹೊಸಪೇಟೆ |
| 124. ವೀರಾ ಸ್ವಾಮಿ | 52 | ಹರಿಜನ | ದಲಿತ ಮುಖಂಡ | ಹೊಸಪೇಟೆ |
| 125. ಸುನೀತಾ ಅಸ್ಪೇಕರ್ | 52 | ಬ್ರಾಹ್ಮಣ | ಉದ್ಯೋಗಿ | ಹೊಸಪೇಟೆ |
| 126. ಲಿಂಗರಾಜ್ | 48 | ದೇವಾಂಗ | ಉದ್ಯೋಗಿ | ಹೊಸಪೇಟೆ |
| 127. ಶ್ರೀನಿವಾಸ | 60 | ಬಣಜಿಗ | ನಿವೃತ್ತ ಶಿಕ್ಷಕರು | ಹೊಸಪೇಟೆ |
| 128. ಶಿವಾನಂದ ಕಿನ್ನಾಳ್ | 54 | ಲಿಂಗಾಯತ | ವಕೀಲರು | ಹೊಸಪೇಟೆ |
| 129. ಸಾಲಿಸಿದ್ದಯ್ಯ | 62 | ಲಿಂಗಾಯತ | ಗಣಿ ಉದ್ಯಮಿ | ಹೊಸಪೇಟೆ |
| 130. ಹೊನ್ನೂರ್ ಸಾಬ್ | 42 | ಪಿಂಜಾರರು | ಕಾರ್ಮಿಕ | ಹೊಸಪೇಟೆ |
| 131. ಬದರಿನಾರಾಯಣ | 48 | ಬ್ರಾಹ್ಮಣ | ಉದ್ಯೋಗಿ | ಟಿ.ಬಿ. ಡ್ಯಾಂ |
| 132. ಪಿ. ಅಬ್ದುಲ್ಲಾ | 49 | ಪಿಂಜಾರ | ಕಲಾವಿದ | ಹೊಸಪೇಟೆ |




# ಹೊಸಪೇಟೆ ತಾಲ್ಲೂಕು ನಕಾಶೆ





384th Birth Anniversary of

Sri Sri Sri JAGADGURU KHADER LINGA SAHEB (SWAMY) On 17th August, 2004

Kowtalam Mdl. Kurnool Dist. (A.P)

ಖಾದರ್ ಲಿಂಗೇಶ್ವರ.



ದರ್ಗಾ ಮತ್ತು ಲಿಂಗಸಾಯ ದೇವಸ್ಥಾನ



ರೇಷ್ಮೆ ಇಲಾಖೆ ನೌಕರರ ಪ್ರತಿಭಟನೆ.



ಆಟೋ ಚಾಲಕರ ಪ್ರತಿಭಟನೆ.




ಕನ್ನಡ ಕಾರ್ಯಕರ್ತರ ಹೋರಾಟ.



ಪ್ರತಿಕೃತಿ ದಹನ.




ಶಿಕ್ಷಣ ಪರಿಸರ ಸಮ್ಮೇಳನ.




ಅಂಗನವಾಡಿ ನೌಕರರ ಪ್ರತಿಭಟನೆ.




ವಿದ್ಯಾರ್ಥಿ ರೈತರ ರಸ್ತೆ ತಡೆ.



ಬೆಂಗಳೂರ ಬೈಕ್ ರ್ಯಾಲಿ.




ರಾಜ್ಯ ಸರಕಾರಿ ನೌಕರರ ಯಟಿಂ ಸಂಘಟನೆ




ನೌಕರರ ಧರಣಿ ಸತ್ಯಾಗ್ರಹ




ಉಚಿತ ಆರೋಗ್ಯ ಶಿಬಿರ
ವಾಲ್ಮೀಕಿ ಯುವಕ ಸಂಘ.




ಕಾಲೇಜಿನ ಸಮಸ್ಯೆಗಳ ಎಸ್. ಎಫ್. ಐ ಪ್ರತಿಭಟನೆ



ರೈತರ ಪ್ರತಿಭಟನೆ



ಪ್ರತಿ ಕೃತಿ ದಹನ.




ಮಾನವ ಸರಪಳಿ.



ವಿದ್ಯಾರ್ಥಿಗಳ ರ್ಯಾಲಿ.




ಎಸ್.ಎಫ್.ಐ ಪ್ರತಿಭಟನೆ.




ಕೋಮು ಸೌಹಾರ್ದತೆ ವಿಚಾರ ಸಂಕಿರಣ




ಪಾರ್ಲಿಮೆಂಟ್ ಚಲೋ



ಪಂಜಿನ ಮೆರವಣಿಗೆ.




ಉಚಿತ ಆರೋಗ್ಯ ಶಿಬಿರ




ಕಾಲೇಜಿನ ಸಮಸ್ಯೆಗಳ ಈಡೇರಿಕೆಗಾಗಿ
ಪ್ರತಿಭಟನೆ

ವಿಜಯನಗರ ಜಿಲ್ಲಾ ಹೋರಾಟ ಸಮಿ

ಹೊಸಪೇಟೆ




ಜಿಲ್ಲಾ ರಚನೆಗಾಗಿ ವಕೀಲರ ಹೋರಾಟ

ವಿಜಯನಗರ ಜಿಲ್ಲಾ ಹೋರಾಟ ಸಮಿತಿ

ಹೊಸಪೇಟೆ




ದೇವದಾಸಿ ಮಹಿಳೆಯರ ಧರಣಿ.